# ಮಹಾರಾಷ್ಟ್ರ-ಇಂಗ್ಲಿಷರ ಆಳಿಕೆ



## ಉಪೋದ್ಘಾತ



ಪ್ರಿಯ ವಿದ್ಯಾರ್ಥಿಗಳೇ! ನೀವು ಒಂದನೆಯ ಇಯತ್ತೆಯಲ್ಲಿ ಮುಸಲ್ಮಾನರ ಆಳಿಕೆಯ ಕಾಲದ ಇತಿಹಾಸವನ್ನು ಕಲಿತಿರುವಿರಿ. ಆ ಕಾಲದ ಮಧ್ಯದ ಸುಮಾರಕ್ಕೆ ಅಂದರೆ ಕ್ರಿ. ಶ. ೧೫ನೆಯ ಶತಕದ ಕೊನೆಗೆ **ಯುರೋಪದವರು ಈ** ದೇಶಕ್ಕೆ ಬರಹತ್ತಿದರು ಅವರಲ್ಲಿ ಎಲ್ಲರಿಗಿಂತ ಮೊದಲು ಬಂದವರು **ಪೋರ್ತುಗೀಜರು.** ಈ ಪೋರ್ತುಗೀಜರು ವಿಜಾಪುರದವರಿಂದ ಗೋವೆಯನ್ನು ಗೆದ್ದುಕೊಂಡದ್ದು, ಜಹಾಂಗೀರ-ಶಹಾಜಹಾನ-ಔರಂಗಜೇಬ ಈ ಬಾದಶಹರು ಪೋರ್ತುಗೀಜರನ್ನು ಬಲಗುಂದಿಸಿದ್ದು. ಇಂಗ್ಲಿಷ ಕಂಪನಿಯವರು ಜಹಾಂಗೀರನ ಅಪ್ಪಣೆಯನ್ನು ಪಡೆದು ತಮ್ಮ ವ್ಯಾಪಾರವನ್ನು ಬಲಿಸಿದ್ದು, ಈ ಸಂಗತಿಗಳನ್ನು ನೀವು ಅರಿತಿರುವಿರಿ. ಅಲ್ಲದೆ, ೧೭ನೆಯ ಶತಕದ ಆರಂಭದ ಸುಮಾರಿಗೆ ಅಹಮ್ಮದನಗರ ಮತ್ತು ವಿಜಾಪುರ ಈ ರಾಜ್ಯಗಳಲ್ಲಿ **ಮಾಲೋಜಿ, ಶಹಾಜಿ** ಮೊದಲಾದ ಮರಾಠ ಸರದಾರರು ಹೆಸರಾದರು. ಮುಂದೆ **ಶಿವಾಜಿ ಮಹಾರಾಜನು** ಮಾವಳೆ ಜನರನ್ನು ಕೂಡಿಕೊಂಡು ವಿಜಾಪುರದವರಿಗೂ ಮೊಗಲರಿಗೂ ಸೊಪ್ಪುಹಾಕದೆ, ಹೆಚ್ಚು ಹೆಚ್ಚು ಪ್ರಬಲನಾದನು; ಮತ್ತು ಕಡೆಗೆ ಔರಂಗಜೇಬನಂಥ ಬಲಾಢ್ಯನಾದ ಬಾದಶಹನು ವಿರೋಧಿಯಾಗಿರುವಾಗಲೇ ಇವನು ಮಹಾರಾಷ್ಟ್ರದ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದನು. ಮುಂದೆ ಸಂಭಾಜಿಯ ಕೊಲೆಯಾದ ಮೇಲೆಯೂ ಮರಾಠರು ಹಿಂಜರಿಯದೆ ಅತಿ ಸಾಹಸದಿಂದ ತಮ್ಮ ರಾಜ್ಯವನ್ನು ಕಾದುಕೊಂಡರು; ಎಂಬ ಸಂಗತಿಗಳೂ ನಿಮಗೆ ಗೊತ್ತಾಗಿರುವವು.

ಇನ್ನು ಮಹಾರಾಷ್ಟ್ರರು ಉದಯಹೊಂದಿದ ಮತ್ತು ಸ್ವರಾಜ್ಯವನ್ನು ಸ್ಥಾಪಿಸಿದ ಬಗೆಯು ಯಾವದು? ಔರಂಗಜೇಬನ ತರುವಾಯ ಮೊಗಲ ಸಾಮ್ರಾಜ್ಯದ ಸ್ಥಿತಿಯು ಹೇಗಾಯಿತು? ಪೇಶವೆಯರು ಮಹಾರಾಷ್ಟ್ರ ರಾಜ್ಯವನ್ನು ಹೇಗೆ ಹಬ್ಬಿಸಿದರು? ಯುರೋಪದ ಯಾವ ಯಾವ ದೇಶದವರು ಹಿಂದುಸ್ಥಾನಕ್ಕೆ ಬಂದರು; ಅವರು ಸಮುದ್ರಮಾರ್ಗವಾಗಿಯೆ ಏಕೆ ಬಂದರು? ತಮ್ಮ ವ್ಯಾಪಾರವನ್ನು ಹೇಗೆ ಸಾಗಿಸಿದರು? **ಫ್ರೇಂಚ-ಡಚ್ಚ** ಕಂಪನಿಗಳನ್ನು ಮೂಲೆಗೊತ್ತಿ, **ಇಂಗ್ಲಿಷ** ಕಂಪನಿಯವರು ವ್ಯಾಪಾರದಲ್ಲಿ ಹೇಗೆ ಮುಂದುವರಿದರು? ಮತ್ತು ವ್ಯಾಪಾರವನ್ನು ಮಾಡುತ್ತಿರುವ ಅವರು ರಾಜ್ಯವನ್ನು ಹೇಗೆ ಗಳಿಸಿದರು? ಕೊನೆಗೆ ಈ ಕಂಪನಿಯವರ ರಾಜ್ಯವನ್ನು ಇಂಗ್ಲಂಡದ ಸರಕಾರದವರು ತಮ್ಮ ವಶಕ್ಕೆ ತೆಗೆದುಕೊಂಡು ಯಾವ ರೀತಿಯಿಂದ ಆಳುತ್ತಲಿರುವರು? ಇಂಗ್ಲಿಷರ ಆಳಿಕೆಯಿಂದ ನಮ್ಮ ದೇಶದ ಮೇಲೆ ಏನೇನು ಪರಿಣಾಮಗಳಾದವು? ಮುಂತಾದ ಮುಖ್ಯ ಪ್ರಶ್ನೆಗಳ ಉತ್ತರಗಳಿಂದೊಡಗೂಡಿದ ಇದುವರೆಗಿನ ಇತಿಹಾಸವನ್ನು ನೀವು ಈ ಇಯತ್ತೆಯಲ್ಲಿ ಕಲಿಯುವದಿದೆ.



# ಅನುಕ್ರಮಣಿಕೆ

## ಮೊದಲನೆಯ ಭಾಗ

**ಮಧ್ಯಕಾಲ.** (ಕ್ರಿ. ಶ ೧೫೦೦ ೧೭೬೧)



## ಎರಡನೆಯ ಭಾಗ

**ಅರ್ವಾಚೀನಕಾಲ.** (ಕ್ರಿ ಶ ೧೭೬೧–೧೯೪೨)

# ಮಹಾರಾಷ್ಟ್ರ— ಇಂಗ್ಲಿಷರ ಆಳಿಕೆ

## ಮೊದಲನೆಯ ಭಾಗ

### ಮಧ್ಯಕಾಲ

ಕ್ರಿ. ಶ. ೧೫೦೦ - ೧೭೬೧

## ೧ನೆಯ ಪಾಠ

### ಮರಾಠರ ಉದಯ

೧. **ಮರಾಠರ ಪೂರ್ವೇತಿಹಾಸ:--** ಬೌದ್ಧಧರ್ಮದ ಪ್ರಸಾರವಾಗ ಹತ್ತಿದ ಕಾಲದಲ್ಲಿ ಮಗಧ ಸಾಮ್ರಾಜ್ಯದ ರಾಜರು ಕೂಡ ಆ ಧರ್ಮವನ್ನು ಎತ್ತಿಹಿಡಿದರು. ಆಗ ಆ ಧರ್ಮವನ್ನು ಸೇರಲೊಲ್ಲದ ಬಹಳ ಜನರು ಮಗಧ ದೇಶವನ್ನು ಬಿಟ್ಟು ಬೇರೆ ಬೇರೆ ಪ್ರಾಂತಗಳಿಗೆ ಹೋದರು. ಅವರಲ್ಲಿಯ ಕೆಲವರು ಕ್ರಿ. ಶ. ೩ನೆಯ ೪ನೆಯ ಶತಕದ ಸುಮಾರಿಗೆ ದಕ್ಷಿಣಕ್ಕೆ ಬಂದು ನರ್ಮದಾ—ಗೋದಾವರಿಗಳ ಮಧ್ಯ ಪ್ರದೇಶದಲ್ಲಿ ನೆಲೆಗೊಂಡು ನಿಂತರು. ಈ ಜನರು ಮಗಧ ಸಾಮ್ರಾಜ್ಯದ ಅಭಿಮಾನಿಗಳಿದ್ದುದರಿಂದ ಮಹಾರಾಜಿಕರು ಅಥವಾ ಮಹಾರಾಷ್ಟ್ರಿಕರು (**ಮರಾಠರು**) ಎಂದೆನಿಸಿದರು. ಅವರು ನೆಲೆಗೊಂಡ ದೇಶಕ್ಕೆ **ಮಹಾರಾಷ್ಟ್ರ**ವೆಂಬ ಹೆಸರುಂಟಾಯಿತು.

ಈ ಮರಾಠರು ಊರುಗಳ ಪಟ್ಟಕೀಲ (**ಪಾಟೀಲ ಗೌಡ**)ರಾಗಿ ಅರಸರಾಗಿರುವವರ ಊಳಿಗವನ್ನು ಮಾಡಿಕೊಂಡಿದ್ದರು. ಮುಂದೆ ಚಾಲುಕ್ಯ. ರಾಷ್ಟ್ರ-

ಕೊಟ್ಟ, ದೇವಗಿರಿಯ ಯಾದವ ಈ ಅರಸರ ಕಾಲದಲ್ಲಿ ಎಷ್ಟೋ **ಕ್ಷತ್ರಿಯರು** (ಮರಾಠರು) ದಕ್ಷಿಣಕ್ಕೆ ಬಂದು **ದೇಶಮುಖಿ** (ನಾಡಗೌಡಿಕೆ)ಯ ಅಧಿಕಾರವನ್ನು ಪಡೆದು ತಮ್ಮ ಸೈನ್ಯದೊಂದಿಗೆ ಅರಸರ ಸಹಾಯಕರಾಗುತ್ತಿದ್ದರು.

೨. **ಮರಾಠರಲ್ಲಿ ಉಂಟಾದ ಜಾಗ್ರತೆ**:— ಕ್ರಿ ಶ ೧೬ ಮತ್ತು ೧೭ ಈ ಎರಡು ಶತಮಾನಗಳಲ್ಲಿ ಮಹಾರಾಷ್ಟ್ರದಲ್ಲಿ ಆಗಿಹೋದ ಮುಕುಂದರಾಜ, ಏಕನಾಥ, ಜ್ಞಾನದೇವ, ತುಕಾರಾಮ, ರಾಮದಾಸ ಮೊದಲಾದ ಸತ್ಪುರುಷರು ತಮ್ಮ ಪವಿತ್ರವಾದ ಆಚರಣೆಯಿಂದಲೂ ಸದುಪದೇಶದಿಂದಲೂ ಜನರಲ್ಲಿ ಸ್ವಧರ್ಮ, ಸ್ವದೇಶ ಇವುಗಳ ವಿಷಯವಾಗಿ ಜಾಗ್ರತೆಯನ್ನುಂಟು ಮಾಡಿದರು ಅವರ ಉಪದೇಶದ ಪರಿಣಾಮವು ಮರಾಠರ ಮನಸ್ಸಿನ ಮೇಲಾಗಿ ಅವರು ಆ ಕಾಲದಲ್ಲಿದ್ದ ಮುಸಲ್ಮಾನ ಬಾದಶಹರ ಅದೂರ ದೃಷ್ಟಿಯ ಆಳಿಕೆಯಿಂದ ಸ್ವತಂತ್ರರಾಗಲು ಪ್ರಯತ್ನಿಸಹತ್ತಿದರು. ಕಡೆಗೆ ಇತಿಹಾಸ ಪ್ರಸಿದ್ಧನಾದ ಭೋಸಲೆ ಮನೆತನದ **ಶಿವಾಜಿ**ಯಂತಹ ಮುಂದಾಳು ದೊರೆತ ಕೂಡಲೆ ಮರಾಠರು ತನು-ಮನ ಧನಗಳಿಂದ ಆತನಿಗೆ ನೆರವಾಗಿ ಸ್ವತಂತ್ರನಾದ ರಾಜ್ಯವನ್ನು ಸ್ಥಾಪಿಸಿದರು

೩. **ಭೋಸಲೆ ಮನೆತನದ ಉದಯ**.— ಚಿತ್ತೂರ **ಲಕ್ಷ್ಮಣಸಿಂಹನ** ಮೊಮ್ಮಗನಾದ **ಸುಜನಸಿಂಹನು** ಚಿತ್ತೂರನ್ನು ಬಿಟ್ಟು ಹೊರಟನು ಈ ವಂಶದ **ದೇವರಾಜನೆಂಬವನು** ಕ್ರಿ ಶ ೧೪೧೫ ರ ಸುಮಾರಿಗೆ ದಕ್ಷಿಣಕ್ಕೆ ಬಂದನು ಮುಂದೆ **ಭೋಸಾಜಿ** ಎಂಬ ಪುರುಷನಿಂದ ಈ ಮನೆತನಕ್ಕೆ **ಭೋಸಲೆ** ಎಂಬ ಹೆಸರುಂಟಾಯಿತು ಈ ಭೋಸಲೆ ಮನೆತನದವರು **ಹಿಂಗಣಿ** ಮೊದಲಾದ ಗ್ರಾಮಗಳ ಗೌಡಿಕೆಯನ್ನು ಮಾಡಿಕೊಂಡಿದ್ದರು. ಕ್ರಿ ಶ. ೧೫೫೦ ರಲ್ಲಿ ಹುಟ್ಟಿದ **ಮಾಲೋಜಿಯು** ದೊಡ್ಡ ಜಹಗೀರನ್ನು ಸಂಪಾದಿಸಿ, ಶೂರ ಸರದಾರನೆಂದು ಹೆಸರಾದನು. ಈ ಮಾಲೋಜಿಯ ಮಗನೇ **ಶಹಾಜಿಯು** ನಿಜಾಮಶಾಹಿಯಲ್ಲಿಯ ಶೂರ ಸರದಾರನಾದ **ಲಖೂಜಿ ಜಾಧವರಾಯನು** ತನ್ನ ಮಗಳಾದ **ಜಿಜಾಬಾಯಿ**ಯನ್ನು ಶಹಾಜಿಗೆ ಕೊಟ್ಟಿದ್ದನು ಈ ಶಹಾಜಿಯ ಮಗನೇ ಸ್ವರಾಜ್ಯ ಸಂಸ್ಥಾಪಕನಾದ **ಶಿವಾಜಿ**ಯು. ಮುಂದೆ ಶಹಾಜಿಯಾದರೂ ನಿಜಾಮಶಾಹಿಯಲ್ಲಿಯೇ ಸರದಾರನಾದನು.



ಶಿವಾಜಿ ಮಹಾರಾಜ

ಇವನು ಅಲ್ಲಿಯ ವಜೀರನಾದ **ಮಲಿಕಂಬರನ** ಕೈಯಲ್ಲಿ ನುರಿತು ರಾಜ್ಯಕಾರಭಾರದ ಅನುಭವವನ್ನು ಪಡೆದನು. ಕ್ರಿ. ಶ ೧೬೩೭ ರಲ್ಲಿ ನಿಜಾಮಶಾಹಿಯು ಮುಳುಗಿದ ಬಳಿಕ ವಿಜಾಪುರದವರು ಇವನನ್ನು ಕರೆಯಿಸಿ ಕೊಂಡರು ಅಲ್ಲಿರುವಾಗ ಇವನು ಕರ್ನಾಟಕ ಪ್ರಾಂತವನ್ನು ಗೆದ್ದು ಆದಿಲಶಾಹಿಯ ಆಧಾರನೆನಿಸಿದನು. ಶಹಾಜಿ ಮೊದಲಾದವರ ಪರಾಕ್ರಮವನ್ನು ಕಂಡು ಸ್ವತಂತ್ರ ರಾಜ್ಯವನ್ನು ಸ್ಥಾಪಿಸುವದು ಶಕ್ಯವಿದೆಯೆಂಬ ಆತ್ಮ ವಿಶ್ವಾಸವು ಮರಾಠರಲ್ಲಿ ಉಂಟಾಯಿತು

೪. **ಶಿವಾಜಿಯ ಬಾಲ್ಯ ಮತ್ತು ಶಿಕ್ಷಣ** — ಇವನು ಕ್ರಿ ಶ ೧೬೩೦ನೆಯ ಇಸ್ವಿ ಫೆಬ್ರುವರಿ ೧೯ನೆಯ ತಾರೀಖಿನ ದಿವಸ **ಶಿವನೇರಿ ಕೋಟೆ**ಯಲ್ಲಿ ಹುಟ್ಟಿದನು ಶಹಾಜಿಯು ಆದಿಲಶಾಹಿಯ ಸರದಾರನಾದ ಬಳಿಕ ಜಿಜಾಬಾಯಿಯನ್ನೂ ಶಿವಾಜಿಯನ್ನೂ ವಿಜಾಪೂರಕ್ಕೆ ಕರಯಿಸಿಕೊಂಡನು. ಧೀರಕನ್ಯೆಯೂ ಪತಿವ್ರತೆಯೂ ಆದ ಜಿಜಾಬಾಯಿಯು **ರಾಮಾಯಣ ಮಹಾಭಾರತ**ಗಳಲ್ಲಿಯ ವೀರರ ಮತ್ತು ಸತ್ಪುರುಷರ ಕಥೆಗಳನ್ನು ಮಗನಿಗೆ ಹೇಳಿ, ಆತನಲ್ಲಿ ವೀರವೃತ್ತಿಯನ್ನೂ ನೀತಿಧೈರ್ಯವನ್ನೂ ಉಂಟುಮಾಡಲು ಯತ್ನಿಸಿದಳು ಮುಂದೆ ಪುಣೆಗೆ ಬಂದಾಗ ಶಹಾಜಿಯ ಕಾರಭಾರಿಯಾದ ದಾದೋಜಿ ಕೊಂಡದೇವನು ಶಿವಾಜಿಗೆ ಗುರುವಾಗಿ ಯುದ್ಧವಿದ್ಯೆಗಳನ್ನು ಕಲಿಸಿದನು ಮತ್ತು ರಾಜಕಾರಭಾರದ ಪ್ರತ್ಯಕ್ಷ ಶಿಕ್ಷಣವನ್ನು ಕೊಟ್ಟನು.

೫. **ರಾಜ್ಯಸ್ಥಾಪನೆಯ ಸಿದ್ಧತೆ** :— ಶಿವಾಜಿಯ ರಾಜ್ಯಸ್ಥಾಪನೆಯ ಉದ್ದೇಶವನ್ನು ಸಾಧಿಸಲು **ಏಸಾಜಿ ಕಂಕ, ತಾನಾಜಿ ಮಾಲಸುರೆ** ಮೊದಲಾದ ಮುಖ್ಯರು ಸಹಾಯಕರಾದರು ಶಿವಾಜಿಯು ಮಾಳವ ಪ್ರದೇಶವನ್ನು ನಿರೀಕ್ಷಿಸಿ ಆಯಕಟ್ಟಿನ ಮೆಟ್ಟುಗಳನ್ನು ಗೊತ್ತುಮಾಡಿಕೊಂಡನು

ವಶಮಾಡಿಕೊಂಡ **ತೋರಣ ಕೋಟೆ**ಯನ್ನು ಸರಿಪಡಿಸಿಕೊಳ್ಳುತ್ತಿರಲು ಹೊನ್ನುಗಳ ರಾಶಿಯೊಂದು ಅವನ ಕೈಗೆ ಸಿಕ್ಕಿತು. ಆ ಹಣದಿಂದ **ರಾಯಗಡ** ಕೋಟೆಯನ್ನು ಕ್ರಿ. ಶ **೧೬೪೬**ರಲ್ಲಿ ಕಟ್ಟಿಸಿದನು. ಮರುವರ್ಷ ದಾದಾಜಿಯು ತೀರಿಕೊಳ್ಳಲು ಪುಣೆಯ ಜಹಗೀರಿಯ ಕಾರಭಾರವನ್ನು ತಾನೇ ಸಾಗಿಸ ಹತ್ತಿದನು ಮುಂದೆ ಚಾಕಣ, ಕೊಂಡಾಣೆ (ಸಿಂಹಗಡ), ಪುರಂಧರ, ಕಲ್ಯಾಣ ರಾಯಗಡ, ಲೋಹಗಡ ಮುಂತಾದ ಕೋಟೆಗಳನ್ನೂ ರಾಜಾಪುರ ಬಂದರ ವನ್ನೂ ತೆಗೆದುಕೊಂಡನು ಕಲ್ಯಾಣದ ಸುಭೇದಾರನಿಂದ ವಿಜಾಪುರದ ಕಡೆಗೆ ಸಾಗಿಸ್ಪ ಬೊಕ್ಕಸವೂ ಶಿವಾಜಿಯ ಕೈವಶವಾಯಿತು. ಗಟ್ಟಿಗರೂ ಗನೀಮಿ ಯುದ್ಧದಲ್ಲಿ ಬಲ್ಲಿದರೂ ಆದ **ಮಾನಳೆ** ಜನರ ಒಲವಿನ ದಂಡು ಸಿದ್ಧ ವಾಯಿತು. ಆಗ **ಶ್ರೀ ಸಮರ್ಥ ರಾಮದಾಸ ಸ್ವಾಮಿಗಳು** ಧರ್ಮ ಜಾಗ್ರತ ಯನ್ನುಂಟು ಮಾಡುತ್ತ ಮಹಾರಾಷ್ಟ್ರದಲ್ಲಿ ಸಂಚರಿಸುತ್ತಿದ್ದರು ಶಿವಾಜಿಯು ಅವರ ಶಿಷ್ಯನಾದನು ರಾಜಕಾರಣ ಮೊದಲಾದ ಪ್ರಸಂಗಗಳಲ್ಲಿ ಅವರ ಸಹಾ ಯವು ಶಿವಾಜಿಗೆ ಬಹಳವಾಯಿತು

**೬ ಶಿವಾಜಿ-ಆದಿಲಶಾಹಿಯವರ ಮೊದಲನೆಯ ಯುದ್ಧ :— ಕ್ರಿ ಶ. ೧೬೫೯-೬೨.** ಶಿವಾಜಿಯು ವಿಜಾಪುರದ ಸರದಾರನಾದ ಜಾವಳಿಯ **ಚಂದ್ರರಾವ ಮೋರೆ** ಎಂಬವನನ್ನು ಸೋಲಿಸಿ ಜಾವಳಿಯನ್ನು ವಶಮಾಡಿ ಕೊಂಡು ನೆರೆಯಲ್ಲಿಯೇ **ಪ್ರತಾಪಗಡ** ಎಂಬ ಕೋಟೆಯನ್ನು ಕಟ್ಟಿಸಿದನು. ಈ ಸುದ್ದಿಯನ್ನು ಕೇಳಿ ಆದಿಲಶಹನು **ಅಫಜಲಖಾನನೆಂಬ** ಗಟ್ಟಿಗನಾದ ಸರದಾರನನ್ನು ದೊಡ್ಡ ಸೈನ್ಯದೊಂದಿಗೆ ಶಿವಾಜಿಯ ಮೇಲೆ ಕಳುಹಿದನು. ಶಿವಾಜಿಯು ಒಪ್ಪಂದ ಮಾಡಿಕೊಳ್ಳಲು ಒಪ್ಪಿದನು. ಪ್ರತಾಪಗಡದ ಕೆಳಿಯಲ್ಲಿ ಸಿದ್ಧಗೊಳಿಸಿದ ಮಂಟಪದಲ್ಲಿ ಪರಸ್ಪರರ ಭೆಟ್ಟಿಯ ಕಾಲಕ್ಕೆ ಆತ್ಮರಕ್ಷಣೆಯು ಸಲುವಾಗಿ ಶಿವಾಜಿಯು ಅಫಜಲಖಾನನನ್ನು ಕೊಂದನು

ಮರುದಿವಸ ಶಿವಾಜಿಯು ಪನ್ಹಾಳಗಡವನ್ನು ವಶಮಾಡಿಕೊಂಡನು. **ನೇತಾಜಿಪಾಲಕರನು** ವಿಜಾಪುರದ ಸೀಮೆಯನ್ನು ಹೊಕ್ಕು ಬಂದರಹಿಂದೊಂದು ಊರುಗಳನ್ನು ಹಿಡಕೊಳ್ಳಲಾರಂಭಿಸಿದನು. ಆಗ ಸಿದ್ದೀ **ಜೋಹರ** ಎಂಬ ಸರದಾರನು ಪನ್ಹಾಳಗಡದ ಕೋಟೆಗೆ ಮುತ್ತಿಗೆ ಹಾಕಿದನು. ಆಗ ಶಿವಾಜಿಯು

ಪನ್ಹಾಳಗಡದಲ್ಲಿದ್ದನು. ಇದೇ ಹೊತ್ತಿನಲ್ಲಿ **ಶಾಹಿಸ್ತೆಖಾನನು** ದಕ್ಷಿಣಕ್ಕೆ ದಂಡೆತ್ತಿಬಂದು ಪುಣೆಯನ್ನು ಕೈವಶಮಾಡಿಕೊಂಡು ಶಿವಾಜಿಯ ಅರಮನೆಯಲ್ಲಿಯೇ ಇರಹತ್ತಿದನು. ಒಂದೇ ಸಮಯದಲ್ಲಿ ವಿಜಾಪುರದವರೊಡನೆಯೂ ಮೊಗಲರೊಡನೆಯೂ ಕಾದುವ ಪ್ರಸಂಗವಿದ್ದದರಿಂದ ಶಿವಾಜಿಯು ಜೋಹರನ ಕೂಡ ಒಪ್ಪಂದದ ಪ್ರಸ್ತಾಪವನ್ನು ನಡೆಯಿಸಿದನು. ಶಿವಾಜಿಯು ಶರಣು ಬರುವನೆಂದು ತಿಳಿದು ಜೋಹರನು ಮುತ್ತಿಗೆಯನ್ನು ಸಡಿಲಿಸಿದನು. ಮಧ್ಯ ರಾತ್ರಿಯ ಹೊತ್ತುಸಾಧಿಸಿ ಆಯ್ದುಕೊಂಡ ಸರದಾರರೊಂದಿಗೆ ಅಲ್ಲಿಂದ ಜಾರಿ ಹೊರಟವನು ವಿಶಾಲಗಡದ ಕಡೆಗೆ ಸಾಗಿದನು. ಈ ಸುದ್ದಿಯನ್ನು ಕೇಳಿ ಜೋಹರನು ವಿಶಾಲಗಡದ ಮೇಲೆ ಸೈನ್ಯವನ್ನು ಕಳುಹಿದನು. ಈ ಸೈನ್ಯವು ರಾಂಗಣೆ ಕಿಂಡಿಯಿಂದ ಹಾಯ್ದು ಹೋಗುವಾಗ್ಗೆ **ಬಾಜಿ ಘೋರಪಡೆ** ಎಂಬ ಸರದಾರನು ಅಡ್ಡಗಟ್ಟಿ, ಶಿವಾಜಿಯು ವಿಶಾಲಗಡಕ್ಕೆ ಸುರಕ್ಷಿತವಾಗಿ ಮುಟ್ಟುವವರೆಗೆ ಮುಸಲ್ಮಾನರ ಸೈನ್ಯವನ್ನು ೩ ಸಾರೆ ಹಿಂದಕ್ಕಟ್ಟಿದನು.೪ನೆಯ ಸಾರೆ ಗುಂಡುತಾಕಿ ಮರಣೋನ್ಮುಖನಾದನು. ಇತ್ತ ಶಿವಾಜಿಯು ವಿಶಾಲಗಡಕ್ಕೆ ಸುರಕ್ಷಿತವಾಗಿ ಮುಟ್ಟಿದ ಗುರುತಿಗಾಗಿ ಹಾರಿಸಿದ ತೋಪುಗಳ ಧ್ವನಿಯು ಕೇಳಿಸಿತು. ಆಗ "ಇನ್ನು ನಾನು ಸಮಾಧಾನದಿಂದ ಸಾಯುವೆನು" ಎಂದು ಉಸುರಿ ಬಾಜಿಯು ಅಸುದೊರೆದನು! ಶಿವಾಜಿಯು ವಿಶಾಲಗಡದಿಂದ ರಾಯಗಡಕ್ಕೆ ಹೋದ ಬಳಿಕ ಪನ್ಹಾಳಗಡವನ್ನು ಜೋಹಾರನ ವಶಕ್ಕೆ ಕೊಟ್ಟು ವಿಜಾಪುರದವರೊಡನೆ ಒಪ್ಪಂದ ಮಾಡಿಕೊಂಡನು.

೭. **ಮೊಗಲರ ಕೂಡ ಆದ ೧ನೆಯ ಯುದ್ಧ:**— ವಿಜಾಪುರದವರೊಡನೆ ಒಪ್ಪಂದವಾದ ಬಳಿಕ ಶಿವಾಜಿಯು ತಕ್ಕಷ್ಟು ಸಹಾಯಕರೊಂದಿಗೆ ಒಂದು ಮೆರವಣಿಗೆಯ ಕೂಡ ಪುಣೆ ಪಟ್ಟಣವನ್ನು ಪ್ರವೇಶಿಸಿದನು. ರಾತ್ರಿಯಾಗಲು ಶಿವಾಜಿಯು ಅರಮನೆಯ ಗೋಡೆಯನ್ನು ಒಡೆದು **ಶಾಹಿಸ್ತೇಖಾನನು** ಇದ್ದ ಕೋಣೆಯನ್ನು ಹೊಕ್ಕನು. ಖಾನನು ಕಿಡಿಕಿಯಿಂದ ಪಾರಾಗಿ ಹೋಗುವಷ್ಟರಲ್ಲಿ ಶಿವಾಜಿಯ ಹೊಡೆತದಿಂದ ಅವನ ಒಂದು ಕೈಯ ಬೆರಳುಗಳು ಕತ್ತರಿಸಿದವು. ಖಾನನ ಮಗನು ಶಿವಾಜಿಯ ಕೈಗೆ ಸಿಕ್ಕು ಹತನಾದನು. ಬಳಿಕ ಶಿವಾಜಿಯು ಪಟ್ಟಣದಿಂದ ಹೊರಟು ಕತ್ತಲಲ್ಲಿಯೇ ಸಿಂಹ

ಗಡದ ಕಡೆಗೆ ನಡೆದನು. ಷಾಹಿಸ್ತೇಖಾನನು ಪುಣೆಯನ್ನು ಬಿಟ್ಟು ಔರಂಗಾಬಾದಕ್ಕೆ ಹೋದನು.

೮. **ಸುರತವನ್ನು ಸುಲಿದದ್ದು**:— ಬಳಿಕ ಶಿವಾಜಿಯು ಸುರತದ ಮೇಲೆ ಸಾಗಿದನು. ಅಲ್ಲಿಯ ಮೊಗಲ ಅಧಿಕಾರಿಯು ಶಿವಾಜಿಯನ್ನು ತಡೆಯಲಿಲ್ಲ. ಪಟ್ಟಣದಲ್ಲಿಯೇ ಬೇಕಾದಷ್ಟು ಸಂಪತ್ತು ದೊರೆತದ್ದರಿಂದ ಶಿವಾಜಿಯು ಇಂಗ್ಲೀಷರ ಗೋಜಿಗೆ ಹೋಗಲಿಲ್ಲ. ಆವನು ಮಕ್ಕೆಯ ಯಾತ್ರಿಕರಿಂದ ಕರವನ್ನೆತ್ತಿಕೊಂಡು ಹಿಂದಿರುಗಿದನು.

೯. **ಮೊಗಲರ ಕೂಡ ಆದ ೨ನೆಯ ಯುದ್ಧ**:— ಶಿವಾಜಿಯು ಸುರತವನ್ನು ಸುಲಿದ ಸುದ್ದಿಯನ್ನು ಕೇಳಿ ಔರಂಗಜೇಬನು **ಜಯಸಿಂಗ-ದಿಲೇರಖಾನ**ರನ್ನು ದಕ್ಷಿಣಕ್ಕೆ ಕಳುಹಿದನು. ಕ್ರಿ. ಶ. **೧೬೬೫.** ಮೊಗಲ ಸೈನ್ಯವು ಪುರಂದರಗಡವನ್ನು ಮುತ್ತಿ ವಶಪಡಿಸಿಕೊಂಡಿತು. ಆಗ ಶಿವಾಜಿಯು ಉಪಾಯಗಾಣದೆ **೨೩** ಕೋಟೆಗಳನ್ನು ಕೊಡಲೊಪ್ಪಿದ್ದಲ್ಲದೆ ಪನ್ಹಾಳಗಡವನ್ನು ತನ್ನ ವಶಕ್ಕಿಟ್ಟುಕೊಳ್ಳಲು ಒಪ್ಪಿಗೆಯನ್ನಿತ್ತರೆ **೨೪** ಲಕ್ಷ ಹೊನ್ನುಗಳನ್ನು ಕೊಡಲು ಸಿದ್ಧನಾದನು. ಜಯಶಿಂಗನು ಶಿವಾಜಿಯೊಡನೆ ಒಪ್ಪಂದ ಮಾಡಿಕೊಂಡನು. ಮೊಗಲರೂ ಮರಾಠರೂ ಕೂಡಿ ವಿಜಾಪುರದವರ ವಶದಲ್ಲಿದ್ದ ಪನ್ಹಾಳಗಡವನ್ನು ಮುತ್ತಿ ವಶಮಾಡಿಕೊಂಡರು.

೧೦. **ಶಿವಾಜಿಯು ಮೊಗಲರ ದರ್ಬಾರಿಗೆ ಹೋಗಿ ಪಾರಾಗಿ ಬಂದದ್ದು**:- ಸರದಾರ ಜಯಸಿಂಗನ ಹೇಳಿಕೆಯಂತೆ ಶಿವಾಜಿಯು ಔರಂಗಜೇಬ ಬಾದಷಾಹನ ಭೆಟ್ಟಿಗೆ ಹೋಗಬೇಕೆಂದು ಗೊತ್ತಾಯಿತು. ಆಗ ಶಿವಾಜಿಯು ತನ್ನ ಮಗ ಸಂಭಾಜಿಯನ್ನೂ ಉಳಿದ ಕೆಲವರನ್ನೂ ಕರೆದುಕೊಂಡು ಆಗ್ರಾಕ್ಕೆ ಹೋದನು. ಕ್ರಿ. ಶ. **೧೬೬೬.** ಶಿವಾಜಿಯು ಜಯಸಿಂಗನ ಮಗನಾದ ರಾಮಸಿಂಗನೊಡನೆ ಸಭೆಗೆ ಹೋಗಿ ಕಾಣಿಕೆಯನ್ನು ಕೊಟ್ಟು ಬಾದಷಾಹನಿಗೆ ಸಲಾಮ್ ಮಾಡಲು ಆವನು ಶಿವಾಜಿಯನ್ನು ೩ನೆಯ ತರಗತಿಯ ಸರದಾರರಲ್ಲಿ ಕುಳ್ಳಿರಿಸ ಹೇಳಿದನು. ಆಗ ಶಿವಾಜಿಯು ಸಿಟ್ಟಿನಿಂದ "ನಾನು ಹೀಗೆ ಅಪಮಾನ ಹೊಂದಲು ಇಲ್ಲಿಗೆ ಬಂದವನಲ್ಲ" ಎಂದು ರಾಮಸಿಂಗನಿಗೆ

ಬಹಿರಂಗವಾಗಿ ಹೇಳಿದನು. ತರುವಾಯ ಶಿವಾಜಿಯ ಸಂತಾಪವು ತಲೆಗೇರಿ ಆವನು ಎಚ್ಚರವಪ್ಪಿದನು. ರಾಮಸಿಂಗನು ಶಿವಾಜಿಯನ್ನು ಬಿಡಾರಕ್ಕೆ ಕರೆ ದೊಯ್ದನು. ಶಿವಾಜಿಯ ಮನಸ್ಸಿನ ಸ್ಥಿತಿಯನ್ನು ತಿಳಿದ ಬಾದಷಾಹನು ಅವ ನಿಳಿದ ಮನೆಯ ಮೇಲೆ ಬಿಗುವಾದ ಕಾವಲನ್ನು ಇಟ್ಟನು. ಕೆಲವು ದಿವಸ ಗಳಾದ ಬಳಿಕ ಶಿವಾಜಿಯು ಬಾದಷಾಹನ ಅಪ್ಪಣೆಯಿಂದ ತನ್ನ ಕೂಡ ಬಂದವ ರಲ್ಲಿ ಹೆಚ್ಚಿನ ಜನರನ್ನು ದಕ್ಷಿಣಕ್ಕೆ ಕಳುಹಿದನು. ಅಲ್ಲಿ ಇರುವಾಗ ಸರದಾರರಿಗೂ ಬ್ರಾಹ್ಮಣರಿಗೂ ಮೇಲಿಂದ ಮೇಲೆ ಮಿಠಾಯಿಗಳನ್ನು ಕಳುಹುವ ಪದ್ಧತಿಯು ಶಿವಾಜಿಯದಿತ್ತು. ಮಿಠಾಯಿಗಳಿಂದ ತುಂಬಿದ ಬುಟ್ಟಿಗಳನ್ನು ಕಾವಲಗಾರರು ಮೊದಮೊದಲು ನೋಡಿ ನೋಡಿ ಬಿಡುತ್ತಿದ್ದರು. ಮುಂದೆ ಅವರು ಸಂಶಯ ಗೊಳ್ಳದೆ ಅವನ್ನು ನೋಡದೆ ಬಿಡಹತ್ತಿದರು. ಒಂದು ದಿನ ಒಂದು ಬುಟ್ಟಿ ಯಲ್ಲಿ ಶಿವಾಜಿಯೂ ಮತ್ತೊಂದು ಬುಟ್ಟಿಯಲ್ಲಿ ಸಂಭಾಜಿಯೂ ಕುಳಿತು ಅವನ್ನು ಹೊರಸಿಕೊಂಡು ಆಗ್ರಾ ಪಟ್ಟಣವನ್ನು ದಾಟಿ ಅಲ್ಲಿ ಸಿದ್ಧವಾಗಿದ್ದ ಕುದುರೆಗಳನ್ನೇರಿ ಒತ್ತರದಿಂದ ಸಾಗಿದರು. ಅವನು ಬೈರಾಗಿಗಳ ವೇಷವನ್ನು ತಾಳಿ ಕಾಶಿ, ಗಯಾ, ಜಗನ್ನಾಥಪುರಿ, ಹೈದರಾಬಾದಗಳ ಮಾರ್ಗವಾಗಿ ತಮ್ಮ ರಾಜ್ಯಕ್ಕೆ ಬಂದರು, ಶಿವಾಜಿಯು ತಿರುಗಿ ಬರುವವರೆಗೆ ಆತನ ಜನರು ವೀರಮಾತೆಯಾದ ಜಿಜಾಬಾಯಿಯ ಅಂಕಿತರಾಗಿದ್ದು ರಾಜ್ಯವ್ಯವಸ್ಥೆಯನ್ನು ಚನ್ನಾಗಿ ಕಾಯ್ದುಕೊಂಡಿದ್ದರು.

---

## ೨ನೆಯ ಪಾಠ

### ಸ್ವರಾಜ್ಯ ಸಂಸ್ಥಾಪನೆ

೧. **ಮೊಗಲರೊಡನೆ ಆದ ಒಪ್ಪಂದ :—** ಶಿವಾಜಿಯು ಆಗ್ರಾದಿಂದ ಬಂದ ಕೂಡಲೇ ಮೊಗಲರ ವಿರೋಧವನ್ನು ಕಳೆಯುವದಕ್ಕಾಗಿ ಔರಂಗಾ ಬಾದದಲ್ಲಿದ್ದ **ಮುಅಜ್ಜಮನೊಡನೆ** ಒಪ್ಪಂದವನ್ನು ಮಾಡಿಕೊಂಡನು. **ಈ** ಒಪ್ಪಂದದಿಂದ ಔರಂಗಜೇಬನು ಶಿವಾಜಿಯು ರಾಜನೆಂದು ಒಪ್ಪಿದನು. ಸಂಭಾಜಿಗೆ **೫೦೦೦**ದ ಸರದಾರಿಕೆಯು ದೊರೆಯಿತು. ಶಿವಾಜಿಗೆ **ವರ್‍ಹಾಡವು** ಜಹಗೀರಾಗಿ ಸಿಕ್ಕಿತು. ಮತ್ತು **ಪ್ರತಾಪರಾವ ಗುಜರ** ಎಂಬ ಸೇನಾಪತಿಯು

ಒಂದು ಸಾವಿರ ಸೈನ್ಯದೊಂದಿಗೆ ಮೊಗಲರ ಕೈಕೆಳಗೆ ಇರಹತ್ತಿದನು ತರುವಾಯ ಶಿವಾಜಿಯು ರಾಜ್ಯದಲ್ಲಿ ಸುವ್ಯವಸ್ಥೆಯನ್ನು ನೆಲೆಗೊಳಿಸಿದನು.

**೨. ಮೊಗಲರಿಗೆ ಕೊಟ್ಟ ಕೋಟೆಗಳನ್ನು ಕೈವಶಮಾಡಿಕೊಂಡದ್ದು :-** ಮುಂದೆ ಮುಅಜ್ಜಮನೂ ಶಿವಾಜಿಯೂ ಒಂದಾಗಬಹುದೆಂಬ ಸಂಶಯವು ಔರಂಗಜೇಬನಿಗೆ ತಟ್ಟಿತು. ಆಗ ಅವನು ಮರಾಠರ ಮೇಲೆ ಸಾಗಿ ಹೋಗಲು ಮೊಗಲ ಸೈನ್ಯಕ್ಕೆ ಅಪ್ಪಣೆಕೊಟ್ಟನು. ಕೂಡಲೆ ಶಿವಾಜಿಯು ತನ್ನ ಸೈನ್ಯವನ್ನು ಹಿಂದಕ್ಕೆ ತರಿಸಿಕೊಂಡು ಮೊಗಲರಿಗೆ ಕೊಟ್ಟಿದ್ದ ಕೋಟೆಗಳನ್ನು ವಶಮಾಡಿಕೊಳ್ಳುವ ಕೆಲಸವನ್ನು ಕೈಕೊಂಡನು.

**ಕೋಂಢಾಣೆ** (ಸಿಂಹಗಡ) ಎಂಬ ಬಹು ಭದ್ರವಾದ ಕೋಟೆಯನ್ನು **ಉದಯಭಾನು** ಎಂಬ ಕಿಲ್ಲೇದಾರನು ಕಾಯುತ್ತಿದ್ದನು. ಅದನ್ನು ಗೆದ್ದುಕೊಳ್ಳುವ ಕೆಲಸವು **ತಾನ್ಹಾಜಿಗೆ** ಒಪ್ಪಿಸಲ್ಪಟ್ಟಿತು. ತಾನ್ಹಾಜಿ ನುರಿತ ಮಾವಳೇ ಸೈನ್ಯ ಸಹಿತ ಸಿಂಹಗಡಕ್ಕೆ ಸಾಗಿ ಉಡದ ಸಹಾಯದಿಂದ ಕೆಲವು ಜನರೊಂದಿಗೆ ಕೋಟೆಯ ಗೋಡೆಯನ್ನೇರಿ ಹೋದ ಮೇಲೆ ರಜಪುತ-ಮರಾಠರಲ್ಲಿ ಘೋರ ಸಂಗ್ರಾಮವಾಯಿತು. ತಾನ್ಹಾಜಿಯೂ ಉದಯಭಾನುವೂ ಪರಸ್ಪರ ಹೊಡೆತದಿಂದ ಹತರಾದರು. ಮರಾಠರು ಎದೆಗುಂದುತ್ತಿರುವಷ್ಟರಲ್ಲಿ ತಾನ್ಹಾಜಿಯ ತಮ್ಮನಾದ **ಸೂರ್ಯಾಜಿಯು** ಅವರನ್ನು ಹುರಿದುಂಬಿಸಿ ಶೌರ್ಯದಿಂದ ಕಾದಿ ಕೋಟೆಯನ್ನು ವಶಮಾಡಿಕೊಂಡನು.

**೩. ಸಾಲ್ಹೇರದ ಯುದ್ಧ** :— ತರುವಾಯ ಶಿವಾಜಿಯು ಪುರಂದರ ಮೊದಲಾದ ಕೋಟೆಗಳನ್ನು ತೆಗೆದುಕೊಂಡು ಸುರತಕ್ಕೆ ಹೋಗಿ ಅದನ್ನು ಎರಡನೆಯ ಸರತಿ ಸುಲಿದನು. ನಂತರ ಮೊಗಲ ರಾಜ್ಯವನ್ನು ಹೊಕ್ಕು **ದಾವುದಖಾನನೆಂಬ** ಸರದಾರನನ್ನು ಸೋಲಿಸಿ, ವರ್ಹಾಡದಲ್ಲಿಯ ಕಾರಂಜಾ ಪಟ್ಟಣವನ್ನು ಸುಲಿದನು ಮುಂದೆ ಕ್ರಿ. ಶ. ೧೬೭೨ರಲ್ಲಿ **ಸಾಲ್ಹೇರ** ಎಂಬಲ್ಲಿ ಮೊಗಲ-ಮರಾಠರಲ್ಲಿ ಘೋರವಾದ ಕಾಳಗವಾಯಿತು ಅದರಲ್ಲಂತೂ ಮೊಗಲರು ಪೂರ್ಣವಾಗಿ ಸೋತರು. ಮರಾಠರು ಮೊಗಲರೊಂದಿಗೆ ಬೈಲಿಗೆ ನಿಂತು ಮಾಡಿದ ದೊಡ್ಡ ಕಾಳಗವು ಇದೇ.

**ಹುಬ್ಬಳ್ಳಿಯನ್ನು ಸುಲಿದದ್ದು:—** ಆ ಬಳಿಕ ಶಿವಾಜಿಯು ಮೊಗಲರ ಗೋಜೆಯನ್ನು ಬಿಟ್ಟು, ವಿಜಾಪುರದ ರಾಜ್ಯವನ್ನು ಹೊಕ್ಕು ಕರ್ನಾಟಕದ ವರೆಗೆ ಸೀಮೆಯನ್ನು ಗೆದ್ದುಕೊಂಡನು. ಆಗ ಪ್ರತಾಪರಾವ ಗುಜರನು ಹುಬ್ಬಳ್ಳಿಯನ್ನು ಸುಲಿದನು.

**೪. ರಾಜ್ಯಾರೋಹಣ ಸಮಾರಂಭ.** — ಕ್ರಿ. ಶ. **೧೬೭೪**ನೆಯ ಇಸ್ವಿಯ ಜೂನ ೬ನೆಯ ತಾರೀಖು ಎಂದರೆ, ಶಕೆ ೧೫೯೬ರ ಜೇಷ್ಠ ಶುದ್ಧ ೧೩ನೆಯ ದಿವಸ ರಾಯಗಡದಲ್ಲಿ ಶಿವಾಜಿಯ ರಾಜ್ಯಾರೋಹಣ ಸಮಾರಂಭವು ವಿಧಿಪೂರ್ವಕವಾಗಿ ಒಳ್ಳೆಯ ಸಡಗರದಿಂದ ಜರುಗಿತು. ಆಗ ಶಿವಾಜಿಯು "**ಕ್ಷತ್ರಿಯ ಕುಲಾವತಂಸ ಶ್ರೀ ಶಿವಛತ್ರಪತಿ ಮಹಾರಾಜ**" ಎಂದು ಬಿರುದನ್ನು ಧರಿಸಿದನು. ತನ್ನ ಹೆಸರಿನ ನಾಣ್ಯಗಳನ್ನು ಮುದ್ರಿಸಿದನು ಅಂದಿನಿಂದ ರಾಜ್ಯಾಭಿಷೇಕ ಶಕವು ಆರಂಭವಾಯಿತು ಮತ್ತು ಅಷ್ಟಪ್ರಧಾನರಿಂದೊಡಗೂಡಿದ ರಾಜ್ಯ ಪದ್ಧತಿಯಿಂದ ಕಾರಭಾರವು ನಾಗಹತ್ತಿತು.

**೫. ಕರ್ನಾಟಕವನ್ನು ಗೆದ್ದುಕೊಂಡದ್ದು:—** ಮರುವರ್ಷ ಶಿವಾಜಿಯು ತಂಜಾವರದ ಮೇಲೆ ನಾಗಿಹೋದನು. ವೆಂಕೋಜಿಯು ಆದಿಲ್ ಶಾಹಿಯ ಸರದಾರನಾಗಿದ್ದುದರಿಂದ ಅವನು ಯುದ್ಧಕ್ಕೆ ನಿಂತನು. ಆಗ **ಹಂಬೀರರಾವ ಮೋಹಿತೆ** ಎಂಬ ಸೇನಾಪತಿಯು ಅವನನ್ನು ಸೋಲಿಸಿದನು. ಆಗ ಶಿವಾಜಿಗೆ ವ್ಯಸನವಾಯಿತು ಅವನು ತಮ್ಮನನ್ನು ಸಮಾಧಾನಬಡಿಸಿ ಆ ಜಹಗೀರನ್ನು ಅವನಿಗೆ ತಿರುಗಿ ಕೊಟ್ಟುಬಿಟ್ಟನು. ತಿರುಗಿ ಬರುವಾಗ ಇವನಿಗೂ ಧಾರವಾಡದ ಹತ್ತರದ ಬೆಳವಡಿಯ ದೇಸಾಯಿಯಾದ **ಈಶಪ್ರಭುವಿಗೂ** ಯುದ್ಧವಾಗಿ ಅದರಲ್ಲಿ ಈಶಪ್ರಭು ಮಡಿದನು ಅವನ ಹೆಂಡತಿಯಾದ **ಮಲ್ಲಮ್ಮನು** ಧೈರ್ಯದಿಂದ ಮರಾಠರ ಸೈನ್ಯವನ್ನು ಹೊಕ್ಕು ಕಾದಹತ್ತಿ ಕೆಲಹೊತ್ತಿನ ಮೇಲೆ ಗಾಯಹೊಂದಿ ಬಿದ್ದಳು. ಆಗ ಶಿವಾಜಿಯು ಕನಿಕರಬಟ್ಟು "ನೀವು ನಮ್ಮ ವೈರಿಗಳಾದರೂ ನಿಮ್ಮ ಕಲಿತನವನ್ನು ಕಂಡು ಕೌತುಕವೆನಿಸುತ್ತದೆ" ಹೀಗೆಂದು ಆ ವೀರ ಮಲ್ಲಮ್ಮನಿಗೆ ಎರಡು ಗ್ರಾಮಗಳನ್ನು ಉಂಬಳಿಯಾಗಿ ಕೊಟ್ಟನು

**೬. ವಿಜಾಪುರದವರನ್ನು ಕೂಡಿಕೊಂಡು ಮೊಗಲರನ್ನು ಮುರಿದದ್ದು:** ಇಷ್ಟರಲ್ಲಿ ಔರಂಗಜೇಬನಿಂದ ಕಳುಹಲ್ಪಟ್ಟ **ಮುಅಜ್ಜಮನೂ** ಮತ್ತು **ದಿಲೇರ**

**ಖಾನನೂ** ವಿಜಾಪುರದ ಮೇಲೆ ದಂಡೆತ್ತಿಬಂದದರಿಂದ ಆದಿಲಶಾಹಿಯ ಮುಖ್ಯ ಮಂತ್ರಿಯಾದ **ಸಿದ್ದಿ ಮುಸಾಊದನು** ತನ್ನ ನೆರವಿಗೆ ಬರಬೇಕೆಂದು ಶಿವಾಜಿಯನ್ನು ಬಹಳವಾಗಿ ಕೇಳಿಕೊಂಡನು. ಆಗ ಶಿವಾಜಿಯು ಮುಸಾಊದನ ಸಹಾಯಕನಾಗಿ ದಿಲೇರಖಾನನನ್ನು ಸೋಲಿಸಿ ಓಡಿಸಿದನು. ಶಿವಾಜಿಯು ಮಾಡಿದ ಸಹಾಯಕ್ಕಾಗಿಆದಿಲಶಾಹಿಯವರು ವೆಂಕೋಜಿಯು ಸ್ವತಂತ್ರನೆಂದೂ ಕೃಷ್ಣೆಯಿಂದ ತಂಜಾವರದ ವರೆಗಿನ ನಾಡು ಶಿವಾಜಿಯದೆಂದೂ ಒಪ್ಪಿಕೊಂಡರು.

೭. **ಶಿವಾಜಿಯ ಮರಣ** :— ಮುಂದೆ ಶಿವಾಜಿಯು ಬಹು ದಿವಸ ಬಾಳಲಿಲ್ಲ. ವಯಸ್ಸಿನ ಹದಿನೈದನೆಯ ವರುಷದಿಂದ ಸುಮಾರು ಮೂರು ತಪಗಳ ವರೆಗೆ ಮಾಡಿದ ಅವಿಶ್ರಾಂತ ಶ್ರಮದ ಪರಿಣಾಮವು ಇವನ ಪ್ರಕೃತಿಯ ಮೇಲೆ ಆಗದೆ ಇರಲಿಲ್ಲ. ಇವನು ೧೬೮೦ ನೆಯ ಇಸವಿಯ ಎಪ್ರಿಲದ ೬ ನೆಯ ತಾರೀಖಿನ ದಿವಸ ಮರಣ ಹೊಂದಿದನು. ಇವನ ರಾಜ್ಯವು (ದಕ್ಷಿಣೋತ್ತರ) ೭೦೦ ಮೈಲು ಉದ್ದವೂ (ಪೂರ್ವಪಶ್ಚಿಮ) ೧೫೦ ಮೈಲು ಆಗಲವೂ ಇತ್ತು. ಶಿವಾಜಿಗೆ **ಸಂಭಾಜಿ, ರಾಜಾರಾಮ** ಎಂಬ ಇಬ್ಬರು ಮಕ್ಕಳೂ **ಸಖೂಬಾಯಿ** ಎಂಬ ಮಗಳೂ ಇದ್ದರು. ಇವನ ಹೆಂಡತಿಯರಲ್ಲಿ **ಪುತಳಾಬಾಯಿ** ಎಂಬಾಕೆಯು ಸತಿಹೋದಳು.

೮. **ಶಿವಾಜಿಯ ರಾಜ್ಯಪದ್ಧತಿ** :— ಶಿವಾಜಿಯ ರಾಜ್ಯಕಾರಭಾರವು ಎಂಟು ಖಾತೆಗಳ ಮುಖಾಂತರ ಸಾಗುತ್ತಿತ್ತು. ಪ್ರತಿಯೊಂದು ಖಾತೆಗೆ ಒಬ್ಬೊಬ್ಬ ಮುಖ್ಯ ಅಧಿಕಾರಿಯು ಇದ್ದನು. ಈ ಅಧಿಕಾರಿಗಳು ತಮ್ಮ ತಮ್ಮ ಖಾತೆಗಳ ಕಾರಭಾರವನ್ನು ಸ್ವತಂತ್ರವಾಗಿ ಸಾಗಿಸುತ್ತ ಛತ್ರಪತಿಯ ಮೇಲಧಿಕಾರಕ್ಕೆ ಒಳಗಾಗಿದ್ದರು. ಈ ಎಂಟು ಜನ ಅಧಿಕಾರಿಗಳಿಗೆ **ಅಷ್ಟಪ್ರಧಾನ**ರೆಂಬ ಸಂಜ್ಞೆ.

## ಅಷ್ಟಪ್ರಧಾನರೂ ಅವರ ಕೆಲಸಗಳೂ

| ಪ್ರಧಾನರು | ಕೆಲಸ |
|---|---|
| ೧ ಪಂತಪ್ರಧಾನ (ಪೇಶವೆ) | ಮುಖ್ಯಪ್ರಧಾನಿಕೆ; ಅರಸನಿರದಿರುವಾಗ ಅವನ ಕೆಲಸ ನಡೆಸುವದು. |
| ೨ ಪಂತಅಮಾತ್ಯ (ಮುಜುಮದಾರ) | ಹಣವನ್ನು ಎತ್ತುವದು, ಲೆಕ್ಕವನ್ನು ಇಡುವದು. |
| ೩ ಪಂತಸಚಿವ (ಸುರನವೀಸ) | ಕಾಗದಪತ್ರ ಕಾದಿಡುವದು. |
| ೪ ಮಂತ್ರಿ (ವಾಕೆನವೀಸ) | ಅರಸನ ಸ್ವಂತದ ಕಾರಭಾರ |
| ೫ ಸೇನಾಪತಿ (ಸರಸೋಬಾತ) | ಸೈನ್ಯದ ವ್ಯವಸ್ಥೆ |
| ೬ ಸುಮಂತ (ದಬೀರ) | ಪರರಾಜ್ಯ ವ್ಯವಹಾರ |
| ೭ ನ್ಯಾಯಾಧೀಶ | ನ್ಯಾಯಖಾತೆಯು ಹೆಚ್ಚಿನ ಕೆಲಸ |
| ೮ ಪಂಡಿತರಾವ | ಧರ್ಮಖಾತೆಯನ್ನು ನಡಿಸುವದು. |

ಈ ಪ್ರಧಾನರೆಲ್ಲರು ಒಳ್ಳೆಯ ಯೋಗ್ಯತೆಯವರಾಗಿದ್ದರು. ಕಡೆಯ ಇಬ್ಬರನ್ನು ಬಿಟ್ಟು ಉಳಿದವರು ಯುದ್ಧ ಕಲೆಯಲ್ಲಿ ನಿಪುಣರಾಗಿದ್ದರು. ಶಿವಾಜಿಯು ಜಹಗೀರಿನ ಪದ್ಧತಿಯನ್ನು ತೆಗೆದುಹಾಕಿ, ಕೆಲಸಗಾರರಿಗೆ ಸಂಬಳವನ್ನು ಗೊತ್ತುಮಾಡಿ ಅದನ್ನು ಹೊತ್ತುಹೊತ್ತಿಗೆ ಸಲ್ಲಿಸಹತ್ತಿದನು.

ಭೂಮಿಯ ಕಂದಾಯವು ಉತ್ಪನ್ನದ ಎರಡೈದನೆಯಂಶದಷ್ಟು ಎತ್ತಲ್ಪಡುತ್ತಿತ್ತು. ಒಕ್ಕಲಿಗರ ಹಿತದ ಕಡೆಗೆ ವಿಶೇಷ ಲಕ್ಷ್ಯವಿತ್ತು. ನ್ಯಾಯ ನಿರ್ಣಯವು ಪಂಚಾಯತಿಯ ಪದ್ಧತಿಯಿಂದ ಆಗುತ್ತಿತ್ತು. ಎಲ್ಲರೂ ತಮ್ಮ ತಮ್ಮ ಧರ್ಮದಂತೆ ನಡೆಯುವದು ಸುಲಭವಾಗಿತ್ತು.

೯. **ಸೈನ್ಯ ವ್ಯವಸ್ಥೆ** :— ರಾಜ್ಯದಲ್ಲಿ **ಸುಭೆ** ಮತ್ತು **ಮಹಾಲು** ಎಂಬ ಭಾಗಗಳಿದ್ದವು. ಈ ಭಾಗಗಳಲ್ಲಿ ಅಲ್ಲಲ್ಲಿ ಭದ್ರವಾದ ಕೋಟೆಗಳಿದ್ದವು. ಪ್ರತಿಯೊಂದು ಕೋಟೆಯನ್ನು **ಹವಾಲದಾರ, ಸಬನೀಸ, ಕಾರಖನೀಸ** ಎಂಬ

ಅಧಿಕಾರಿಗಳು ರಕ್ಷಿಸುತ್ತಿದ್ದರು. ಸೈನ್ಯದಲ್ಲಿ ಕುದುರೆಯ ಸವಾರರು ಮತ್ತು ಕಾಲಾಳುಗಳು ಎಂಬೆರಡು ಭಾಗಗಳಿದ್ದವು. ಸೈನ್ಯದ ವ್ಯವಸ್ಥೆಯು ಚನ್ನಾಗಿತ್ತು. ಸ್ತ್ರೀಯರಿಗೂ ಶರೆಗಾರರಿಗೂ ಸೈನ್ಯದಲ್ಲಿ ಕಾಲಿಡಲು ಕಟ್ಟು ಇತ್ತು. ಶಿವಾಜಿಯ ವೈಭವಕಾಲದಲ್ಲಿ ೬೦ ಸಾವಿರ ರಾಹುತರೂ ೧ ಲಕ್ಷ ಕಾಲಾಳುಗಳೂ ಆತನ ಸೈನ್ಯದಲ್ಲಿದ್ದರು.

**೧೦. ಶಿವಾಜಿಯ ಹಡಗುಪಡೆ** :— ಕೊಂಕಣ ಭಾಗದ ರಕ್ಷಣೆಯು ಹಡಗುಪಡೆಯಿಂದಲ್ಲದೆ ಶಕ್ಯವಿರಲಿಲ್ಲ. ಆದದರಿಂದ, ಶಿವಾಜಿಯು ಮಾಲು ವಣದ ಹತ್ತರ **ಸಿಂಧುದುರ್ಗ**ವೆಂಬ ಬಲವಾದ ಕೋಟೆಯನ್ನು ಕಟ್ಟಿಸಿ ಕೋಳೀ ಭಂಡಾರಿ, ಮುಸಲ್ಮಾನ ಈ ಜನರುಳ್ಳ ಹಡಗುಪಡೆಯನ್ನು ಸಿದ್ಧಪಡಿಸಿದನು. **ಸಿದ್ದೀಮಿಸ್ತ್ರೀ** ಎಂಬ ಹಬಸೀ ಸರದಾರನು ಈ ಪಡೆಯ ಮುಖ್ಯಾಧಿಕಾರಿಯಾಗಿದ್ದನು. ಕ್ರಿ ಶ ೧೬೭೯ರ ಸುಮಾರಿಗೆ ಶಿವಾಜಿಯ ಹಡಗುಪಡೆಯಲ್ಲಿ ೧೬೦ ಹಡಗಗಳಿದ್ದವು ಕುಲಾಬಾ ಕೋಟೆಯು ಹಡಗು ಪಡೆಯ ಕೇಂದ್ರವಾಗಿತ್ತು.

**೧೧. ಶಿವಾಜಿಯ ಗುಣ, ಶೀಲ ಮತ್ತು ಯೋಗ್ಯತೆ** :- ಶಿವಾಜಿಯ ಸಂಗಡ ಕಡೆತನಕ ಹೋರಾಡಿದ ಔರಂಗಜೇಬನು- "ಶಿವಾಜಿಯು ಹೆಸರಾದ ವೀರನು; ಹಿಂದುಸ್ಥಾನದ ಪ್ರಾಚೀನ ರಾಜ್ಯಗಳನ್ನು ನಾನು ಮುರಿಯುತ್ತಿರುವಾಗಲೆ ಇವನು ಹೊಸ ರಾಜ್ಯಸ್ಥಾಪನೆಯ ದೊಡ್ಡ ಕೆಲಸವನ್ನು ನೆರವೇರಿಸಿದನು; ನನ್ನ ಸೈನ್ಯವು ಈಗ ಹತ್ತೊಂಬತ್ತು ವರ್ಷಗಳ ವರೆಗೆ ಶಿವಾಜಿಯೊಡನೆ ಕಾದುತ್ತಿದ್ದರೂ ಇವನ ರಾಜ್ಯವು ಒಂದೇಸವನೆ ಹಬ್ಬುತ್ತ ನಡೆದಿದೆ. ಸಂಕಟ ಕಾಲದಲ್ಲಿ ಇವನೆಂದೂ ಎದೆಗೆಡಲಿಲ್ಲ" ಎಂದಿರುವನು. ಪ್ರಸಂಗಕ್ಕೆ ತಕ್ಕ ಹಂಚಿಕೆಗಳನ್ನು ಯೋಜಿಸುವದರಲ್ಲಿ ಶಿವಾಜಿಯು ಹೆಸರಾಗಿದ್ದನು. ಪ್ರೇಮ-ವಿಶ್ವಾಸಗಳಿಂದ ಇವನು ಮಾವಳೆ ಜನರನ್ನು ವಶಮಾಡಿಕೊಂಡನು. ಅವರು ಇವನಿಗಾಗಿ ತಮ್ಮ ಜೀವವನ್ನು ಹುಲ್ಲಿಗಿಂತ ಕಡೆಯೆಂದೆಣಿಸಿದ್ದರು. ಕೈಲಾದ ಮಟ್ಟಿಗೆ ಯುದ್ಧಪ್ರಸಂಗಗಳನ್ನು ತಪ್ಪಿಸಿಯೇ ಕಾರ್ಯವನ್ನು ಸಾಧಿಸುವನು. ಆದರೆ ಮಲೆತು ನಿಂತ ಶತ್ರುವನ್ನು ಹಣಿಯಲು ಇವನು ಹಿಂಜರಿಯುತ್ತಿರಲಿಲ್ಲ.

ಇವನು ಸ್ಥಾಪಿಸಿದ ಅಷ್ಟಪ್ರಧಾನರ ರಾಜ್ಯಪದ್ಧತಿಯು ಇವನ ಮುತ್ಸದ್ದಿತನದ ಸಾಕ್ಷಿಯಾಗಿದೆ. ಶಿವಾಜಿಯು ಸೆರೆಸಿಕ್ಕ ಸಮಯದಲ್ಲಿ ಒಮ್ಮೆ ಮತ್ತು ಸಂಭಾಜಿಯ ಕೊಲೆಯಾದನಂತರ ಮತ್ತೊಮ್ಮೆ ಹೀಗೆ ಎರಡು ಪ್ರಸಂಗಗಳಲ್ಲಿ ಮರಾಠರ ರಾಜ್ಯವನ್ನು ಬದುಕಿಸಲು ಈ ಪದ್ಧತಿಯೇ ಕಾರಣವಾಯಿತು. ಶಿವಾಜಿಯು ಶುದ್ಧಾಚರಣೆಯಾಗಿದ್ದನೆಂದು ಇವನ ಹಗೆಗಳು ಕೂಡ ಒಪ್ಪುವರು. ಇವನು ಸ್ವಧರ್ಮಾಭಿಮಾನಿಯಾಗಿದ್ದಂತೆ ಪರಧರ್ಮ ಸಹಿಷ್ಣುವೂ ಆಗಿದ್ದನು ಮೇಲಾದ ಈಶ್ವರಭಕ್ತನೂ ಗುರುಹಿರಿಯರನ್ನು ಮನ್ನಿಸುವವನೂ ಆಗಿದ್ದನು

ಸಾರಾಂಶ— ಮುತ್ಸದ್ದಿತನ, ಶೌರ್ಯ, ಶುದ್ಧಾಚರಣೆ ಈ ಸುಗುಣಗಳ ಸಂಗಮದಿಂದೊಪ್ಪುವ ಮಹಾಪುರುಷರು ಸಿಕ್ಕುವದು ಕಠಿಣ. ಶಿವಾಜಿ ಮಹಾರಾಜನು ಈ ಗುಣಗಳಿಂದೊಪ್ಪುವವನಾಗಿದ್ದದರಿಂದ ಇವನನ್ನು ಮಹಾಪುರುಷನೆಂದು ಕರೆದುದು ಅರಿದಲ್ಲ.

---

# ೩ ನೆಯ ಪಾಠ

## ಛತ್ರಪತಿ ಸಂಭಾಜಿ (ಕ್ರಿ. ಶ. ೧೬೮೧-೧೬೮೯)

**೧. ಸಂಭಾಜಿಯ ರಾಜ್ಯಾರೋಹಣ** :-- ಸಂಭಾಜಿಯು ಶಿವಾಜಿಯ ಹಿರಿಯ ಮಗನು. ಇವನು ಕ್ರಿ ಶ. ೧೬೫೭ ರಲ್ಲಿ **ಪುರಂಧರ**ದಲ್ಲಿ ಹುಟ್ಟಿದನು. ಇವನು ಮೇಲಾದ ಕಲಿಯೂ, ಧರ್ಮಾಭಿಮಾನಿಯೂ, ಹಟವಾದಿಯೂ ಕ್ರೂರನೂ ಆಗಿದ್ದನು **ಕ್ರಿ ಶ. ೧೬೭೮ ರಲ್ಲಿ** ಮೊಗಲರು ಶಿವಾಜಿಯ ಮೇಲೆ ದಂಡೆತ್ತಿ ಬಂದಾಗ, ಸಂಭಾಜಿಯು ತಂದೆಯನ್ನು ಬಿಟ್ಟು ಶತ್ರುಗಳನ್ನು ಕೂಡ ಹೋದನು. ಆದರೆ ಮೊಗಲರು ಇವನಿಗೆ ಆಸರಕೊಡಲಿಲ್ಲ. ಆಗ ಶಿವಾಜಿಯು ಮಗನನ್ನು ಹಿಡಿದುತರಿಸಿ ಪನ್ಹಾಳಗಡದಲ್ಲಿ ಕಾವಲಿನಲ್ಲಿ ಇಟ್ಟನು. ಶಿವಾಜಿಯೂ ಅವನ ಕೈಕೆಳಗಿನ ಅಧಿಕಾರಿಗಳೂ ಸಂಭಾಜಿಯ ಈ ವರ್ತನವು ರಾಜ್ಯಕ್ಕೆ ಎಲ್ಲಿ ಮುಳುವು ಆಗುವದೋ ಎಂದು ಭಯಗೊಂಡರು.

ಶಿವಾಜಿಯು ಮರಣ ಹೊಂದಿದ ಕೂಡಲೇ ಆತನ ೨ ನೆಯ ಹೆಂಡತಿಯಾದ **ಸೋಯರಾಬಾಯಿ**ಯು ತನ್ನ ಮಗನಾದ **ರಾಜಾರಾಮ**ನನ್ನು

ಪಟ್ಟಕ್ಕೆ ಕೂಡ್ರಿಸಬೇಕೆಂದು ಒಳಸಂಚು ನಡೆಸಿದಳು. ಪನ್ಹಾಳಗಡದಲ್ಲಿದ್ದ ಸಂಭಾಜಿಗೆ ಈ ಸುದ್ದಿ ತಿಳಿದು ಅಲ್ಲಿಂದ ರಾಯಗಡಕ್ಕೆ ಹೊರಟು ಸೇನಾಪತಿ ಯಾದ **ಹಂಬೀರರಾಯ**ನನ್ನು ಒಲಿಸಿಕೊಂಡು ಪಟ್ಟವನ್ನೇರಿದನು. ಬಳಿಕ ಸೋಯರಾಬಾಯಿಯನ್ನು ಕೊಲ್ಲಿಸಿದನು. **ಮೋರೋಪಂತ, ಅಣ್ಣಾಜಿ** ಮೊದಲಾದ ಅಧಿಕಾರಿಗಳನ್ನು ಸೆರೆಯಲ್ಲಿಟ್ಟನು. ತಂದೆಯ ಕಾಲದ ಅಧಿಕಾರಿ ಗಳೆಲ್ಲರು ತನ್ನ ಕೇಡು ಬಗೆಯುವರೆಂಬ ವಿಚಾರವು ತಲೆಗೇರಿದ್ದರಿಂದ ಇವನು ನೂರಾರು ಜನರನ್ನು ಕ್ರೂರತನದಿಂದ ಕೊಲ್ಲಿಸಿದನು. ತಂದೆಯ ಕಾಲದ ನುರಿತ ಜನರನ್ನು ಕಳೆದುಕೊಂಡ ಬಳಿಕ ಸಂಭಾಜಿಯು ತನ್ನ ಒಲವಿನಂತೆ ನಡೆಯುವ **ಕವಿಕುಲೇಶ** (ಕಲುಶ) ನೆಂಬ ಕಾಶ್ಮೀರದ ಬ್ರಾಹ್ಮಣನನ್ನು ತನ್ನ ಮಂತ್ರಿಯನ್ನು ಮಾಡಿದನು.

೨. **ಸಂಭಾಜಿಯ ಪರಾಕ್ರಮ** :— ಮೊಗಲರು, ಪೋರ್ತುಗೀಜರು ಮತ್ತು ಜಂಜೀರೆಯ ಸಿದ್ದಿ ಈ ಮೂವರು ಇವನ ಹಗೆಗಳಾಗಿದ್ದರು. ಔರಂಗ ಜೇಬನು ರಜಪುತರೊಡನೆ ಯುದ್ಧದಲ್ಲಿ ತೊಡಗಿದ ವೇಳೆಯಲ್ಲಿ ಸಂಭಾಜಿಯು **ಬರ್ಹಾಣಪುರ**ದ ವರೆಗೆ ಸಾಗಿಹೋಗಿ **ಬಹದ್ದೂರಪುರ**ವನ್ನು ಸುಲಿದನು.

**ಜಂಜೀರೆಯ ಸಿದ್ಧಿಯು** ಮರಾಠರ ರಾಜ್ಯವನ್ನು ಸೇರಿ ಉಪದ್ರವ ಕೊಡಲು ಸಂಭಾಜಿಯು ಅವನನ್ನು ಸೋಲಿಸಿ ಜಂಜೀರೆಯ ಕೋಟೆಯನ್ನು ತೆಗೆದುಕೊಳ್ಳುವ ಯತ್ನ ನಡೆಯಿಸಿದನು.

ಇದೇ ಹೊತ್ತಿಗೆ ಪೋರ್ತುಗೀಜರು ಮರಾಠರ ರಾಜ್ಯದಲ್ಲಿ ಹೊಕ್ಕು ಒತ್ತಾಯದಿಂದ ಧರ್ಮಪ್ರಸಾರವನ್ನು ಮಾಡಹತ್ತಿದರಲ್ಲದೆ **ಚೌಲ** ಎಂಬ ಬಂದರವನ್ನು ಹಿಡಿದುಕೊಂಡರು, ಆಗ ಸಂಭಾಜಿಯು **ವಸಯಿ** ಮುಂತಾದ ಸ್ಥಳಗಳನ್ನು ಹಾಳಗೆಡಹಿ **ಫೋಂಡಾದ** ಬಳಿಯಲ್ಲಿ ಅವರನ್ನು ಪೂರ್ಣವಾಗಿ ಸೋಲಿಸಿ ಅವರ ರಾಜಧಾನಿಯಾದ **ಗೋವೆ**ಯನ್ನು ಬಲವಾಗಿ ಮುತ್ತಿದನು.

ಈ ರೀತಿ ಇಬ್ಬರು ಹಗೆಗಳನ್ನು ಹಣ್ಣುಮಾಡುತ್ತಿರುವಷ್ಟರಲ್ಲಿ ಮೊಗಲ ಸೈನ್ಯವು ಒಳ್ಳೆಯ ಸಿದ್ಧತೆಯೊಂದಿಗೆ ತನ್ನ ಮೇಲೆ ಸಾಗಿಬರುವದೆಂಬ ಸುದ್ದಿಯು ಸಂಭಾಜಿಗೆ ತಿಳಿಯಿತು. ಕಾರಣ ಅವನು ನಿರುಪಾಯನಾಗಿ ತನ್ನ ಎಲ್ಲ ಸೈನ್ಯವನ್ನು ತೆಗೆದುಕೊಂಡು ಮೊಗಲರನ್ನು ತಡೆಯಲು ಹೊರಡಬೇಕಾಯಿತು.

ಜಂಜೀರೆಯ ಸಿದ್ದಿಯು ಮೊಗಲ ಸೈನ್ಯಕ್ಕೆ ಕಾಳುಕಡಿಗಳನ್ನು ಒದಗಿಸಲು ಹೊರಟಿದ್ದನ್ನು ಕೇಳಿ ಉತ್ತರಕ್ಕೆ ಸಾಗಿ ಶತ್ರುಸೈನ್ಯವು ಬರುವ ದಾರಿಯಲ್ಲಿಯ ಸೀಮೆಗಳನ್ನು ಹಾಳುಮಾಡಿ ಸಿದ್ದಿಯನ್ನು ಹಣಿದು ಆವನು ತಂದಿದ್ದ ಕಾಳುಕಡಿ ಮುಂತಾದವುಗಳನ್ನು ಸುಲಿದುಕೊಂಡನು. ಮರಾಠರು ಎಲ್ಲ ಆಯಕಟ್ಟಿನ ಸ್ಥಳಗಳನ್ನು ಕಾದುಕೊಂಡದ್ದರಿಂದ ಮೊಗಲ ಸೈನ್ಯದ ಆಟವು ನಡೆಯದಂತಾಯಿತು. ಆಗ ಬರ್ಹಾಣಪುರದಲ್ಲಿದ್ದ ಬಾದಶಾಹನು ತನ್ನ ಸೈನ್ಯವನ್ನು ಹಿಂದಕ್ಕೆ ಕರೆಯಿಸಿಕೊಂಡನು. ಮರಾಠರ ಗೋಜು ಬಿಟ್ಟು ವಿಜಾಪುರ ಗೋವಳಕೊಂಡಗಳ ಮೇಲೆ ಸಾಗಿ ಕ್ರಿ. ಶ. **೧೬೮೬** ರಿಂದ **೮೭** ರ ವರೆಗೆ ಆ ರಾಜ್ಯಗಳನ್ನು ಮುರಿದು ತನ್ನ ರಾಜ್ಯಕ್ಕೆ ಕೂಡಿಸಿಕೊಂಡನು.

**೩. ಸಂಭಾಜಿಯು ಕೈಸೆರೆಯಾಗಿದ್ದು** ಮತ್ತು **ಆತನಕೊಲೆ:**— ಔರಂಗಜೇಬನು **ವಿಜಾಪುರ-ಗೋವಳಕೊಂಡ**ಗಳನ್ನು ಕೈವಶ ಮಾಡಿಕೊಂಡ ಬಳಿಕ ಮರಾಠರ ಮೇಲೆ ಸಾಗಿಬಂದನು. ಮೊಗಲ ಸರದಾರನಾದ **ಸರ್ಜೇಖಾನ**ನಿಗೂ **ಹಂಬೀರರಾವ ಮೋಹಿತೆಗೂ** ವಾಯಿಯ ಬಳಿಯಲ್ಲಿ ಯುದ್ಧವಾಗಿ ಅದರಲ್ಲಿ ಮೋಹಿತೆಯು ಹತನಾದನು. ಕೂಡಲೆ ಮೊಗಲ ಸೈನ್ಯವು ಸಂಭಾಜಿಯನ್ನು ಹಿಡಿಯಹೊರಟಿತು. ಸಂಭಾಜಿಯು ಸಂಗಮೇಶ್ವರದಲ್ಲಿರುವನೆಂಬ ಸುದ್ದಿಯು ಗುಪ್ತ ಚಾರರಿಂದ ತಿಳಿಯಿತು. ಆಗ ಮುಕ್ರಬಖಾನ ಎಂಬ ಸರದಾರನು ೩ ಸಾವಿರ ಸೈನ್ಯದೊಂದಿಗೆ ದಿನಕ್ಕೆ ೩೦ ಮೈಲಿನಂತೆ ದಾರಿಯ ನಡೆದು ಮೂರು ದಿವಸಕ್ಕೆ **ಸಂಗಮೇಶ್ವರ**ವನ್ನು ಸೇರಿದನು. ಆಗ ಸಂಭಾಜಿಯು ಮೈ ಮೇಲೆ ಎಚ್ಚರವಿರಲಿಲ್ಲ. ಶತ್ರು ಸೈನ್ಯವು ಬಂದ ಸುದ್ದಿಯನ್ನು ಹೇಳಿದ ಸೇವಕರ ಮೇಲೆಯೇ ಹರಿಹಾಯ್ದನು. ಕಲುಶನು ಮೊಗಲರೊಡನೆ ಕಾದಿ ಗಾಯ ಹೊಂದಿದಬಳಿಕ ಸಂಭಾಜಿಯೊಡನೆ ನೆಲಮನೆಯಲ್ಲಿ ಅಡಗಿಕೊಂಡನು. ಆದರೆ ಮುಕ್ರಬಖಾನನು ಅವರಿಬ್ಬರನ್ನು ಹುಡುಕಿ ಸೆರೆಹಿಡಿದು ತುಳಜಾಪುರದಲ್ಲಿದ್ದ ಬಾದಶಾಹನಲ್ಲಿಗೆ ಕಳುಹಿದನು.

ಸಂಭಾಜಿಯು ಶತ್ರುಗಳ ಕೈಗೆ ಸಿಕ್ಕ ಕೂಡಲೆ ಅವನ ತಲೆಯಲ್ಲಿ ಬೆಳಕು ಬಿದ್ದಿತು. ತನ್ನ ಮೈಮರೆವುತನವೇ ಮರಾಠರ ರಾಜ್ಯಕ್ಕೆ ಮುಳುವಾಯಿತೆಂದು ಆತನಿಗೆ ಹೊಳೆಯಿತು. ಹೀಗೆ ಮನಸ್ಸಿನ ಸ್ಥಿತಿಯಿರುವಾಗ ಔರಂಗಜೇಬನು

'ಜೀವದಾಶೆಯು ನಿನಗಿದ್ದರೆ ಮುಸಲ್ಮಾನನಾಗು' ಎಂದು ಆತನಿಗೆ ಹೇಳಿದನು. ಆಗ ಸಂಭಾಜಿಯು ಜೀವದಾಶೆಯಿಂದ ದೀನನಾಗಿ ಬದುಕುವದಕ್ಕಿಂತ ಸಾಯುವದೇ ಲೇಸೆಂದು ಭಾವಿಸಿ ಬಾದಷಾಹನನ್ನು ಧಿಕ್ಕರಿಸಿ 'ನಿನ್ನ ಮಗಳನ್ನು ನನಗೆ ಕೊಟ್ಟರೆ ಮುಸಲ್ಮಾನನಾಗುವೆನು' ಎಂದು ಉತ್ತರಕೊಟ್ಟನು. ಆಗ ಔರಂಗಜೇಬನು ಸಂತಪ್ತನಾಗಿ ಸಂಭಾಜಿಯನ್ನು ಬಗೆ ಬಗೆಯಿಂದ ಗಾಯಗೊಳಿಸಿ ಕೊಲ್ಲಿಸಿದನು. ಈ ಭಯಂಕರವಾದ ಕೊಲೆಯು ಕ್ರಿ. ಶ. **೧೬೮೯** ರಲ್ಲಿ **ಕೋರೆಗಾವ**ದಲ್ಲಿ ಸಂಭವಿಸಿತು.

**ಸಂಭಾಜಿಯು ಕೊಲೆಯಾದ ಕಾಲದ ಪರಿಸ್ಥಿತಿ:**-- ಸಂಭಾಜಿಯ ಮರಣದನಂತರ ಮರಾಠರ ರಾಜ್ಯವು ಮೊಗಲರ ಕೈಸೇರುವ ಸಂಭವವಿತ್ತು. ಆದರೆ ಸಂಭಾಜಿಯು ಧರ್ಮದಸಲುವಾಗಿ ಕ್ರೂರವಧೆಗೆ ಗುರಿಯಾಗಬೇಕಾದುದನ್ನು ನೆನೆದು, ಮರಾಠರು ಆವನಿಗಾಗಿ ಬಹಳನಾಗಿ ಮಿಡುಕಿದರಲ್ಲದೆ ಮೊಗಲರ ಸೇಡು ತೀರಿಸಿಕೊಳ್ಳುವ ಹಟತೊಟ್ಟು ಧೈರ್ಯದಿಂದ ಅವರೊಡನೆ ಕಾದಲು ಅಣಿಯಾದನು. ಹೀಗೆ **ಯೇಸೂಬಾಯಿಯ** ದಕ್ಷತೆಯೂ ಸರದಾರರ ರಾಷ್ಟ್ರಹಿತ ಬುದ್ಧಿಯೂ ಮರಾಠರ ಸ್ವಾಭಿಮಾನವೂ ಮರಾಠರ ರಾಜ್ಯವನ್ನು ಬಂದ ಕುತ್ತಿನಿಂದ ಉಳಿಸಿಕೊಳ್ಳಲು ಕಾರಣವಾದವೆನ್ನಲು ಅಡ್ಡಿಯಿಲ್ಲ.

---

## ೪ ನೆಯ ಪಾಠ

### ಛತ್ರಪತಿ ರಾಜಾರಾಮ (ಕ್ರಿ. ಶ. ೧೬೮೯ ೧೭೦೦)

೧. **ಸಂಭಾಜಿಯ ತರುವಾಯದ ರಾಜ್ಯ ವ್ಯವಸ್ಥೆ:**— ಸಂಭಾಜಿಯ ತರುವಾಯ ಮುತ್ಸದ್ದಿಗಳೆಲ್ಲರೂ ರಾಯಗಡದಲ್ಲಿ ಕೂಡಿ ಅವನ ಮಗನಾದ ಶಿವಾಜಿ (ಶಾಹು) ಎಂಬ ಒಂಭತ್ತು ವರ್ಷದ ಬಾಲಕನ ಹೆಸರಿನಿಂದ ಕಾರಭಾರವನ್ನು ಸಾಗಿಸಹತ್ತಿದರು. ಮತ್ತು ಏಸುಬಾಯಿಯ ಒಪ್ಪಿಗೆಯಿಂದ **ರಾಜಾರಾಮ**ನನ್ನು ರಾಜ್ಯರಕ್ಷಕನನ್ನು ಮಾಡಿಕೊಂಡು ಮರಾಠರ ರಾಜ್ಯವನ್ನು ಉಳಿಸಿಕೊಳ್ಳುವ ಉದ್ಯೋಗವನ್ನು ಕೈಕೊಂಡರು. ರಾಜಾರಾಮನು ಶಿವಾಜಿಯಂತೆ ಸಮರ್ಥನಲ್ಲದಿದ್ದರೂ ಯೋಗ್ಯತೆಯುಳ್ಳವರಿಗೆ ಉತ್ತೇಜನ ಕೊಟ್ಟು ಅವರಿಂದ ಕೆಲಸ ಮಾಡಿಸಿಕೊಳ್ಳುವ ಬಗೆಯನ್ನು ಚನ್ನಾಗಿ ಅರಿತವನಾಗಿದ್ದನು

**೨. ರಾಯಗಡವು ಮೊಗಲರ ವಶವಾದದ್ದು :—** ಮೊಗಲ ಸರದಾರ ನಾದ **ಜುಲ್‌ಫಕ್ಕಾರಖಾನ**ನು ರಾಯಗಡವನ್ನು ಮುತ್ತಿದನು ಆಗ ಮರಾಠರು ಅತಿ ಸಾಹಸದಿಂದ ಕೋಟೆಯನ್ನು ಕಾಯ್ದುಕೊಂಡದ್ದರಿಂದ ಜುಲ್‌ಫಕ್ಕಾರ ಖಾನನ ಆಟವು ನಾಗದಾಯಿತು. ಆವರೆ **ಸೂರ್ಯಾಜಿ ಪಿಸಾಳ** ಎಂಬ ಮರಾಠ ಸರದಾರನು ವಾಯಿಯ ದೇಶವಂಖಿಯನ್ನು ದೊರೆಯಿಸಿಕೊಳ್ಳುವ ಆಶೆಯಿಂದ ಕೋಟೆಯ ಕಳ್ಳದಾರಿಗಳನ್ನು ಶತ್ರುಗಳಿಗೆ ತೋರಿಸಿದನು. ಆಗ ಕೋಟೆಯು ಮೊಗಲರ ವಶವಾಯಿತು. ಅಲ್ಲಿದ್ದ ಸಂಪತ್ತೂ ಅವರ ಕೈಸೇರಿತು. ಖಾನನು ಏಸೂಬಾಯಿಯನ್ನೂ ಶಿವಾಜಿಯನ್ನೂ ಸೆರೆಹಿಡಿದು ಬಾದಷಾಹನ ಕಡೆಗೆ ಕಳುಹಿದನು. ಅಲ್ಲಿ ಔರಂಗಜೇಬನ ಎರಡನೆಯ ಮಗಳಾದ **ಜೀನತ್-ಉನ್ನಿಸಾ**ಳು ಶಿವಾಜಿಯನ್ನು ಮಮತೆಯಿಂದ ಕಾಣಹತ್ತಿ, ಆ ತಾಯಿ-ಮಕ್ಕಳಿಗೆ ಯಾವ ಬಗೆಯ ಕೊರತೆಯೂ ಉಂಟಾಗದಂತೆ ವ್ಯವಸ್ಥೆಯನ್ನಿಡಿಸಿದಳು.

**೩. ರಾಜಾರಾಮನು ಜಿಂಜಿಯನ್ನು ಆಶ್ರಯಿಸಿದ್ದು :—** ಬಳಿಕ ಔರಂಗಜೇಬನು ಅಲ್ಲಲ್ಲಿ ಇದ್ದ ತನ್ನ ಸರದಾರರಿಗೆ ರಾಜಾರಾಮನನ್ನು ಹಿಡಿಯಲು ಅಪ್ಪಣೆಕೊಟ್ಟನು. ಆ ಸರದಾರರು ಮರಾಠರ ಸೀಮೆಯನ್ನೆಲ್ಲ ವ್ಯಾಪಿಸಿದ್ದರಿಂದ ರಾಜಾರಾಮನು ಅವರ ಕೈಗೆ ಸಿಗದಂತೆ ಉಳಿಯುವದು, ಕಠಿಣವಾಗಿತ್ತು. ಆದದರಿಂದ ಅವನು ತನ್ನ ಸಂಗಡಿಗರೊಂದಿಗೆ ಯಾತ್ರಿಕರ ವೇಷದಿಂದ ಪರಿಪರಿಯ ಕುತ್ತುಗಳನ್ನು ಅನುಭವಿಸುತ್ತ ಜಿಂಜಿಗೆ ತಲುಪಿದನು. ಜಿಂಜಿಯಲ್ಲಿ ರಾಜಾರಾಮನ ಪಟ್ಟಾಭಿಷೇಕವಾದ ಬಳಿಕ ಅವನು ಪಂತಪ್ರತಿಸಿಧಿ, ಮುಖ್ಯ ಪ್ರಧಾನ, ಸೇನಾಪತಿ ಈ ಅಧಿಕಾರದ ಸ್ಥಳಗಳನ್ನು ಅನುಕ್ರಮವಾಗಿ ಪ್ರಲ್ಹಾದ ನಿರಾಜಿ, ನಿಳೋ ಮೋರೆಶ್ವರ, ಸಂತಾಜಿ ಘೋರಪಡೆ ಎಂಬವರಿಗೆ ಕೊಟ್ಟನು.

**೪. ಸಂತಾಜಿ ಮೊದಲಾದವರ ಪರಾಕ್ರಮ :—** ಈ ರೀತಿಯಾಗಿ ರಾಜಾರಾಮನ ಕಾರಭಾರವು ಜಿಂಜಿಯಲ್ಲಿ ಸಾಗುತ್ತಿರಲು ಅತ್ತ ಉತ್ತರದಲ್ಲಿ ಮೊಗಲರು ಪನ್ಹಾಳಗಡ, ವಿಶಾಲಗಡ ಕೋಟೆಗಳನ್ನೂ ಕೆಲವು ಸೀಮೆಗಳನ್ನೂ ವಶಮಾಡಿಕೊಂಡರು. ಆಗ ರಾಮಚಂದ್ರಪಂತನೊಬ್ಬನಿಂದ ಮೊಗಲರನ್ನು ತಡೆಯುವದಾಗದೆಂದು ತಿಳಿದು ರಾಜಾರಾಮನು ಸಂತಾಜಿಯನ್ನೂ

ಧನಾಜಿಯನ್ನೂ ಅವನ ನೆರವಿಗೆ ಕಳುಹಿದನು. ಈ ಇಬ್ಬರು ಸರದಾರರ ಪರಾಕ್ರಮದಿಂದ ಮೊಗಲರು ಆಕ್ರಮಿಸಿದ ಸೀಮೆಗಳು ಒಂದೊಂದಾಗಿ ಮರಾಠರ ಕೈವಶವಾಗಹತ್ತಿದವು. ಬಳಿಕ ಮರಾಠರು ನರ್ಮದೆಯ ವರೆಗಿನ ಪ್ರದೇಶವಲ್ಲಿ ಹರಿಬಿದ್ದು, ಗನೀಮಿ ಪದ್ಧತಿಯಿಂದ ಮೊಗಲ ಸೈನ್ಯದ ಮೇಲೆ ಮಾಡಿದ ಹಾವಳಿಗಳಿಂದ ಅದು ಬೇಸರಗೊಂಡಿತು. ಕಡೆಗೆ ಔರಂಗಜೇಬನು ರಾಜಾರಾಮನನ್ನು ಜಯಿಸದಿದ್ದರೆ ಮರಾಠರ ಉಪದ್ರವು ತಪ್ಪದೆಂದು ತಿಳಿದು ಜಿಂಜಿಯನ್ನು ಮುತ್ತುವದಕ್ಕಾಗಿ ಜುಲ್‌ಫಕ್ಕಾರಖಾನನನ್ನು ಅಪ್ಪಣೆಕೊಟ್ಟು ಕಳುಹಿದನು. ಕ್ರಿ. ಶ. ೧೬೯೧

೫. **ಜಿಂಜಿಯಮುತ್ತಿಗೆ** :- ಹಿಂದುಸ್ಥಾನದ ಇತಿಹಾಸ ಪ್ರಸಿದ್ಧವಾದ ಮುತ್ತಿಗೆಗಳಲ್ಲಿ ಜಿಂಜಿಯ ಮುತ್ತಿಗೆಯು ಒಂದಾಗಿದೆ. ಇದು ಏಳುವರ್ಷ ನಡೆಯಿತು. ಆದದರಿಂದ ಬಾದಶಹನು ಸಿಟ್ಟಾಗಿ ಜುಲ್‌ಫಕ್ಕಾರಖಾನನಿಗೆ ಪತ್ರ ಬರೆದನು. ಆಗ ಖಾನನು ರೊಚ್ಚಿಗೆದ್ದು ಮುತ್ತಿಗೆಯ ಕೆಲಸವನ್ನು ಭರದಿಂದ ಸಾಗಿಸಿದನು. ಕೋಟೆಯು ಮೊಗಲರ ವಶವಾಗುವ ಲಕ್ಷಣವು ತೋರಹತ್ತಿತು. ಆಗ **ಖಂಡೋಬಲ್ಲಾಳನು** ಯಾರಿಗೂ ಗೊತ್ತಾಗದಂತೆ ಮೊಗಲರನ್ನು ಕೂಡಿಕೊಂಡಿದ್ದ ಗಣೋಜಿ ಶಿರ್ಕೆಯ ಬಳಿಗೆ ಹೋಗಿ ( ಸಂಭಾಜಿಯು ಶಿರ್ಕೆ ಮನೆತನದ ಸರದಾರರ ಕೊಲೆಗೊಳಿಸಿದಂದಿನಿಂದ ಗಣೋಜಿಯು ಮೊಗಲರ ಕಡೆಗಾಗಿದ್ದನು. ) " ಸಂಭಾಜಿಯ ತಪ್ಪಿಗಾಗಿ ನೀವು ಮರಾಠರ ರಾಜ್ಯಕ್ಕೆ ಕೇಡನ್ನು ಬಗೆಯುವದು. ಸರಿಯಾಗುವದಿಲ್ಲ ; ದಯಮಾಡಿ ಆ ಹಟವನ್ನು ಬಿಟ್ಟು ನಮಗೆ ಅನುಕೂಲರಾಗಬೇಕು " ಎಂದು ಬಗೆಬಗೆಯಿಂದ ಹೇಳಿ-ಕೊಂಡನು. ಮತ್ತು ತನ್ನ **ದಾಭೋಳದ** ವತನವನ್ನು ಗಣೋಜಿಗೆ ಕೊಟ್ಟು ಅವನನ್ನು ತನ್ನ ಕಡೆಗೆ ಮಾಡಿಕೊಂಡನು. ಗಣೋಜಿಯು ನೆರವಾದದರಿಂದ ರಾಜಾರಾಮನು ತನ್ನ ಜನರೊಡನೆ ಜಿಂಜಿಯಿಂದ ಸುರಕ್ಷಿತವಾಗಿ ಪಾರಾಗಿ ಹೋದನು ಬಳಿಕ ಕೋಟೆಯು ಮೊಗಲರ ವಶವಾಯಿತು. ಕ್ರಿ. ಶ. **೧೬೯೮.**

೬. **ರಾಜಾರಾಮನ ರಾಜ್ಯವಿಸ್ತಾರ:**—ರಾಜಾರಾಮನು ರಾಯಗಡಕ್ಕೆ ಬದಲಾಗಿ ಸಾತಾರೆಯನ್ನು ತನ್ನ ರಾಜಧಾನಿಯನ್ನು ಮಾಡಿಕೊಂಡನು. ಪ್ರತಿನಿಧಿಯಾದ **ಪರಶುರಾಮಪಂತ,** ಸೇನಾಪತಿಯಾದ **ಧನಾಜಿ ಜಾಧವ** ಇವರ

ಸಹಾಯದಿಂದ ಉತ್ತರಕ್ಕೆ ದಂಡೆತ್ತಿಹೋಗಿ ವರ್‍ಹಾಡ, ಖಾನದೇಶ ವರೆಗಿನ ಸೀಮೆಗಳನ್ನು ವಶಮಾಡಿಕೊಂಡನು. ಮತ್ತು ಗೆದ್ದುಕೊಂಡ ಒಂದೊಂದು ಪ್ರಾಂತಕ್ಕೆ ಒಬ್ಬೊಬ್ಬ ಸರದಾರನನ್ನು ಅಧಿಕಾರಿಯನ್ನಾಗಿ ನಿಯಮಿಸಿ, ಅವರು ತಮ್ಮ ಭಾಗಗಳನ್ನು ಕಾಯ್ದುಕೊಂಡು ಉತ್ಪನ್ನದ ಇಂತಿಷ್ಟನೆಯ ಪಾಲನ್ನು ಸಾತಾರೆಗೆ ಕಳುಹಿಸತಕ್ಕದ್ದೆಂದು ಗೊತ್ತುಮಾಡಿದನು. ಇವನು ಯೇಸೂಬಾಯಿಯನ್ನೂ ಶಿವಾಜಿಯನ್ನೂ ಬಿಡಿಸುವ ಪ್ರಯತ್ನ ಮಾಡಿದನು. ಆದರೆ ಆ ಕೆಲಸವು ಸಾಧಿಸಲಿಲ್ಲ. ಪರಾಕ್ರಮವನ್ನು ಮಾಡಿದ ಸರದಾರರಿಗೆ ಅವರವರ ಯೋಗ್ಯತೆಯಂತೆ ಜಹಗೀರುಗಳನ್ನೂ ಇನಾಮುಗಳನ್ನೂ ಹಾಕಿಕೊಟ್ಟನು.

೭. **ರಾಜಾರಾಮನ ಮರಣ ಮತ್ತು ಯೋಗ್ಯತೆ:—** ರಾಜಾರಾಮನು ಜ್ವರ ಬಂದು ಸಿಂಹಗಡದಲ್ಲಿ ಮರಣಹೊಂದಿದನು. ಕ್ರಿ. ಶ. ೧೭೦೦. ಇವನಿಗೆ ತಾರಾಬಾಯಿ, ರಾಜಸಬಾಯಿ ಎಂಬ ಇಬ್ಬರು ಹೆಂಡರೂ ಶಿವಾಜಿ-ಸಂಭಾಜಿ ಎಂಬ ಇಬ್ಬರು ಮಕ್ಕಳೂ ಇದ್ದರು. ಇವನು ಶಾಂತನೂ ಉದಾರನೂ ಸುವಿಚಾರಿಯೂ ಆಗಿದ್ದನು. ರಾಮಚಂದ್ರಪಂತ ಖಂಡೊ ಬಲ್ಲಾಳ ಇವರಂಥ ನರರತ್ನಗಳನ್ನು ಸಂಗ್ರಹಿಸಿ, ಅವರಿಂದ ಮರಾಠರ ರಾಜ್ಯವನ್ನು ಬೆಳಗಿಸಿದ ಇವನ ಜಾಣ್ಮೆಯೂ ದಕ್ಷತೆಯೂ ಕಡಿಮೆಯದಲ್ಲ. ಸಂಭಾಜಿಯ ಶೌರ್ಯವು ಅವಿಚಾರದಮೂಲಕ ಕೆಲಸಕ್ಕೆ ಬಾರದೆ ರಾಜ್ಯವು ಮುಳುಗುವ ಪ್ರಸಂಗವುಂಟಾಯಿತು ಆದೇ ಅಷ್ಟು ಶೂರನಲ್ಲದ ರಾಜಾರಾಮನ ಸುವಿಚಾರವು ಮರಾಠರ ರಾಜ್ಯವನ್ನು ಕುತ್ತಿನಿಂದ ಉಳಿಸಿ, ಬೆಳೆಯಿಸಲು ಕಾರಣವಾಯಿತು.

---

## ೫ನೆಯ ಪಾಠ

### ಛತ್ರಪತಿ ೨ನೆಯ ಶಿವಾಜಿ ಮತ್ತು ಛತ್ರಪತಿ ಶಾಹುರಾಜ

( ಕ್ರಿ. ಶ. ೧೭೦೦—೧೭೦೭ ) ( ಕ್ರಿ. ಶ. ೧೭೦೮—೧೭೪೯ )

೧. **ತಾರಾಬಾಯಿಯ ಮಗ ಶಿವಾಜಿಯು ಪಟ್ಟಕ್ಕೆ ಬಂದದ್ದು:—** ರಾಜಾರಾಮನು ಸತ್ತ ತರುವಾಯ ಆವನ ಹೆಂಡತಿಯಾದ ತಾರಾಬಾಯಿಯು ತನ್ನ ಮಗನಾದ ಶಿವಾಜಿಗೆ ಪಟ್ಟವು ದೊರೆಯಬೇಕೆಂದು ಹಟ ಹಿಡಿದಳು. ಶಾಹುವು ಮೊಗಲರ ವಶದಲ್ಲಿದ್ದದರಿಂದ ಸರದಾರರಾರೂ ಈಕೆಯನ್ನು ವಿರೋ

ಧಿಸಲಿಲ್ಲ. ಆದದರಿಂದ ತಾರಾಬಾಯಿಯು ತನ್ನ ಹತ್ತು ವರ್ಷದ ಮಗನನ್ನು ಪಟ್ಟಗಟ್ಟಿ ತಾನೇ ಕಾರಭಾರವನ್ನು ಸಾಗಿಸಹತ್ತಿದಳು. ಸೇನಾಪತಿ ಹಂಬೀರ ರಾಯನ ಮಗಳಾದ ಈಕೆಯು ಚತುರಳೂ ಧೀರಳೂ ಶಿವಾಜಿ ಮಹಾರಾಜನ ಕಾಲದ ರಾಜಕಾರಣದ ಹಲವು ಪ್ರಸಂಗಗಳನ್ನು ನೋಡಿದವಳೂ ಆಗಿದ್ದಳು.

೨. **ಮರಾಠರನ್ನು ಮುರಿಯುವ ದೀರ್ಘ ಪ್ರಯತ್ನ**:— ಮರಾಠರು ಉತ್ತರಕ್ಕೆ ಬಂದು ವರ್ಹ್ಹಾಡ ಖಾನದೇಶಗಳವರೆಗಿನ ಸೀಮೆಗಳನ್ನು ವಶಮಾಡಿಕೊಂಡ ಸಂಗತಿಯನ್ನು ಹಿಂದಿನ ಪಾಠದಲ್ಲಿ ಹೇಳಿದೆ ಈ ರೀತಿ ಅವರು ಮುಂದಡಿ ಇಡುವದನ್ನು ಕಂಡು ಔರಂಗಜೇಬನು ತನ್ನ ಅರ್ಧ ಸೈನ್ಯವನ್ನು ಜುಲ್‌ಫಕ್ಕಾರಖಾನನ ಕಡೆಗೆ ಕೊಟ್ಟು ಅವನನ್ನು ಮೊಗಲರ ಸೀಮೆಗಳಲ್ಲಿ ಚೌಥವನ್ನು ಎತ್ತುತ್ತಿದ್ದ ಮರಾಠರ ಮೇಲೆ ಕಳುಹಿದರು. ತಾನು ಉಳಿದರ್ಧ ಸೈನ್ಯದೊಡನೆ ಮರಾಠರ ಕೋಟೆಗಳಮೇಲೆ ಸಾಗಿದನು. ಅವನು ವಸಂತಗಡ ತೆಗೆದುಕೊಂಡು ಸಾತಾರೆಯನ್ನು ಮುತ್ತಿದನು. ತಾರಾಬಾಯಿಯು ಪ್ರಯತ್ನ ಪಟ್ಟರೂ ಸಾಧ್ಯವಾಗದೆ ಸಾತಾರೆಯು ಮೊಗಲರ ಕೈಸೇರಿತು. ತರುವಾಯ ಕ್ರಿ. ಶ. ೧೭೦೫ ರವರೆಗೆ ವರ್ಧನಗಡ, ಸಿಂಹಗಡ, ತೋರಣೆ ಮುಂತಾದ ಕೋಟೆಗಳನ್ನು ವಶಪಡಿಸಿಕೊಂಡನು.

ಅಷ್ಟರಲ್ಲಿ **ಹೀರಾಜಿನಾಯಕ** ಎಂಬವನು ವಿಜಾಪುರ ಭಾಗದಲ್ಲಿ ಬಂಡಾಯವನ್ನೆಬ್ಬಿಸಿದ್ದು, ಅವನನ್ನು ತಡೆಯುವದು ಯಾವಸರದಾರನಿಂದಲೂ ಆಗಲೊಲ್ಲದು ಎಂಬ ಸುದ್ದಿಯು ಬಂದಿತು. ಆದದರಿಂದ ಬಾದಷಾಹನೇ ಅತ್ತ ಕಡೆಗೆ ಹೋಗಬೇಕಾಯಿತು. ಬಾದಷಾಹನ ಬೆನ್ನು ಮರಾಠರ ಕಡೆಗಾಗುವದೊಂದೇತಡ, ಅವರು ಮೊಗಲರ ಕೈಸೇರಿದ್ದ ಕೋಟೆಗಳನ್ನು ಮರಳಿ ಕಸಿದುಕೊಂಡರು. ಔರಂಗಜೇಬನು ಮರಾಠರನ್ನು ಮುರಿಯಬೇಕೆಂಬ ಮಾಡಿದ ಪ್ರಯತ್ನವು ನಿರರ್ಥಕವಾಯಿತು. ಮುಂದೆ ತುಸು ದಿವಸಗಳಲ್ಲಿ ಬಾದಷಾಹನು ಬೇನೆಬಿದ್ದು ಕ್ರಿ. ಶ. **೧೭೦೭** ರಲ್ಲಿ ಮರಣ ಹೊಂದಿದನು. ಔರಂಗಜೇಬನು **೧೬೮೧** ರಲ್ಲಿ ದಕ್ಷಿಣಕ್ಕೆಬಂದು ಮರಾಠರೊಡನೆ ಆರಂಭಿಸಿದ ಯುದ್ಧವು ಇಲ್ಲಿಗೆ ಮುಗಿಯಿತು. ಮೊಗಲರ ತಡೆಯು ತಪ್ಪಿದ್ದರಿಂದ ಮರಾಠರು ಮುಂದೆ ಹೆಚ್ಚು ಹೆಚ್ಚು ಪ್ರಬಲರಾದರು.

**೩. ಶಾಹುವಿನ ಬಿಡುಗಡೆ**:- ಔರಂಗಜೇಬನ ತರುವಾಯ ಬಾದಶಾಹನಾದ ಬಹದ್ದೂರಶಾಹನು ಜುಲ್ಫಕ್ಕಾರಖಾನನ ಹೇಳಿಕೆಯಂತೆ ಶಾಹುವಿನ ಬಿಡುಗಡೆ ಮಾಡಿದನು. ಶಾಹುವು ಬರುವುದನ್ನು ತಿಳಿದು **ಧನಾಜಿ ಜಾಧವ, ಖಂಡೋ ಬಲ್ಲಾಳ** ಮೊದಲಾದ ಸರದಾರರು ಶಾಹುವನ್ನು ಕೂಡಿದರು ಆಗ **ತಾರಾಬಾಯಿಯು** ತನ್ನ ಮಗನೊಡನೆ ಕೊಲ್ಲಾಪುರಕ್ಕೆ ಓಡಿಹೋಗಿ ಅಲ್ಲಿ ಹೊಸದೊಂದು ಸಿಂಹಾಸನವನ್ನು ಸ್ಥಾಪಿಸಿದಳು. ಶಾಹುವು ಸಾತಾರೆಯಲ್ಲಿ ಪಟ್ಟಕ್ಕೆ ಕುಳಿತ ಕೆಲವು ದಿವಸಗಳಲ್ಲಿ ಸೇನಾಪತಿಯಾದ ಧನಾಜಿ ಜಾಧವನು ಸಾಯಲು ಆ ಪದವು ಧನಾಜಿಯ ಮಗನಾದ ಚಂದ್ರಸೇನನಿಗೆ ದೊರೆಯದೆ **ಬಾಳಾಜಿ ವಿಶ್ವನಾಥನಿಗೆ** ದೊರೆಯಿತು ಆದದರಿಂದ ಚಂದ್ರಸೇನನು ಸಿಟ್ಟಾಗಿ ಅವನು ತಾರಾಬಾಯಿಯ ಕಡೆಗಾಗಿದ್ದರಿಂದ ಶಾಹುವಿಗೆ ಒಳ್ಳೆಯ ಕಠಿಣ ಪ್ರಸಂಗವಾಯಿತು. ಆಗ ಬಾಳಾಜಿಯು ಶೌರ್ಯ - ಚಾತುರ್ಯಗಳಿಂದ ಶಾಹುವಿನ ಅಧಿಕಾರವನ್ನು ಸ್ಥಿರಗೊಳಿಸಿದನು.

**೪. ಬಾಳಾಜಿ ವಿಶ್ವನಾಥನು ಪೇಶವೆಯಾದದ್ದು**:- ಇವನು ಶಿವಾಜಿ ಮಹಾರಾಜನ ಕಾಲದಲ್ಲಿ ಕೊಂಕಣದಿಂದ ಬಂದು ಧನಾಜಿಯ ಕೈಕೆಳಗೆ ಕೆಲಸಕ್ಕೆ ನಿಂತನು ಮುಂದೆ ಧನಾಜಿಯ ಪ್ರೀತಿಯನ್ನು ಸಂಪಾದಿಸಿ ಸರಸುಭೇದಾರಿಯ ಅಧಿಕಾರವನ್ನು ಪಡೆದನು ಧನಾಜಿಯ ತರುವಾಯ ಶಾಹುವು ಇವನನ್ನು ವಸೂಲಿ ಖಾತೆಯ ಮುಖ್ಯಸ್ಥನನ್ನು ಮಾಡಿದನು. ತರುವಾಯ ಸೇನಾಪತಿಯಾದನು. ಸೇನಾಪತಿಯಾಗಿದ್ದ ಕಾಲದಲ್ಲಿ ಪ್ರಬಲನಾದ **ಕಾನ್ಹೋಜಿ ಆಂಗ್ರೆ** ಎಂಬ ಸರದಾರನನ್ನು ಹಂಚಿಕೆಯಿಂದ ಶಾಹುವಿನ ಕಡೆಗೆ ಒಲಿಸಿಕೊಂಡನು ಶಾಹುವಿನ ವಿರುದ್ಧವಾಗಿದ್ದ ಖಟಾವಕರ ಮೊದಲಾದ ಸರದಾರರನ್ನು ಸೋಲಿಸಿದನು. ಆಗ ಶಾಹುವು ಸಂತುಷ್ಟನಾಗಿ ಬಾಳಾಜಿಗೆ ಪೇಶವೆಯ ಅಧಿಕಾರವನ್ನು ಕೊಟ್ಟು ರಾಜ್ಯದ ಎಲ್ಲ ಕಾರಭಾರವನ್ನು ಅವನ ಕಡೆಗೆ ಒಪ್ಪಿಸಿದನು. ಕ್ರಿ. ಶ. **೧೭೧೩.**

**೫. ಮರಾಠರ ಆಳಿಕೆಯ ಕೊನೆ**:— ಶಾಹುರಾಜನು ಸಂತತಿ ಇಲ್ಲದೆ ಕ್ರಿ. ಶ. ೧೭೪೯ರಲ್ಲಿ ಸಾಯಲು ಅವನ ಇಚ್ಛೆಯಂತೆ ಬಾಳಾಜಿ ಬಾಜೀರಾಯನು **ತಾರಾಬಾಯಿಯ** ಮೊಮ್ಮಗನಾದ ರಾಮರಾಜನನ್ನು ಪಟ್ಟದ ಮೇಲೆ ಕೂಡ್ರಿಸಿ

ದನು. ರಾಮರಾಜನ ತರುವಾಯ ೨ನೆಯ ಶಾಹು, ಪ್ರತಾಪಸಿಂಹ, ಶಹಾಜಿ ಎಂಬವರು ಒಬ್ಬರ ಬಳಿಕೊಬ್ಬರು ಸಾತಾರೆಯ ಅರಸರಾದರು. ಕ್ರಿ. ಶ. **೧೮೧೮**ರಲ್ಲಿ ಕಡೆಯ ಪೇಶ್ವೆಯಾದ **೨ನೆಯ ಬಾಜೀರಾಯ**ನು ಸೋತು ಇಂಗ್ಲಿಷರ ಆಧೀನನಾದ ಬಳಿಕ ಅವರು ಆಗ ಅರಸನಾಗಿದ್ದ ಪ್ರತಾಪಸಿಂಹನ ಕಡೆಗೆ **೧೪ ಲಕ್ಷ**ದ ಜಹಗೀರನ್ನು ಇಟ್ಟು, ಉಳಿದ ರಾಜ್ಯವನ್ನೆಲ್ಲ ತಮ್ಮ ರಾಜ್ಯಕ್ಕೆ ಕೂಡಿಸಿಕೊಂಡರು ಮುಂದೆ ಕ್ರಿ. ಶ. **೧೮೩೯**ರಲ್ಲಿ ಪ್ರತಾಪಸಿಂಹನು ತಮ್ಮ ವಿರುದ್ಧ ವರ್ತಿಸಿದನೆಂಬ ನೆವದಿಂದ ಇಂಗ್ಲಿಷರು ಅವನನ್ನು ತಳ್ಳಿ ಅವನ ತಮ್ಮನಾದ ಶಹಾಜಿಯನ್ನು ಅರಸನನ್ನು ಮಾಡಿದರು. ಈ ಶಹಾಜಿಯು ಕ್ರಿ. ಶ ೧೮೪೯ರಲ್ಲಿ ಸಂತತಿಯಿಲ್ಲದೆ ಮರಣ ಹೊಂದಲು ಇಂಗ್ಲಿಷರು ಅವನು ತೆಗೆದುಕೊಂಡ ದತ್ತಕಕ್ಕೆ ಒಪ್ಪಿಗೆಯನ್ನು ಕೊಡದೆ ಅವನ ಜಹಗೀರನ್ನು ತಮ್ಮ ರಾಜ್ಯಕ್ಕೆ ಸೇರಿಸಿಕೊಂಡರು.

**೬. ಮರಾಠರ ಅವನತಿಯ ಕಾರಣಗಳು:**—೧. ಔರಂಗಜೇಬನಂಥ ಬಲಾಢ್ಯ ಶತ್ರುವಿನೊಡನೆ ಒಂದೇಸವನೆ ೨೫ ವರ್ಷಗಳವರೆಗೆ ಹೋರಾಡುವದರಲ್ಲಿ ಮರಾಠರ ಶಕ್ತಿಯು ಕ್ಷೀಣವಾಯಿತು. ೨. ಸಂಭಾಜಿಯ ಅವಿಚಾರದ ಆಳಿಕೆಯಿಂದ ಶಿವಾಜಿಯ ಕಾಲದ ರಾಜ್ಯವ್ಯವಸ್ಥೆಯು ತಪ್ಪಿ, ಶತ್ರುಗಳಿಗೆ ಸಡಿಲು ಸಿಕ್ಕಿತು ೩. ರಾಜಾರಾಮನ ಕಾಲದಲ್ಲಿ ಜಹಗೀರುಗಳನ್ನು ಪಡೆದ ಸರದಾರರು ಮುಂದೆ ರಾಜ್ಯದ ಹಿತವನ್ನು ಮರೆತು ಸ್ವಾರ್ಥವನ್ನು ಸಾಧಿಸಹತ್ತಿದರು. ೪. ತಾರಾಬಾಯಿ ಮತ್ತು ಶಾಹು ಇವರ ಜಗಳದಲ್ಲಿ ಎರಡೂ ಕಡೆಯ ಶೂರ ಮರಾಠರ ಸರದಾರರು ತಮ್ಮ ತಮ್ಮೊಳಗೆ ಬಡಿದಾಡಿ ಹಣ್ಣಾದರು. ೫. ಶಾಹುರಾಜನು ಎಲ್ಲ ಕಾರಭಾರವನ್ನು ಪೇಶವೆಯರ ಕಡೆಗೆ ಒಪ್ಪಿಸಿ ತಾನು ವಿಲಾಸದಲ್ಲಿರಹತ್ತಿದ್ದರಿಂದ ಸ್ವಾಭಾವಿಕವಾಗಿ ಪೇಶವೆಯರ ವರ್ಚಸ್ಸು ಹೆಚ್ಚಿತು. ೬. ಶಾಹುರಾಜನ ತರುವಾಯ ಪಟ್ಟಕ್ಕೆ ಬಂದ ಅರಸರು ದುರ್ಬಲರಾಗಿದ್ದರು.

---

# ೬ ನೆಯ ಪಾಠ

## ಔರಂಗಜೇಬನ ನಂತರದ ಮೊಗಲರ ಸಾಮ್ರಾಜ್ಯ

**೧. ಔರಂಗಜೇಬನ ತರುವಾಯದ ಪರಿಸ್ಥಿತಿ:**— ಔರಂಗಜೇಬನು ಮರಣ ಹೊಂದಿದ ಬಳಿಕ ಮೊಗಲ ಸಾಮ್ರಾಜ್ಯದ ಬಲವು ಕಡಿಮೆ ಆಯಿತು.

ದುರ್ಬಲರಾದ ಬಾದಷಾಹರು ಪಟ್ಟಕ್ಕೆ ಬರಹತ್ತಿದ್ದರಿಂದ ಬೇರೆ ಬೇರೆ ಪ್ರಾಂತಗಳ ಸುಭೇದಾರರು ಹೆಸರಿಗೆ ಮಾತ್ರ ದಿಲ್ಲಿಯ ಬಾದಷಾಹರಿಗೆ ಅಂಕಿತರಾಗಿದ್ದು ತಮ್ಮ ತಮ್ಮ ಪ್ರಾಂತಗಳ ಕಾರಭಾರವನ್ನು ಸ್ವತಂತ್ರವಾಗಿ ಸಾಗಿಸಹತ್ತಿದರು ಗಟ್ಟಿಗರಾದ ಸರದಾರರು ಬಾದಷಾಹರನ್ನು ತಮ್ಮ ಅಂಕಿತದಲ್ಲಿ ಇಟ್ಟುಕೊಳ್ಳುವ ಸಾಹಸದಲ್ಲಿ ತೊಡಗಿದರು ಪಂಜಾಬದಲ್ಲಿ ಶೀಖರು ಪ್ರಬಲರಾದರು. ಮರಾಠರು ಉತ್ಕರ್ಷವನ್ನು ಹೊಂದಿ ಮೊಗಲ ಸರದಾರರ ಆಟವನ್ನು ಸಾಗಗೊಡದೆ ದಿಲ್ಲಿಯ ಒಡೆಯರನ್ನು ತಮ್ಮ ಅನುಮತಿಯಂತೆ ನಡೆಯಹಚ್ಚಿದರು ಇಂಗ್ಲಿಷರು ಹೆಚ್ಚಳವನ್ನು ಹೊಂದುತ್ತ ದಿಲ್ಲಿಯ ಬಾದಷಾಹರಿಂದ ಹೆಚ್ಚುಹೆಚ್ಚು ಅಧಿಕಾರಗಳನ್ನು ಪಡೆಯಹತ್ತಿದರು ಮೊಗಲರ ಕಡೆಯ ಬಾದಷಾಹನಾದ ಬಹದ್ದೂರ ಷಾಹನು ಕ್ರಿ ಶ. **೧೮೫೮**ರಲ್ಲಿ ಬಂಡಾಯದಲ್ಲಿ ಸೇರಿದನೆಂದು ಇಂಗ್ಲಿಷರು ಅವನನ್ನು ಸೆರೆಯಲ್ಲಿಟ್ಟರು. ಅವನು ಕ್ರಿ ಶ **೧೮೬೨**ರಲ್ಲಿ ಸಾಯಲು ಮೊಗಲ ವಂಶವು ನಿಂತುಹೋಯಿತು. ಔರಂಗಜೇಬನ ತರುವಾಯ ಒಟ್ಟಿಗೆ ಒಂಬತ್ತು ಜನ ಅರಸರು ದಿಲ್ಲಿಯ ಪಟ್ಟಕ್ಕೆ ಬಂದರು. ಅವರೊಳಗಿನ ಮೊದಲಿನ ಆರು ಮಂದಿ ಕೆಲವು ಮಟ್ಟಿಗಾದರೂ ಸ್ವತಂತ್ರವಾಗಿ ಆಳಿದರು. ಕ್ರಿ ಶ. ೧೭೬೧ರ ತರುವಾಯ ಆಳಿದ ಮೂವರು ಹೆಸರಿಗೆ ಮಾತ್ರ ಬಾದಷಾಹರಾಗಿದ್ದರು.

**೨. ೧ ನೆಯ ಬಹದ್ದೂರಷಾಹ** :— ಕ್ರಿ. ಶ. **೧೭೦೭—೧೭೧೨.** ಔರಂಗಜೇಬನು ಮರಣಹೊಂದಿದ ಬಳಿಕ ಕಾಬೂಲದಲ್ಲಿದ್ದ **ಮುಅಜ್ಜಮನು** ತಡಮಾಡದೆ ರಾಜಧಾನಿಗೆ ಬಂದು **ಬಹದ್ದೂರಷಾಹ** ಎಂಬ ಹೆಸರಿನಿಂದ ಪಟ್ಟಕ್ಕೆ ಕುಳಿತನು. ಬಹದ್ದೂರಷಾಹನು ಅಷ್ಟು ಪರಾಕ್ರಮಿಯಲ್ಲದಿದ್ದರೂ ಸಮರ್ಥರಾದ ಸರದಾರರನ್ನು ಯುಕ್ತಿಯಿಂದ ತನ್ನ ಕಡೆಗೆ ಒಲಿಸಿಕೊಂಡನು. ರಜಪುತರೊಡನೆ ಸ್ನೇಹವನ್ನು ಬಳಿಸಿದನು. ಮೊಗಲರ ವಿರುದ್ಧ ಹೋಗುವದಿಲ್ಲೆಂಬ ಒಪ್ಪಿಗೆ ತೆಗೆದುಕೊಂಡು ಶಾಹುವಿನ ಬಿಡುಗಡೆ ಮಾಡಿದನು. ಪಂಜಾಬದ ಶೀಖರೊಡನೆ ಯುದ್ಧಮಾಡಬೇಕಾಯಿತು. ಈ ಯುದ್ಧದ ಸಂಗತಿಯನ್ನು ತಿಳಕೊಳ್ಳುವ ಮೊದಲು ಶೀಖರ ಪೂರ್ವೇತಿಹಾಸವನ್ನು ಅರಿತುಕೊಳ್ಳುವದು ಅವಶ್ಯವು.

**ಶೀಖರ ಉದಯ** :— ಶೀಖರು ಪಂಜಾಬದ ನಿವಾಸಿಗಳು ಇವರ ಜನಸಂಖ್ಯೆಯು ಸುಮಾರು ಮೂವತ್ತು ಲಕ್ಷ ಇರುವದು. ಧರ್ಮಾಭಿಮಾನ,

ಶೌರ್ಯಗಳ ವಿಷಯವಾಗಿ ಈ ಜನಾಂಗವು ಒಳ್ಳೆಯ ಹೆಸರಾಗಿರುವದು. ಇವರ ಧರ್ಮಕ್ಕೆ **ಶೀಖ** ಧರ್ಮವೆನ್ನುವರು

ಶೀಖ ಧರ್ಮದ ಸಂಸ್ಥಾಪಕನಾದ **ಗುರು ನಾನಕನು** ಕ್ರಿ. ಶ. **೧೪೬೯** ರಲ್ಲಿ ಹುಟ್ಟಿದನು. ಹಿಂದು ಮುಸಲ್ಮಾನರಲ್ಲಿಯ ಹಗೆತನವನ್ನು ಇಲ್ಲದಂತೆ ಮಾಡುವದಕ್ಕಾಗಿ **ಕಬೀರದಾಸ** ನಂತೆಯೆ ಇವನು ಉಪದೇಶಮಾಡ ಹತ್ತಿದನು. "ದೇವರು ಒಬ್ಬನೇ; ಸತ್ಕರ್ಮಗಳಿಂದ ಆತನು ಪ್ರಸನ್ನನಾಗುವನು; ಒಬ್ಬರಕೂಡೊಬ್ಬರು ಪ್ರೇಮದಿಂದ ವರ್ತಿಸಬೇಕು; ಮೂರ್ತಿಯನ್ನು ಪೂಜಿಸಬಾರದು; ಗೋವಧೆಯನ್ನು ಮಾಡಲಗದು" ಎಂಬುದು ಇವನ ಉಪದೇಶದ ಸಾರವಾಗಿತ್ತು. ಈ ಉಪದೇಶದಂತೆ ಬಹು ಜನರು ಈತನ ಅನುಯಾಯಿಗಳಾದರು. ಇವರೇ ಶಿಷ್ಯರು ಅಥವಾ **ಶೀಖರು** ಎಂಬ ಹೆಸರನ್ನು ಹೊಂದಿದರು. ಶೀಖಧರ್ಮದ ಆದಿಗುರುವೆನಿಸಿದ ಈ ನಾನಕನು ಕ್ರಿ. ಶ. **೧೫೩೮** ರಲ್ಲಿ ದೇಹವಿಟ್ಟನು



**ಗುರು ನಾನಕ**

ಗುರು ನಾನಕನ ತರುವಾಯ ಶೀಖಧರ್ಮದ ಹತ್ತು ಜನ ಗುರುಗಳಾದರು. ಅಕ್ಬರನ ಆಳಿಕೆಯ ಕೊನೆಯವರೆಗೆ ಇವರು ಶಾಂತರೀತಿಯಿಂದ ಧರ್ಮಪ್ರಸಾರವನ್ನು ಮಾಡುತ್ತಿದ್ದರು. ೫ನೆಯ ಗುರುವಾದ **ಅರ್ಜುನಸಿಂಗನು** ಅಮೃತಸರದಲ್ಲಿ ಶೀಖರ ಪವಿತ್ರ ಸ್ಥಳವೆನಿಸುವ **ಸುವರ್ಣ ಮಂದಿರವನ್ನು** ಕಟ್ಟಿಸಿದನು. ಇವನ ಆಜ್ಞೆಯಂತೆ **ಗ್ರಂಥಸಾಹೇಬ** ಎಂಬ ಧರ್ಮಗ್ರಂಥವು ಪಂಜಾಬೀ ಭಾಷೆಯಲ್ಲಿ ರಚಿಸಲ್ಪಟ್ಟಿತು

ಜಹಾಂಗೀರನ ಕಾಲದಿಂದ ಮೊಗಲರಿಗೂ ಶೀಖರಿಗೂ ವಿರೋಧವುಂಟಾಯಿತು. ಗುರು ಅರ್ಜುನಸಿಂಗನು ಖುಸ್ರುವಿಗೆ ಸಹಾಯಮಾಡಿದನೆಂಬ

ತಪ್ಪುಹೊರಿಸಿ, ಜಹಾಂಗೀರನು ಅವನನ್ನು ಕೊಲ್ಲಿಸಿದನು. ಅದು ವರೆಗೆ ಶಾಂತರಾಗಿದ್ದ ಸೀಖರು ಅಂದಿನಿಂದ ಉಗ್ರರಾದರು. ಅವರು ಧರ್ಮ ರಕ್ಷಣೆಗಾಗಿ ಶಸ್ತ್ರವನ್ನು ಧರಿಸಿ ತಮ್ಮ ಸಾಮರ್ಥ್ಯವನ್ನು ಹೆಚ್ಚಿಸಿದರು. ಮುಂದೆ ಔರಂಗಜೇಬನು ಶೀಖರನ್ನು ಬಹಳವಾಗಿ ಪೀಡಿಸಿ, ಅವರ ಒಂಬತ್ತನೆಯ ಗುರುವಾದ **ತೇಜಬಹಾದ್ದೂರ**ನನ್ನು ಸೆರೆಯಲ್ಲಿಡಲು ಅವನು ಅಲ್ಲಿಯೇ ಹತನಾದನು. ಬಳಿಕ ಹತ್ತನೆಯ ಗುರುವಾದ **ಗೋವಿಂದಸಿಂಗ**ನು ಶೀಖರಲ್ಲಿ ಹೊಸ ಚೈತನ್ಯವನ್ನುಂಟುಮಾಡಿ ಅವರಿಗೆ ಯುದ್ಧಕಲೆಯ ಶಿಕ್ಷಣವನ್ನು ಕೊಟ್ಟು ಬಲವಾದ ಸೈನ್ಯವನ್ನು ಸಜ್ಜುಗೊಳಿಸಿದನು. ಶೀಖರು ಮುಂದೆ ಹೆಸರಾದ ವೀರರೆನಿಸಿದರು. ಅವರು ಮೊಗಲರಸೈನ್ಯದೊಂದಿಗೆ ಆಗಾಗ್ಗೆ ಕಾದಬೇಕಾಯಿತು ಔರಂಗಜೇಬನು ಗುರುಗೋವಿಂದಶಿಂಗನ ಇಬ್ಬರು ಮಕ್ಕಳನ್ನು * ಕೊಲ್ಲಿಸಿದನು. ಗೋವಿಂದಸಿಂಗನು ಅಡವಿಯ ಪಾಲಾಗಿ ಕಡೆಗೆ ದಕ್ಷಿಣಕ್ಕೆ ಬಂದಾಗ **ನಾಂದೇಡ**ದಲ್ಲಿ ಅಫಗಾನರಿಂದ ಹತನಾದನು ಆದರೆ ಈ ತರದ ಛಲದಿಂದ ಶೀಖರು ಹಿಮ್ಮೆಟ್ಟದೆ ಮತ್ತಿಷ್ಟು ಹಟದಿಂದ ಶತ್ರುಗಳೊಡನೆ ಕಾದಹತ್ತಿದರು.

ಬಹಾದ್ದೂರಷಾಹನ ಆಳಿಕೆಯಲ್ಲಿ **ಬಂದಾ** ಎಂಬವನು ಶೀಖರ ಮುಂದಾಳಾಗಿ, ಸರಹಿಂದದಲ್ಲಿ ಮುಸಲ್ಮಾನರ ಮೇಲೆ ಭಯಂಕರವಾದ ಸೇಡುತೀರಿಸಿದನು. ಆಗ ಬಹದ್ದೂರಷಾಹನು ದೊಡ್ಡ ಸೈನ್ಯದೊಂದಿಗೆ ಶೀಖರ ಮೇಲೆ ನಾಗಿ ಅವರನ್ನು ಚದರಿಸಿದನು. ಬಳಿಕ ಬಹದ್ದೂರಷಾಹನು ಸ್ವಲ್ಪ ದಿವಸಗಳಲ್ಲಿ ಮರಣ ಹೊಂದಿದನು. ಕ್ರಿ. ಶ. ೧೭೧೨

೩ **ಜಹಾಂದಾರಷಾಹ:**— ಕ್ರಿ. ಶ.**೧೭೧೨ ೧೭೧೩** ಮತ್ತು **ಫರುಕ್ ಶಿಯರ:**— ಕ್ರಿ. ಶ. **೧೭೧೩ ೧೭೧೯** ಬಹದ್ದೂರಷಾಹನ ತರುವಾಯ ಆತನ ಮಕ್ಕಳಲ್ಲಿ **ಜಹಾಂದಾರಷಾಹ** ಎಂಬವನು ಪಟ್ಟಕ್ಕೆ ಕುಳಿತನು. ಆದರೆ ಜಹಾಂದಾರಷಾಹನ ತಮ್ಮನ ಮಗನೂ ಬಂಗಾಲದ ಸುಭೇದಾರನೂ ಆಗಿದ್ದ ಫರುಕ್ ಶಿಯರನು **ಸಯ್ಯದ ಹುಸೇನ, ಸಯ್ಯದ ಅಬ್ದುಲ್ಲಾ** ಎಂಬ ಬಂಧುಗಳ ಸಹಾಯದಿಂದ ಜಹಾಂದರಷಾಹನನ್ನು ಸೋಲಿಸಿ ಪಟ್ಟವನ್ನು ಹಿಡಿದುಕೊಂಡನು. ಬಳಿಕ ಸೈಯದಹುಸೇನನು ಸೇನಾಪತಿಯೂ,ಸಯ್ಯದ ಅಬ್ದುಲ್ಲನು ಮಂತ್ರಿಯೂ

---

* ಜದುನಾಥ ಸರಕಾರ ಕೃತ ಹಿಸ್ಟರಿ ಆಫ್ ಔರಂಗಜೇಬ ಖಂಡ ಪುಟ ೩೧೯.

ಆದರು. ಆದರೆ ಮುಂದೆ ಈ ಸಯ್ಯದ ಬಂಧುಗಳ ಕೈಯಲ್ಲಿರುವದು ಫರುಕಶಿಯರನ ಮನಸ್ಸಿಗೆ ಬರಲಿಲ್ಲ. ಸಯ್ಯದ ಹುಸೇನನನ್ನು ದಕ್ಷಿಣದ ವ್ಯವಸ್ಥೆಗಾಗಿ ಕಳುಹಿ ಅವನನ್ನು ನಾಶಗೊಳಿಸಬೇಕೆಂದು ದಾವೂದಖಾನನಿಗೆ ಸೂಚಿಸಿದನು. ಅಲ್ಲಿ ಹುಸೇನನೇ ಗೆದ್ದದರಿಂದ ಬಾದಷಾಹನ ಈ ಪ್ರಯತ್ನವೂ ಹುಸಿಯಾಯಿತು ಇಷ್ಟರಲ್ಲಿ ಬಾದಷಾಹನು ಸಯ್ಯದ ಅಬ್ದುಲನನ್ನು ಮಂತ್ರಿ ಪದದಿಂದ ಕಿತ್ತಿ ಹಾಕುವ ಯೋಜನೆಯಲ್ಲಿರುವನೆಂಬುದು ಹುಸೇನನಿಗೆ ತಿಳಿಯಿತು. ಆಗ ಅವನು ಮರಾಠರ ಸಹಾಯವನ್ನು ಹೊಂದಿ ದಿಲ್ಲಿಯ ಮೇಲೆ ಸಾಗಿಬಂದನು. ಸಯ್ಯದ ಬಂಧುಗಳ ಅಧಿಕಾರವೂ ಮರಾಠರ ವರ್ಚಸ್ಸೂ ದಿಲ್ಲಿಯ ಮೇಲೆ ನೆಲೆಗೊಂಡಿತು. ಬಳಿಕ ಸೈಯದರು ಫರುಕಶಿಯರನನ್ನು ಕೊಂದುಬಿಟ್ಟರು.

---

# ೭ನೆಯ ಪಾಠ

## ಔರಂಗಜೇಬನ ನಂತರದ ಮೊಗಲರ ಸಾಮ್ರಾಜ್ಯ

(ಮುಂದೆ ಸಾಗಿದ್ದು)

೧. **ಮಹಮ್ಮದಷಾಹ:**— ಕಿ. ಶ. **೧೭೧೯–೧೭೪೮.** ಫರುಕ್‌ಶಿಯರನ ಕೊಲೆಯಾದಬಳಿಕ ಬಾಹದ್ದೂರಷಾಹನ ೩ನೆಯ ಮೊಮ್ಮಗನಾದ ರೋಷನ ಅಖ್ತರ (ಮಹಮ್ಮದಷಾಹ) ನನ್ನು ಸಯ್ಯದ ಬಂಧುಗಳು ಪಟ್ಟಕ್ಕೆ ತಂದರು. ದಿಲ್ಲಿಗೆ ಬಂದ ಬಾಳಾಜಿವಿಶ್ವನಾಥ ಪೇಶವೆಯು ಸಂಭಾಜಿಯ ಹೆಂಡತಿಯಾದ ಯೇಸೂಬಾಯಿಯನ್ನು ಸೆರೆಯಿಂದ ಬಿಡಿಸಿಕೊಂಡು ದಕ್ಷಿಣಕ್ಕೆ ಬಂದನು. ಕ್ರಿ. ಶ. **೧೭೧೯.** ಮರಾಠರಿಗೆ ಮೊಗಲ ಬಾದಷಾಹನಿಂದ ಚೌಥಾಯಿ-ಸರದೇಶ ಮುಖಿ ಎಂಬ ಅಧಿಕಾರಗಳು ದೊರೆತವು.

**ಸಯ್ಯದ ಬಂಧುಗಳ ಕೊಲೆ**:— ಮರಾಠರ ನೆರವನ್ನು ಪಡೆದರೆಂಬ ನೆವ ತೋರಿಸಿ ಅವರ ಪಕ್ಷವನ್ನು ಬಿಟ್ಟ **ಕಮುರುದ್ದೀನ** (ನಿಜಾಮುಲುಲ್ ಮುಲುಕ)ನು ದಕ್ಷಿಣಕ್ಕೆ ಬಂದು ಸಯ್ಯದರ ವಿರುದ್ಧ ಬಂಡನ್ನೆಬ್ಬಿಸಿದನು. ಇವನನ್ನು ಶಿಕ್ಷಿಸುವದಕ್ಕೆಂದು ಸಯ್ಯದ ಹುಸೇನನು ಬಾದಷಾಹನೊಂದಿಗೆ ದಕ್ಷಿಣಕ್ಕೆ ಬಂದನು. ಆಗ ನಿಜಾಮನ ಕಡೆಯವರು ಹುಸೇನನನ್ನು ಕೊಂದರು. ಕೂಡಲೆ ಮಹಮ್ಮದಷಾಹನು ರಾಜಧಾನಿಗೆ ಹೋಗಿ ಸಯ್ಯದ

ಅಬ್ದುಲ್‌ನನ್ನು ಸೋಲಿಸಿದನು. ತಮಗೆ ಬೇಕಾದ ನಾಲ್ವರು ಬಾದಶಾಹ ರನ್ನು ಪಟ್ಟಕ್ಕೆ ಕುಳ್ಳಿರಿಸಿ, ಎಲ್ಲ ಅಧಿಕಾರವನ್ನು ತಾವೇ ಸಾಗಿಸುತ್ತ ಬಂದ ಸಯ್ಯದರ ಆಳಿಕೆಯು ಇಲ್ಲಿಗೆ ನಿಂತಿತು. ಕ್ರಿ. ಶ. **೧೭೨೦.**

**ನಿಜಾಮ ಉಲ್‌ಮುಲುಕ:**— ಮುಂದೆ ಕೆಲವು ದಿವಸ ನಿಜಾಮ ಉಲ್‌ಮುಲುಕನು ಬಾದಶಾಹನ ಮಂತ್ರಿಯಾಗಿದ್ದನು. ರಾಜ್ಯದೊಳಗಿನ ಅವ್ಯವಸ್ಥೆಯನ್ನು ಕಳೆದು ಮೊಗಲ ಬಾದಶಾಹಿಯನ್ನು ಸ್ಥಿರಗೊಳಿಸುವದಕ್ಕಾಗಿ ಇವನು ಬಹಳ ಹೆಣಗಿದನು. ಆದರೆ ವಿಲಾಸಿಯಾದ ಮುಹಮ್ಮದಶಾಹನಿಗೂ ಆವನಂತಹ ಉಳಿದ ಸರದಾರರಿಗೂ ನಿಜಾಮನ ಕಾರಭಾರವು ಸರಿಬರಲಿಲ್ಲ. ಅವರು ಇವನನ್ನು ತೊಂದರೆಗೊಳಿಸಹತ್ತಿದರು. ಕಡೆಗೆ ನಿಜಾಮನು ಬೇಸರ-ಗೊಂಡು ದಿಲ್ಲಿಯಿಂದ ದಕ್ಷಿಣಕ್ಕೆ ಬಂದು ಹೆಸರಿಗೆ ಬಾದಶಾಹನ ಒಡೆತನ ವನ್ನೊಪ್ಪಿ ತನ್ನ ಪ್ರಾಂತದ ಕಾರಭಾರವನ್ನು ಸ್ವತಂತ್ರವಾಗಿ ಸಾಗಿಸಹತ್ತಿದನು. ಕ್ರಿ. ಶ. **೧೭೨೪** ಭಾಗಾನಗರ (ಹೈದರಾಬಾದ) ವನ್ನು ತನ್ನ ರಾಜಧಾನಿಯನ್ನು ಮಾಡಿಕೊಂಡನು.

**ಮರಾಠರ ಪ್ರಾಬಲ್ಯ :**— ಮುಹಮುದಶಾಹನ ಕಾಲದಲ್ಲಿ ಮರಾಠರು ಮೊದಲಿಗಿಂತ ಹೆಚ್ಚು ಪ್ರಬಲರಾದರು. ಪೇಶ್ವೆಯಾದ ಮೊದಲನೇ ಬಾಜಿ-ರಾಯನು ಭೋಪಾಳದ ಬಳಿಯಲ್ಲಿ ನಿಜಾಮ ಉಲ್‌ಮುಲುಕನನ್ನು ಸೋಲಿಸಿ ಮೊಗಲರಿಂದ ಚೌಥಾಯಿಯ ಹಕ್ಕನ್ನು ಪಡೆದುಕೊಂಡನು. ಕ್ರಿ. ಶ. **೧೭೩೮.**

**ನಾದಿರಶಾಹನ ದಾಳಿ :**— ಕ್ರಿ. ಶ **೧೭೩೯.** ಮೊಗಲರ ಅಧಿಕಾರವು ಬಲಗುಂದುತ್ತ ನಡೆದಾಗ ಇರಾಣದ ಬಾದಶಾಹನಾದ ನಾದಿರಶಾಹನು ದಿಲ್ಲಿಯಮೇಲೆ ಸಾಗಿಬಂದು ಸಾವಿರಗಟ್ಟಲೆ ಜನರ ಕೊಲೆಮಾಡಿ ೨೫ ೩೦ ಕೋಟಿ ರೂಪಾಯಿಗಳನ್ನೂ ಷಾಹೆಜಹಾನನ ಮಯೂರಾಸನವನ್ನೂ ಕೋಹೆನೂರ (ಪರ್ವತದ ಪ್ರಕಾಶ) ಎಂಬ ರತ್ನವನ್ನೂ ಇರಾಣಕ್ಕೆ ಒಯ್ದನು.

**ನಾದಿರಶಾಹನ ದಾಳಿಯ ನಂತರದ ಸ್ಥಿತಿ :**— ೧೭೪೦—೧೭೪೮. ನಾದಿರಶಾಹನ ದಾಳಿಯಿಂದ ಮೊಗಲರ ಅಧಿಕಾರವು ತೀರಕಡಿಮೆಯಾಯಿತು. ಸಿಂಧು ನದದ ಆಚೆಯ ಸೀಮೆಯು ಇರಾಣದ ರಾಜ್ಯಕ್ಕೆ ಸೇರಿತು. ಪಂಜಾಬ

ದಲ್ಲಿ ಶೀಖರೂ,ರೋಹಿಲಖಂಡದಲ್ಲಿ ರೋಹಿಲರೂ ಪ್ರಬಲರಾದರು. ಅಯೋಧ್ಯ ಬಂಗಾಲಗಳ ಸುಭೇದಾರರು ನವಾಬರೆಂಬ ಹೆಸರಿನಿಂದ ಸ್ವತಂತ್ರರಾದರು. ಮರಾಠರು ಕ್ರಿ. ಶ. ೧೭೪೮ರ ವರೆಗೆ ಗುಜರಾಥ, ಮಾಳವ ಪ್ರಾಂತಗಳನ್ನು ವಶಮಾಡಿಕೊಂಡರು. ನಾದಿರಷಾಹನ ಮರಣದ ನಂತರ ಅವನ ಸೇನಾಪತಿಯಾದ ಅಹಮ್ಮದಷಾಹ ಅಬ್ದಾಲಿಯು ಕಾಬೂಲದ ಅರಸನಾಗಿ ಹಿಂದು-ಸ್ಥಾನದ ಮೇಲೆ ದಾಳಿ ಮಾಡಿದನು. ಕ್ರಿ. ಶ. ೧೭೪೮ರಲ್ಲಿ ಮಹಮ್ಮದಷಾಹನೂ ನಿಜಾಮನೂ, ಶಾಹೂರಾಜನೂ ಮರಣ ಹೊಂದಿದರು. ನಿಜಾಮು ಉಲ್‌ಮುಲುಕನ ಮಕ್ಕಳಲ್ಲಿ ಪಟ್ಟದ ಸಲುವಾಗಿ ಜಗಳ ಹುಟ್ಟಿ ಇಂಗ್ಲಿಷರಿಗೂ ಫ್ರೆಂಚರಿಗೂ ಅಲ್ಲಿ ತಮ್ಮ ತಮ್ಮ ವರ್ಚಸ್ಸನ್ನು ನೆಲೆಗೊಳಿಸಲು ಅನುಕೂಲವುಂಟಾಯಿತು. ಆದದರಿಂದ ಹಿಂದುಸ್ಥಾನದ ಇತಿಹಾಸದಲ್ಲಿ ೧೭೪೮ ೪೯ರ ವರೆಗಿನ ಕಾಲವು ಮಹತ್ವದ್ದೆಂದು ಹೇಳಬಹುದು

**ಅಹಮ್ಮದಷಾಹ** :— ಕ್ರಿ. ಶ. **೧೭೪೮-೧೭೫೪.** ಇವನು ಮಹಮ್ಮದಷಾಹನ ಮಗನು. ಇವನ ಆಳಿಕೆಯಲ್ಲಿ ಅಬ್ದಾಲಿಯು ದಾಳಿಮಾಡಿ ಲಾಹೋರ, ಮುಲತಾನ ಎಂಬ ಸುಭೆಗಳನ್ನು ತನ್ನ ವಶಮಾಡಿಕೊಂಡನು. ಕ್ರಿ.ಶ. **೧೭೫೧.** ದಿಲ್ಲಿಯಲ್ಲಿ ಮೊಗಲ ಸುಭೇದಾರರಲ್ಲಿ ಜಗಳಗಳು ಉಂಟಾದವು. ನಿಜಾಮು ಉಲ್‌ಮುಲುಕನ ಮಗ **ಗಾಜೀಉದ್ದೀನ**ನೆಂಬ ವಜೀರನು ಅಹಮ್ಮದಷಾಹನನ್ನು ಕೊಂದು ಜಹಾಂದಾರಷಾಹನ ಮಗನಾದ **೨ನೆಯ ಆಲಂಗೀರ**ನನ್ನು ಪಟ್ಟಕ್ಕೆ ತಂದನು. ಕ್ರಿ. ಶ. ೧೭೫೪.

**೨ನೆಯ ಆಲಂಗೀರ** :— ಕ್ರಿ. ಶ. **೧೭೫೪-೧೭೬೧.** ಗಾಜೀಉದ್ದೀನನ ಉತ್ಕರ್ಷವು ರೋಹಿಲರ **ನಜೀಬಖಾನ**ನಿಗೆ ತಡೆಯಲಿಲ್ಲ. ಅವನು ಗಾಜೀಉದ್ದೀನನ ನಾಶಕ್ಕಾಗಿ ಅಬ್ದಾಲಿಯನ್ನು ಕರೆಯಿಸಿದನು. ಅಬ್ದಾಲಿಯು ಬಂದು ನಜೀಬಖಾನನಿಗೆ ವಜೀರಿಯ ಕೆಲಸವನ್ನು ಕೊಡಿಸಿ ಪಂಜಾಬದ ಅಧಿಕಾರಿಯ ಸ್ಥಳಕ್ಕೆ ತನ್ನ ಮಗ **ತೈಮೂರಷಾಹ**ನನ್ನು ಗೊತ್ತುಮಾಡಿ ತನ್ನ ದೇಶಕ್ಕೆ ಹೋದನು ಕೂಡಲೆ ಗಾಜೀಉದ್ದೀನನು ಮರಾಠರ ಸಹಾಯವನ್ನು ಪಡೆದು ಕಳೆದುಕೊಂಡಿದ್ದ ತನ್ನ ವಜೀರಿಯನ್ನು ಮರಳಿ ಸಂಪಾದಿಸಿದನು. ಇವನು ಚುಚ್ಚಿಕೊಟ್ಟಿದ್ದರಿಂದ ರಘುನಾಥರಾಯನು ಕ್ರಿ. ಶ. ೧೭೫೮ರಲ್ಲಿ ಪಂಜಾಬದ ಮೇಲೆ ದಾಳಿಯನ್ನು ಮಾಡಿ ತೈಮೂರಷಾಹನನ್ನು ಓಡಿಸಿ

ದನು. ಈ ದಾಳಿಯೇ ಕ್ರಿ. ಶ. ೧೭೬೧ರಲ್ಲಾದ ಪಾನಿಪತದ ೩ನೇ ಯುದ್ಧದ ಕಾರಣವಾಯಿತು. ಈ ಯುದ್ಧದ ಸಂಗತಿಯು ಮುಂದೆ ವಿವರಿಸಲ್ಪಡುವದು. ಇತ್ತ ಗಾಜೀಉದ್ದೀನನು ೨ನೆಯ ಆಲಂಗೀರನನ್ನು ಕೊಂದು ಒಬ್ಬ ಅರಸು ಮಗನನ್ನು ಪಟ್ಟದಮೇಲೆ ಕುಳ್ಳಿರಿಸಿದನು.

ಇಲ್ಲಿಗೆ ಮೊಗಲಬಾದಷಾಹರ ಅಧಿಕಾರವು ಎಷ್ಟೊ ನಡೆಯುದಾಯಿತು. ಮುಂದಿನ ಮೂರು ನಾಲ್ಕು ಜನ ಅರಸರು ಹೆಸರಿಗೆ ಬಾದಷಾಹರೆನಿಸಿ, ಮರಾಠರ ಇಲ್ಲವೆ ಇಗ್ಲಿಷರ ಕೈಯೊಳಗಿನ ಗೊಂಬೆಗಳಂತೆ ಇದ್ದರು

**ಷಾಹೆ ಆಲಮ** :— ಕ್ರಿ. ಶ. **೧೭೬೧-೧೮೦೬** ೨ನೆಯ ಆಲಮಗೀರನ ಕೊಲೆಯಾದಾಗ ಅವನ ಮಗನಾದ **ಅಲೀಗೌಹರನು** ಬಿಹಾರದ ಮೇಲೆ ದಂಡೆತ್ತಿ ಹೋಗಿದ್ದನು. ದಿಲ್ಲಿಯ ಅಧಿಕಾರವೆಲ್ಲ ಗಾಜೀ ಉದ್ದೀನನ ಕೈಸೇರಿದ್ದ ರಿಂದ ಇವನು ದಿಲ್ಲಿಗೆ ಬರಲಾಗದೆ ಅಲ್ಲಿಯೇ ಷಾಹೆಆಲಮ ಎಂಬ ಹೆಸರಿ ನಿಂದ ತಾನೇ ಬಾದಷಾಹನೆಂದು ಸಾರಿದನು. ಮುಂದೆ ಕ್ರಿ. ಶ. **೧೭೬೪**ರಲ್ಲಿ ಬಕ್ಸಾರದ ಬಳಿಯಲ್ಲಿ ಇಂಗ್ಲಿಷರ ಕೂಡ ಯುದ್ಧಮಾಡಿ ಸೋತು ಬಂಗಾಲ, ಬಿಹಾರ, **ಒಡಿ**ಸಾಗಳ ದಿವಾಣಿ ಅಧಿಕಾರವನ್ನು ಅವರಿಗೆ ಕೊಟ್ಟನು. ಕ್ರಿ. ಶ. **೧೭೭೧** ರಲ್ಲಿ **ಮಹದಾಜಿ ಶಿಂದೆಯು** ಪ್ರಬಲನಾಗಿ ಷಾಹೆಆಲಮನನ್ನು ದಿಲ್ಲಿಗೆ ಕರೆದೊಯ್ದು ಪಟ್ಟಗಟ್ಟಿದನು. ಈ ಸಂಗತಿಯನ್ನು ಕೇಳಿ ನಜೀಬಖಾನನ ಮಗ ಗುಲಾಮಖಾದರನು ಷಾಹೆಆಲಮನ ಕಣ್ಣುಗಳನ್ನು ಕೀಳಿಸಿದನು. ಈ ಸುದ್ದಿಯು ಮಹಾದಾಜಿ ಸಿಂಧೆಗೆ ತಿಳಿಯಲು ಅವನು ಗುಲಾಮಖಾದರ ನನ್ನು ಹಿಡತರಿಸಿ ಕ್ರೂರತನದಿಂದ ಕೊಲ್ಲಿಸಿದನು. ಮುಂದೆ ಕ್ರಿ. ಶ, ೧೮೦೩ರ ವರೆಗೆ ಷಾಹೆಆಲಮನು ಮರಾಠರ ವಶದಲ್ಲಿದ್ದನು. ಮರಾಠರ ಬಲವು ಕುಗ್ಗಿದ ಬಳಿಕ ಇವನು ಇಂಗ್ಲಿಷರ ಆಧೀನನಾದನು. ಅವರು ಇವನಿಗೆ ವರ್ಷಕ್ಕೆ ೯ ಸಾವಿರ ರೂಪಾಯಿ ಪೆನ್ಯನವನ್ನು ಗೊತ್ತುಮಾಡಿ ಇವನ ರಾಜ್ಯವನ್ನು ತಮ್ಮ ವಶಕ್ಕೆ ತೆಗೆದುಕೊಂಡರು.

ಕ್ರಿ. ಶ. ೧೮೦೬ರಲ್ಲಿ ಷಾಹೆಆಲಮನು ಸತ್ತಬಳಿಕ **ಅಕ್‌ಬರನು** ಕ್ರಿ. ಶ. ೧೮೩೭ರ ವರೆಗೂ ಅಕ್‌ಬರನು ಸತ್ತಬಳಿಕ ಅವನ ಮಗ ಬಹದ್ದೂರಷಾಹನೂ ಕ್ರಿ. ಶ ೧೮೫೭ರ ವರೆಗೂ ಈ ಪೆನ್ಯನವನ್ನು ಹೊಂದುತ್ತಿದ್ದರು. ಆದರೆ

ಬಹದ್ದೂರಷಾಹನು ಕ್ರಿ. ಶ. ೧೮೫೭ರ ಬಂಡಾಯದಲ್ಲಿ ಸೇರಿದನೆಂಬ ನೆವದಿಂದ ಇಂಗ್ಲಿಷರು ಅವನನ್ನು ರಂಗೂನದಲ್ಲಿ ಸೆರೆಯಿಟ್ಟರು. ಅಲ್ಲಿಯೇ ಅವನು **೧೮೬೨**ರಲ್ಲಿ ಸಾಯಲು ಮೊಗಲವಂಶತನವು ನಿಂತುಹೋಯಿತು. ಕ್ರಿ ಶ **೧೮೬೨.**

---

# ೮ ನೆಯ ಪಾಠ

## ಪೇಶವೆಯರ ಆಳಿಕೆಯ ಆರಂಭ

## ಮೊದಲನೆಯ ಪೇಶವೆ—ಬಾಳಾಜಿ ವಿಶ್ವನಾಥ

**೧. ಬಾಳಾಜಿಯ ರಾಜ್ಯವ್ಯವಸ್ಥೆಯು :—** ಇವನು **ಬಾಳಾಜಿಪಂತ ಭಾನೂ** ಎಂಬವನನ್ನು ತನ್ನ ಫಡನವೀಸನನ್ನು ಮಾಡಿಕೊಂಡನು. ಮತ್ತು **ಖಂಡೇರಾವ ದಾಬಡೆ, ಕಾನ್ಹೋಜಿ ಆಂಗ್ರೆ** ಮೊದಲಾದ ಸರದಾರರನ್ನು ಕೂಡಿಕೊಂಡು ಖಾನದೇಶ, ವರ್‍ಹಾಡ, ಮಾಳವ ಮೊದಲಾದ ಪ್ರಾಂತಗಳಲ್ಲಿ ಮರಾಠರ ವರ್ಚಸ್ಸು ನೆಲೆಗೊಳಿಸಿದನು ದಕ್ಷಿಣದ ಮೊಗಲ ಸುಭೇದಾರನಾದ ದಾವೂದಖಾನನಿಂದ ಮೊಗಲರ ದಕ್ಷಿಣದ ಆರು ಸುಭೆಗಳ ಚೌಥಾಯಿ ಯೆನ್ನೆತ್ತುವ ಅಧಿಕಾರವನ್ನು ಪಡೆದನು.

**೨. ಬಾಳಾಜಿಯು ಸಯ್ಯದ ಬಂಧುಗಳ ಸಹಾಯಕನಾಗಿ ಒಪ್ಪಂದ ಮಾಡಿಕೊಂಡದ್ದು :—** ಬಾಳಾಜಿ ವಿಶ್ವನಾಥನು ದಿಲ್ಲಿಯ ಬಾದಷಾಹನಾದ ಫರುಕ್‌ಶಿಯರನ ವಿರುದ್ಧವಾಗಿದ್ದ ಸಯ್ಯದ ಅಲಿಯ ಸಹಾಯಕನಾಗಿ ದಿಲ್ಲಿಗೆ ಹೋದನು ಅಲ್ಲಿ ಸಯ್ಯದರಿಂದ ಫರಕ್‌ಶಿಯರನು ಕೊಲ್ಲಲ್ಪಟ್ಟು ಮಹಮ್ಮದ ಷಾಹನು ಪಟ್ಟವೇರಿದನು. ಆಗ ಬಾಳಾಜಿಯು ಸಯ್ಯದರ ಕೂಡ ತಾನು ಮಾಡಿಕೊಂಡ ಒಪ್ಪಂದಕ್ಕೆ ಮಹಮ್ಮದಷಾಹನಿಂದ ಒಪ್ಪಿಗೆಯನ್ನು ಪಡಕೊಂಡನು. ಮತ್ತು **ಸ್ವರಾಜ್ಯ. ಚೌಥಾಯಿ, ಸರದೇಶಮುಖಿ** ಇವುಗಳ ಸನದುಗಳನ್ನು ಮೊರಕಿಸಿದನು. ಸಯ್ಯದರೊಡನೆ ಮಾಡಿಕೊಂಡ ಒಪ್ಪಂದದ ನಿಯಮಗಳು :—

**೧.** ಶಾಹುರಾಜನು ಮರಾಠರ ರಾಜ್ಯದ ಒಡೆಯನೆಂದು ಮೊಗಲರು ಒಪ್ಪಬೇಕು.

೨. ಮೊಗಲರ ದಕ್ಷಿಣದ ಸುಭೆಗಳ ಚೌಥಾಯಿ-ಸರದೇಶ ಮುಖಿಗಳ ನ್ನೆತ್ತುವ ಅಧಿಕಾರವು ಮರಾಠರಿಗೆ ಇರಬೇಕು.

೩. ಮರಾಠರು ೧೫ ಸಾವಿರ ಸೈನ್ಯವನ್ನು ಮೊಗಲರ ಸೇರವಿಗೆ ಇಡಬೇಕು.

೪. ದಕ್ಷಿಣದ ಸುಭೆಗಳ ಸಂರಕ್ಷಣೆಯನ್ನು ಮರಾಠರೇ ಮಾಡಬೇಕು

೫. ಮರಾಠರು ಪ್ರತಿವರ್ಷ ೧೦ ಲಕ್ಷ ರೂಪಾಯಿಗಳನ್ನು ಮೊಗಲರಿಗೆ ಕೊಡಬೇಕು.

೬. ಯೇಸೂಬಾಯಿಯನ್ನು ಪರಿವಾರದೊಡನೆ ಬಿಡಬೇಕು.

೩. **ಸರಂಜಾಮಿಾ ಪದ್ಧತಿ:**— ಬಾಳಾಜಿಯು ದಕ್ಷಿಣಕ್ಕೆ ಬಂದಬಳಿಕ ಪ್ರತಿಯೊಬ್ಬ ಸರದಾರನಿಗೆ ಒಂದೊಂದು ಪ್ರಾಂತದ ಜಹಗೀರನ್ನು ಹಾಕಿ ಕೊಟ್ಟನು. ದಾಭಾಡೆ ಖಂಡೇರಾಯನಿಗೆ ಖಾನದೇಶವೂ, ಕಾನ್ಹೋಜಿಗೆ ಕೊಂಕಣವೂ, ಪರಸೋಜಿಗೆ ವರ್ಹಾಡವೂ, ಉದಾಜಿ ಪವಾರನಿಗೆ ಮಾಳವವೂ ಫತ್ತೇಸಿಂಗನಿಗೆ ಕರ್ನಾಟಕವೂ ಜಹಗೀರಾಗಿ ದೊರೆತವು. ಈ ಸರದಾರರು ಛತ್ರಪತಿಯೊಡನೆ ನಡೆದುಕೊಳ್ಳುವ ಬಗೆಯು ಗೊತ್ತು ಮಾಡಲ್ಪಟ್ಟಿತು. ಅದು ಹೇಗೆಂದರೆ— ೧. ಸರದಾರರು ತಮ್ಮ ಜಹಗೀರುಗಳ ಕಾರಭಾರವನ್ನು ತಾವೇ ಸಾಗಿಸುತ್ತ ಉತ್ಪನ್ನದ ಗೊತ್ತಾದ ಪಾಲನ್ನು ಛತ್ರಪತಿಗೆ ಸಲ್ಲಿಸಬೇಕು. ೨. ಅರಸನ ಅಪ್ಪಣೆಯಂತೆ ತಮ್ಮ ಸೈನ್ಯದೊಡನೆ ಅವನ ಸಹಾಯಕ್ಕೆ ಬರಬೇಕು ೩. ಜಹಗೀರುಗಳ ಲೆಕ್ಕಪತ್ರಗಳನ್ನು ಛತ್ರಪತಿಗೆ ಒಪ್ಪಿಸಬೇಕು. **ಇದೇ ಸರಂಜಾಮಿಾ ಪದ್ಧತಿಯು** ಈ ಸರದಾರರ ಸಹಾಯದಿಂದ ಮರಾಠರ ರಾಜ್ಯವು ಸಾಮ್ರಾಜ್ಯವೆನಿಸಿ ದಿನದಿನಕ್ಕೆ ಬಲಿಯುಪುತ್ತಿತು.

೪. **ಬಾಳಾಜಿಯ ಯೋಗ್ಯತೆ:**— ದಕ್ಷಿಣಕ್ಕೆ ಮರಳಿ ಬಂದ ಬಳಿಕ ಬಾಳಾಜಿಯು ಬಹುದಿವಸ ಬಾಳಲಿಲ್ಲ; ಕ್ರಿ. ಶ. **೧೭೨೦** ರಲ್ಲಿ **ಸಾಸವಡ** ದಲ್ಲಿ ಮರಣಹೊಂದಿದನು. ಸಂಭಾಜಿಯ ಕಾಲದಿಂದ ರಾಜ್ಯದಲ್ಲಿ ಉಂಟಾಗಿದ್ದ ಅವ್ಯವಸ್ಥೆಯನ್ನು ಇಲ್ಲದಂತೆ ಮಾಡಿ, ಮರಾಠರ ರಾಜ್ಯವನ್ನು ಸ್ಥಿರಗೊಳಿಸಿ, ದಿಲ್ಲಿಯ ವರೆಗೆ ಅವರ ವರ್ಚಸ್ಸನ್ನು ನಲೆಗೊಳಿಸಿದನು ಇವನು ಸ್ವಾಮಿ-ಭಕ್ತನೂ ಪರಾಕ್ರಮಿಯೂ ಮುತ್ಸದ್ದಿಯೂ ಆಗಿದ್ದನು. **ಬಾಜೀರಾವ, ಚಿಮಣಾಜಿ ಅಪ್ಪಾ** ಎಂಬವರಿಬ್ಬರು ಇವನ ಮಕ್ಕಳು.

---

# ೯ನೆಯ ಪಾಠ

## ೨ನೆಯ ಪೇಶವೆ—ಬಾಜೀರಾವ ಬಾಳಾಜಿ

( ಕ್ರಿ. ಶ. ೧೭೨೦-೧೭೪೦ )

೧. **ಬಾಜೀರಾಯನು ಪೇಶ್ವೆಯಾದದ್ದು:—** ಬಾಜೀರಾಯನು ಮರಣಹೊಂದಿದ ಬಳಿಕ ಶಾಹುರಾಜನು ಅವನ ಹಿರಿಯ ಮಗನಾದ ಬಾಜೀರಾಯನಿಗೆ ಪೇಶವೆಯ ಅಧಿಕಾರವನ್ನು ಕೊಟ್ಟನು. ಬಾಜೀರಾಯನು ಪೇಶವೆಯಾದಕೂಡಲೆ, ತನ್ನ ಮಗನಾದ ಚಿಮಣಾಜಿ, ಖಂಡೇರಾವ ಮೊದಲಾದ ಸರದಾರರ ನೆರವಿನಿಂದ, ತಂದೆಯು ಕೈಕೊಂಡಿದ್ದ ರಾಜ್ಯವನ್ನು ಹಬ್ಬಿಸುವ ಕೆಲಸವನ್ನು ಒತ್ತರದಿಂದ ಸಾಗಿಸಿದನು. ಇವನು ಕ್ರಿ. ಶ. ೧೭೨೧-೧೭೨೪ರ ವರೆಗೆ ಖಾನದೇಶದ ಮೇಲೆಯೂ ಕ್ರಿ. ಶ. ೧೭೨೭ ರಲ್ಲಿ ಕರ್ನಾಟಕದ ಮೇಲೆಯೂ ದಾಳಿಮಾಡಿ ಅಲ್ಲಿ ಚೌಥಾಯಿಯ ಅಧಿಕಾರವನ್ನು ಪಡೆದನು.

೨ **ಸಿಂಧೆ ಹೊಳಕರರ ಉದಯ:— ರಾಣೋಜಿ ಸಿಂಧೆ** ಇವನ ಪೂರ್ವಜರು ಸಾತಾರೆ ಜಿಲ್ಹೆಯಲ್ಲಿಯ ಒಂದು ಊರಗೌಡರು ಬಡತನದ ಸಲುವಾಗಿ ಇವನು ಬಾಜೀರಾಯನ ಬಳಿಯಲ್ಲಿ ಸಣ್ಣ ಕೆಲಸಕ್ಕೆ ನಿಂತನು. ಮುಂದೆ ಇವನು ಒಳ್ಳೆಯ ಪ್ರಾಮಾಣಿಕನೆಂದು ಕಂಡದ್ದರಿಂದ ಬಾಜೀರಾಯನು ಇವನನ್ನು ದಂಡಿನಲ್ಲಿ ಸೇರಿಸಿ, ಹೋಳಕರನೊಡನೆ ಉತ್ತರಕ್ಕೆ ಕಳುಹಿದನು. **ಮಲ್ಹಾರರಾವ ಹೋಳಕರ**– ಇವನಾದರೂ ಗೌಡರ ಮನೆತನದವನೇ. ನೀರಾ ತೀರದಲ್ಲಿಯ **ಹೋಳ** ಎಂಬದು ಇವನ ಊರು. ಚಿಕ್ಕವನಿರುವಾಗ ಕುರಿಗಳನ್ನು ಕಾಯುತ್ತಿದ್ದನು. ಮುಂದೆ ಇವನು **ಖಾನದೇಶಕ್ಕೆ** ಹೋಗಿ ಪೇಶವೆಯ ದಂಡಿನಲ್ಲಿ ಸೇರಿದನು. ಬಾಜೀರಾಯನು ಇವನ ಯೋಗ್ಯತೆಯನ್ನು ಕಂಡು, ಇವನಿಗೆ **೫ ಸಾವಿರದ ಸರದಾರಿಕೆಯನ್ನು** ಕೊಟ್ಟನು **ಹೋಳಕರನು** ಇಂದೂರಲ್ಲಿಯೂ **ಸಿಂಧೆಯು** ಉಜ್ಜಯನಿಯಲ್ಲಿಯೂ ಇರಹತ್ತಿದರು.

೩. **ಬಾಜೀರಾಯನೂ ನಿಜಾಮನೂ:—** ಸಯ್ಯದರು ಬಲಗುಂದಿದ ಬಳಿಕ ಕ್ರಿ. ಶ. ೧೭೨೪ರಲ್ಲಿ ನಿಜಾಮ ಉಲ್ಮುಲ್ಕನು ದಕ್ಷಿಣಕ್ಕೆ ಬಂದು ಸ್ವತಂತ್ರನಾಗಿ ಆಳಹತ್ತಿದನು. ಆದದರಿಂದ ಮಹಮ್ಮದಷಾಹನು ನಿಜಾಮನ ಮೇಲೆ

ಸೈನ್ಯವನ್ನು ಕಳುಹಿದನು. ಆಗ ನಿಜಾಮನು ಬಾಜೀರಾಯನ **ಚೌಥಾಯಿ ಸರದೇಶಮುಖಿ**ಗಳ ಅಧಿಕಾರವನ್ನೊಪ್ಪಿ, ಅವನ ನೆರವಿನಿಂದ ಮೊಗಲ ಸೈನ್ಯವನ್ನು ಹಿಂದಕ್ಕಟ್ಟಿದನು. ನಿಜಾಮನು ಚೌಥಾಯಿ-ಸರದೇಶಮುಖಿಗಳ ಅಧಿಕಾರವನ್ನು ನಿರುಪಾಯವೆಂದು ಒಪ್ಪಿದನು. ಆದದರಿಂದ ಅವನು ಸಾಧಿಸಿದಾಗೆಲ್ಲ ಆ ಅಧಿಕಾರವನ್ನು ಅಲ್ಲಗಳೆದು ಬಾಜೀರಾಯನನ್ನು ವಿರೋಧಿಸಹತ್ತಿದನು. ಆಗ ಬಾಜೀರಾಯನು ನಿಜಾಮನ ಮೇಲೆ ಸಾಗಿ **ಪಾಲಖೇಡ** ಎಂಬಲ್ಲಿ ಅವನನ್ನು ಬಲವಾಗಿ ಮುತ್ತಿದನು. ಕಡೆಗೆ ನಿಜಾಮನು ಸೋತು ಬಾಜಿರಾಯನೊಡನೆ ಒಪ್ಪಂದ ಮಾಡಿಕೊಂಡನು. ಈ ಒಪ್ಪಂದದಿಂದ, ೧. ನಿಜಾಮನು ಚೌಥಾಯಿ ಸರದೇಶಮುಖಿಗಳ ಅಧಿಕಾರವನ್ನು ಒಪ್ಪಬೇಕು. ೨. ಅವನು ಮರಾಠರ ಒಳಜಗಳದಲ್ಲಿ ಕೈಹಾಕಬಾರದು. ೩. ಕೆಲವು ಕೋಟೆಗಳನ್ನು ಮರಾಠರಿಗೆ ಕೊಡಬೇಕು. ಎಂದು ಗೊತ್ತಾಯಿತು.

೪. **ಬಾಜೀರಾಯನ ವಿಜಯಗಳು: ಮಾಳವ**:— ಮಾಳವವು ಬೆಲೆಯುಳ್ಳ ಸೀಮೆಯು. ಅಲ್ಲದೆ ದಿಲ್ಲಿಯಿಂದ ದಕ್ಷಿಣಕ್ಕೆ ಬರುವ ಮಾರ್ಗಗಳೆಲ್ಲ ಈ ಪ್ರಾಂತದಲ್ಲಿಯೇ ಹಾಯ್ದಿರುತ್ತವೆ. ಮಾಳವದಲ್ಲಿ ತಮ್ಮ ಅಧಿಕಾರವಿದ್ದರೆ ಮೊಗಲ-ನಿಜಾಮರ ಸಂಬಂಧವು ಕಡಿಮೆಯಾಗುವದೆಂಬ ವಿಚಾರದಿಂದ ಬಾಜೀರಾಯನು ಆ ಪ್ರಾಂತದ ಮೇಲೆ ದಾಳಿ ಮಾಡಿದನು ಕ್ರಿ. ಶ. ೧೭೨೮ರಲ್ಲಿ ಚಿಮಣಾಜಿಯು ಅಲ್ಲಿಯ ಮೊಗಲ ಸುಭೇದಾರನಾದ **ಗಿರಿಧರ ಬಹದ್ದೂರ**ನನ್ನು ಸೋಲಿಸಿದನು.. ಬಳಿಕ ಬಾಜೀರಾಯನಿಗೆ ಮಾಳವದ ಸನದು ದೊರೆಯಿತು.

೫. **ಬುಂದೇಲಖಂಡ** :— **ಛತ್ರಸಾಲನು** ಬುಂದೇಲಖಂಡದ ಅರಸನಾಗಿದ್ದನು. ಮೊಗಲ ಸರದಾರನಾದ **ಮುಹಮ್ಮದಖಾನ ಬಂಗಷ** ಎಂಬವನು ಬುಂದೇಲಖಂಡದ ಮೇಲೆ ಒಂದೇಸವನೆ ದಾಳಿ ಮಾಡಹತ್ತಿದನು ಆದದರಿಂದ ಛತ್ರಸಾಲನು ಬಾಜೀರಾಯನನ್ನು ನೆರವಿಗೆ ಕರೆದನು. ಬಾಜೀರಾಯನು ಅತ್ತ ಹೋಗಿ **ಜೈತಪುರ** ಬಳಿಯಲ್ಲಿ ಬಂಗಷನನ್ನು ಸೋಲಿಸಿದನು. ಕ್ರಿ. ಶ. ೧೭೨೯. ಆಗ ಛತ್ರಸಾಲನು ಸಮಾಧಾನ ಹೊಂದಿ ಝಾಂಸಿಯ ಬಳಿಯ ೫೦ ಲಕ್ಷದ ಸೀಮೆಯನ್ನು ಬಾಜೀರಾಯನಿಗೆ ಕೊಟ್ಟನು.

**ಗುಜರಾಥ** :— ಖಂಡೇರಾಯ ದಾಭಾಡೆಯ ತರುವಾಯ ಅವನ ಮಗ **ತ್ರ್ಯಂಬಕರಾಯನು** ಖಾನದೇಶದ ಅಧಿಕಾರಿಯಾದನು. ಅವನು

ಬಾಜೀರಾಯನ ಹಿರಿಯತನವನ್ನು ಒಪ್ಪದೆ ಸ್ವತಂತ್ರನಾಗಿರಹತ್ತಿದನು. ಬಾಜೀರಾಯನಿಗೂ ತ್ರ್ಯಂಬಕರಾಯನಿಗೂ ಕ್ರಿ. ಶ **೧೭೩೧**ರಲ್ಲಿ ಡಭಯಿ ಎಂಬಲ್ಲಿ ಕಾಳಗವಾಗಿ ತ್ರ್ಯಂಬಕರಾಯನು ಗುಂಡುತಾಕಿ ಮರಣಹೊಂದಿದನು. ಬಳಿಕ ಅವನ ತಮ್ಮನಾದ **ಯಶವಂತರಾಯನು** ಸರದಾರನಾದನು. ಈ ಸುದ್ದಿಯು ಶಾಹೂರಾಜನಿಗೆ ತಿಳಿಸಲು ಅವನು ಗುಜರಾಥದ ಉತ್ಪನ್ನವನ್ನು ದಾಭಾಡೆ, ಮತ್ತು ಬಾಜೀರಾವ ಇವರು ಸರಿಯಾಗಿ ಹಂಚಿಕೊಳ್ಳಬೇಕೆಂದು ಗೊತ್ತುಮಾಡಿ ಅವರನ್ನು ಸಮಾಧಾನಗೊಳಿಸಿದನು.

**ಕೊಂಕಣ** :— ಕ್ರಿ. ಶ. **೧೭೩೩-೩೬**ರ ವರೆಗೆ ಬಾಜೀರಾಯನು ಜಂಜಿರೆಯ ಸಿದ್ದಿಯ ಮೇಲೆ ದಾಳಿ ಮಾಡಿದ್ದರಿಂದ ಸಿದ್ದಿಯು ಒಪ್ಪಂದ ಮಾಡಿಕೊಂಡು ಮರಾಠರ ಮಾಂಡಲಿಕನಾದನು. ಬಳಿಕ ಬಾಜೀರಾಯನು ಚಿಮಣಾಜಿಯನ್ನು ಪೋರ್ತುಗೀಜರ ಮೇಲೆ ಕಳುಹಿ ತಾನು ದಿಲ್ಲಿಯ ಕಡೆಗೆ ಹೊರಟನು. ಚಿಮಣಾಜಿಯು ಪರಾಕ್ರಮದಿಂದ ಕಾದಿ ವಸಯಿ ಕೋಟೆಯನ್ನೂ ಪೋರ್ತುಗೀಜರ ಸ್ಥಾನಗಳನ್ನೂ ವಶಮಾಡಿಕೊಳ್ಳಲು ಅವರು ಆ ಭಾಗವನ್ನೇ ಬಿಟ್ಟು ಹೋದರು. ಕ್ರಿ. ಶ **೧೭೩೯.**

**ದಿಲ್ಲಿ** .— ಬಾಜೀರಾಯನು ದಿಲ್ಲಿಯ ಮೇಲೆ ಸಾಗಿ ಈ ಮೊದಲು ಅತ್ತ ಕಡೆಗೆ ಬಂದ **ಸಿಂಧೆಹೋಳಕರರ** ನೆರವಿನಿಂದ ಬಾದಷಾಹನ ದಂಡನ್ನು ಸೋಲಿಸಿದನು. ಆಗ ಬಾದಷಾಹನು ೧೩ ಲಕ್ಷ ರೂಪಾಯಿಗಳನ್ನು ಕೊಟ್ಟು ಬಾಜೀರಾಯನನ್ನು ಸಮಾಧಾನಪಡಿಸಿದನು. ಈ ಸುದ್ದಿಯು ನಿಜಾಮನಿಗೆ ತಿಳಿಯಲು ಅವನು ಬಾದಷಾಹನ ನೆರವಿಗೆಂದು ಉತ್ತರಕ್ಕೆ ಸಾಗಿಬಂದನು. ಆದರೆ ಬಾಜೀರಾಯನು ಭೋಪಾಳದ ಬಳಿಯಲ್ಲಿ ಅವನನ್ನು ತರುಬಿ ಪೂರ್ಣವಾಗಿ ಸೋಲಿಸಿದನು. ಕ್ರಿ. ಶ. **೧೭೩೮.** ಈ ರೀತಿ ಚಂಬಲಾ ನದಿಯಿಂದ ನರ್ಮದೆಯ ವರೆಗಿನ ಸೀಮೆಯನ್ನು ವಶಮಾಡಿಕೊಂಡ ಬಳಿಕ ಬಾಜೀರಾಯನು ದಕ್ಷಿಣಕ್ಕೆ ಬಂದನು

**೬. ಬಾಜೀರಾಯನ ಮರಣ ಮತ್ತು ಯೋಗ್ಯತೆ** :— ಇವನು ಕ್ರಿ. ಶ. **೧೭೪೦**ರಲ್ಲಿ ಮರಣಹೊಂದಿದನು. ಬಾಜೀರಾಯನು ಚಲುವನೂ, ಒಗರುಳ್ಳವನೂ ಮೇಲಾದ ಕಲಿಯೂ ಒಳ್ಳೆಯ ಎದೆಗಾರನೂ ಇದ್ದನಲ್ಲದೆ ಆ ಕಾಲದ ಎಲ್ಲ ಯುದ್ಧವಿದ್ಯೆಗಳಲ್ಲಿ ಬಲ್ಲಿದನೆನಿಸಿದ್ದನು. ಇವನ ಇರುವು ತೀರ ಸಾದಾ ರೀತಿಯದಿತ್ತು. ಸಾಮಾನ್ಯ ದಂಡಾಳಿನೊಡನೆ ಇದ್ದು ಬರಿಯ

ಬೆಳೆಸೆಗಳನ್ನು ತಿಂದು ಇರಲಿಕ್ಕೂ ಇವನು ಹಿಂಜರಿಯುತ್ತಿರಲಿಲ್ಲ. ಇವನು ಯೋಗ್ಯತೆಯುಳ್ಳವರಿಗೆ ತಕ್ಕ ಅಧಿಕಾರಗಳನ್ನು ಕೊಟ್ಟು ಅವರ ನೆರವಿನಿಂದ ದಿಲ್ಲಿಯ ವರೆಗೆ ಸೀಮೆಯನ್ನು ವಶಮಾಡಿಕೊಂಡು ಮರಾಠರ ಸಾಮ್ರಾಜ್ಯವನ್ನು ಸ್ಥಾಪಿಸಿದನು. ದಿಲ್ಲಿಯಲ್ಲಿ ಮರಾಠರ ವರ್ಚಸ್ಸನ್ನು ನೆಲೆಗೊಳಿಸಬೇಕೆಂಬುದು ಇವನ ಹೆಗ್ಗುರಿಯಾಗಿತ್ತು. ಈ ಬಯಕೆಯನ್ನು ಈಡೇರಿಸುವ ಅಬ್ಬರದಲ್ಲಿ ಇವನು ರಾಜ್ಯಕಾರಭಾರದ ಕಡೆಗೂ ಸಿದ್ದಿ, ನಿಜಾಮ, ಫ್ರೆಂಚ ಮೊದಲಾದ ಪರಚಕ್ರಗಳ ಕಡೆಗೂ ವಿಶೇಷ ಲಕ್ಷ್ಯಗೊಡಲಿಲ್ಲ. ಇವನ ತಮ್ಮನಾದ ಚಿಮಣಾಜಿಯು ಜಾಣತನದಿಂದ ಕಾರಭಾರವನ್ನು ಸಾಗಿಸಿಯೂ, ಪ್ರಸಂಗದಲ್ಲಿ ಪರಾಕ್ರಮದಿಂದ ಸಿದ್ದಿ, ನಿಜಾಮ, ಪೋರ್ತುಗೀಜ ಇವರನ್ನು ತಡೆದು ಸೋಲಿಸಿಯೂ ನೆರವಾದದರಿಂದಲೇ ಬಾಜಿರಾಯನ ವಿಜಯ ಪರಂಪರೆಯು ಅಖಂಡವಾಗಿ ಸಾಗಿತೆಂದು ಹೇಳಬಹುದು.

ಇವನು ಪೇಶವೆ ಪದವನ್ನು ಪಡೆದು ವಿರೋಧಿಗಳನ್ನು ಬಗ್ಗುಬಡಿಯುತ್ತ ಇಪ್ಪತ್ತು ವರ್ಷಗಳ ವರೆಗೆ ಆಳಿ ಮರಾಠರ ಸಾಮರ್ಥ್ಯವನ್ನು ತೋರ್ಪಡಿಸಿದನು. ಆಗಿನ ಪುಣೆ ಪಟ್ಟಣವನ್ನು ಇವನೇ ನೆಲೆಸಿ ಅಲ್ಲಿ **ಶನಿವಾರ ವಾಡೆ** ಎಂಬ ಅರಮನೆಯನ್ನು ಕಟ್ಟಿಸಿದನು. ಇವನಿಗೆ **ಬಾಳಾಜಿ** ಉರ್ಫ **ನಾನಾಸಾಹೇಬ**, **ರಘುನಾಥರಾವ** ಉರ್ಫ **ರಾಘೋಬದಾದಾ** ಎಂಬ ಇಬ್ಬರು ಮಕ್ಕಳಿದ್ದರು.

---

# ೧೦ ನೆಯ ಪಾಠ

## ೩ನೆಯ ಪೇಶವೆ ಬಾಳಾಜಿ ಬಾಜೀರಾಯ

(ಕ್ರಿ. ಶ. ೧೭೪೦-೧೭೬೧)

೧. **ಬಾಳಾಜಿಯು ಪೇಶವೆಯಾದದ್ದು** :— ಬಾಜೀರಾಯನು ಸತ್ತ ಬಳಿಕ **ರಘೂಜಿ ಭೋಸಲೆ, ದಮಾಜಿ ಗಾಯಕವಾಡ** ಇವರು **ಬಾಬಾಜಿ ನಾಯಿಕ** ಎಂಬವನನ್ನು ಮುಂದೆ ಮಾಡಿ, ಅವನಿಗೆ ಪೇಶವೆಯ ಅಧಿಕಾರವು ದೊರೆಯಬೇಕೆಂದು ಪ್ರಯತ್ನ ಮಾಡಿವರು. ಪೇಶವೆಯ ಕೆಲಸವನ್ನು ತೂಗಿಸುವ ಯೋಗ್ಯತೆಯು ಬಾಬಾಜಿಯಲ್ಲಿರಲಿಲ್ಲ. ಬಾಜೀರಾಯನ ಹಿರಿಯ

ಮಗ **ಬಾಳಾಜಿಯು** ತನ್ನ ಕಕ್ಕನಾದ ಚಿಮಣಾಜಿಯ ಕೈಯಲ್ಲಿ ಆಡಿ ಯುದ್ಧಕಲೆ-ರಾಜ್ಯಕಾರಭಾರಗಳಲ್ಲಿ ನುರಿತಿದ್ದನು. ಆದದರಿಂದ ಶಾಹೂರಾಜನು ಬಾಳಾಜಿಯ ಯೋಗ್ಯತೆಯನ್ನೂ ಬಾಜೀರಾಯನು ಮಾಡಿದ ಸೇವೆಯನ್ನೂ ನೆನೆದು ಇವನಿಗೆ ಪೇಶವೆಯ ಅಧಿಕಾರವನ್ನು ಕೊಟ್ಟನು. ಬಾಳಾಜಿಯು ಪೇಶವೆಯಾದುದಕ್ಕೆ ದಿಲ್ಲಿಯ ಬಾದಶಹನ ಒಪ್ಪಿಗೆಯೂ ದೊರೆತಿತ್ತು.

**೨. ಮಾಳವ ಪ್ರಾಂತದ ಸನದು ಸಿಕ್ಕಿದ್ದು:—** ಬಾಳಾಜಿಯು ಪೇಶವೆಯಾದಂದಿನಿಂದ ರಘೋಜಿ ಮೊದಲಾದವರು ಇವನ ವಿರೋಧಿಗಳಾದರು. ಮುಂದೆ ತುಸು ದಿವಸಗಳಲ್ಲಿ ಚಿಮಣಾಜಿಯು ಮರಣ ಹೊಂದಿದ್ದರಿಂದ ಈ ವಿರೋಧಿಗಳಿಗೆ ಮತ್ತಿಷ್ಟು ಸಮಯ ಸಿಕ್ಕಿತು. ಅವರು ಪೇಶವೆಯ ಮೇಲಧಿಕಾರವನ್ನು ಒಪ್ಪದೆ ಸ್ವತಂತ್ರನಾಗಿ ನಡೆಯಹತ್ತಿದರು. ರಘೂಜಿಯು ಬಂಗಾಲ ಪ್ರಾಂತದ ಮೇಲೆ ಹಲವು ದೌಡುಗಳನ್ನು ಮಾಡಿ, ಅಲ್ಲಿಯ ಸುಭೇದಾರನಾದ **ಅಲಿವರ್ದೀಖಾನನನ್ನು** ಪೂರ್ಣವಾಗಿ ಸೋಲಿಸಿ **ಮುರ್ಶಿದಾಬಾದ ಹುಗಳಿ** ಮೊದಲಾದ ಸಂಪತ್ತುಳ್ಳ ಪಟ್ಟಣಗಳನ್ನು ಸುಲಿದನು. ಅತ್ತ ಬಾಬಾಜಿಯೂ ದಮಾಜಿಯೂ ಪೇಶವೆಯ ಒಪ್ಪಿಗೆಯಿಲ್ಲದೆ ಮಾಳವದ ಮೇಲೆ ಸಾಗಿ ಹೋದರು ಬಾಳಾಜಿಯು ಇವರನ್ನು ತಡೆಯುವ ವಿಚಾರದಲ್ಲಿದ್ದನು. ಅಷ್ಟರಲ್ಲಿ ಬಾದಷಾಹನಾದ **ಮುಹಮ್ಮದಷಾಹನು** ಬಂಗಾಲ ಪ್ರಾಂತವನ್ನು ಸಂರಕ್ಷಿಸಿದರೆ ಮಾಳವದ ಸುಭೇದಾರಿಯು ದೊರೆಯುವದೆಂದು ಬಾಳಾಜಿಗೆ ತಿಳಿಸಿದನು. ಇದಕ್ಕೆ ಬಾಳಾಜಿಯು ಒಪ್ಪಿ ರಘೂಜಿಯನ್ನು ಸೋಲಿಸಿಹಿಂದಕಟ್ಟಲು ಅವನಿಗೆ ಬಾದಷಾಹನಿಂದ ಮಾಳವದ ಸನದು ದೊರೆಯಿತು. ಕ್ರಿ. ಶ **೧೭೪೨.**

**೩. ಬಾಳಾಜಿ ರಘೂಜಿ ಇವರಲ್ಲಿ ಉಂಟಾದ ಒಕ್ಕಟ್ಟು:—** ರಘೂಜಿ ಮೊದಲಾದ ಸರದಾರರು ಪೇಶವೆಯ ಹಗೆಗಳಾಗಿರುವದು ರಾಜ್ಯಕ್ಕೆ ಹಿತಕರವಲ್ಲೆಂದು ತಿಳಿದು ಶಾಹೂರಾಜನು ಅವರೆಲ್ಲರನ್ನು ಸಾತಾರೆಗೆ ಕರೆಯಿಸಿಕೊಂಡು ಅವರಲ್ಲಿ ಒಕ್ಕಟ್ಟನ್ನುಂಟುಮಾಡಿದನು. ರಘೂಜಿಗೆ ಲಖನೌ, ಪಾಟಣಾ, ದಕ್ಷಿಣ ಬಂಗಾಲ, ಬಿಹಾರಗಳ ಅಧಿಕಾರವು ದೊರತದರಿಂದ ಅವನು ಸಮಾಧಾನದಿಂದ ಪೇಶವೆಯ ಅಂಕಿತನಾಗಿ ನಡೆಯಹತ್ತಿದನು. ಬಾಳಾಜಿಗೆ ಕರ್ನಾಟಕದ ಅಧಿಕಾರವನ್ನು ಕೊಟ್ಟದ್ದರಿಂದ ಅವನೂ ಸಂತುಷ್ಟನಾದನು.

**ಮರಾಠರ ಕಂದಕ:**— ಬಳಿಕ ಬಾಳಾಜಿಯು ತಾನೇ ಮಾಳವ ಪ್ರಾಂತದಮೇಲೆ ದಂಡೆತ್ತಿಹೋಗಿ ಬಹಳಹಣವನ್ನು ಎತ್ತಿಕೊಂಡು ಬಂದನು. ರಘೋಜಿಯು ಬಂಗಾಲ ಬಿಹಾರಗಳನ್ನು ಹೊಕ್ಕು ಅಲ್ಲಿ ಮರಾಠರ ವರ್ಚಸ್ಸನ್ನು ನೆಲೆಗೊಳಿಸಿದನು. ಆಗ ಕಲಕತ್ತೆಯ ಇಂಗ್ಲಿಷರು ಹೆದರಿ ತಮ್ಮ ರಕ್ಷಣೆಗಾಗಿ ಒಂದು ಕಂದಕವನ್ನು ಕಡಿಸಿದರು. ಅದಕ್ಕೆ '**ಮರಾಠರ ಕಂದಕ**' ಎಂತಲೇ ಹೆಸರುಂಟಾಯಿತು. ಇತ್ತ ಚಿಮಣಾಜಿಯಮಗನಾದ ಸದಾಶಿವರಾಯನು ಕರ್ನಾಟಕವ ಮೇಲೆ ಸಾಗಿ ತುಂಗಭದ್ರೆಯ ವರೆಗೆ ಅಧಿಕಾರದನ್ನು ಹಬ್ಬಿಸಿದನು. ಆಗ ಸವಣೂರ ನವಾಬನಿಂದ ೨೫ ಲಕ್ಷದ ನಾಡು ಮರಾಠರಿಗೆ ಸಿಕ್ಕಿತು.

**೪. ಸಿಂಧೆ ಹೋಳಕರರ ಹದಗೇಡಿತನ:**— ಜಯಪುರದ ಅರಸನಾದ ಜಯಶಿಂಗನು ಮರಾಠರ ಮಿತ್ರನಾಗಿದ್ದನು. ಅವನು ಕ್ರಿ. ಶ. ೧೭೪೩ ರಲ್ಲಿ ಸಾಯಲು **ಈಶ್ವರಸಿಂಗ, ಮಾಧವಸಿಂಗ** ಎಂಬ ಅವನ ಇಬ್ಬರು ಮಕ್ಕಳಲ್ಲಿ ಪಟ್ಟದ ಸಲುವಾಗಿ ಜಗಳ ಹುಟ್ಟಿತು. ಆಗ ಈಶ್ವರಸಿಂಗನು ಸಿಂಧೆ-ಹೋಳಕರರ ನೆರವಿನಿಂದ ಮಾಧವಸಿಂಗನನ್ನು ಸೋಲಿಸಿದನು ಬಳಿಕ ಸಿಂಧೆಯು ತಾನೊಬ್ಬನೇ ಈಶ್ವರಸಿಂಗನ ಸಹಾಯಕನಾಗಿ ಉಳಿದ ರಜಪುತ ಅರಸರನ್ನು ಅವನ ಅಂಕಿತದಲ್ಲಿ ತಂದು ಕೊಟ್ಟನು. ಇದಕ್ಕಾಗಿ ಈಶ್ವರಸಿಂಗನಿಂದ ಸಿಂಧೆಗೆ ವಿಪುಲವಾದ ದ್ರವ್ಯವು ದೊರೆಯಿತು. ಶಿಂಧೆಯ ಈ ನಡತೆಯಿಂದ ಹೋಳಕನು ರೊಚ್ಚಿಗೆದ್ದು ಮಾಧವಸಿಂಗನನ್ನು ಕೂಡಿಕೊಂಡನು. ಇದರಿಂದ ಅವರಿಬ್ಬರಲ್ಲಿ ವೈಮನಸ್ಸುಂಟಾಯಿತು. ಪೇಶ್ವೆಯಾದರೂ ಹೋಳ್ಕರನ ಪಕ್ಷವನ್ನೇ ಎತ್ತಿ ಹಿಡಿದನು. ಆದದರಿಂದ ಈಶ್ವರಸಿಂಗನು ಮುಂದುಗಾಣದೆ ಆತ್ಮಹತ್ಯ ಮಾಡಿಕೊಂಡನು.! ಶಿವಾಜಿಯ ಕಾಲದಿಂದ ಮರಾಠರ ವಿಷಯವಾಗಿ ರಜಪುತರಲ್ಲಿ ಉಂಟಾಗಿದ್ದ ಭಾವನೆಯು ಬದಲಾಗಿ ಅವರು ಮರಾಠರಿಗೆ ನೆರವಾಗುವದನ್ನು ಬಿಟ್ಟುಬಿಟ್ಟರು. ಮರಾಠರ ಸರದಾರರ ಈ ಹದಗೇಡಿತನವು ಮುಂದೆ ಮರಾಠರ ರಾಜ್ಯಕ್ಕೆ ಮುಳುವಾಗದೆ ಇರಲಿಲ್ಲ!

**೫. ಶಾಹೂರಾಜನ ತರುವಾಯದ ಸ್ಥಿತಿ:**— ಕ್ರಿ ಶ. ೧೭೪೯ ರಲ್ಲಿ ಶಾಹೂರಾಜನು ಮರಣ ಹೊಂದಿದ ಬಳಿಕ ಬಾಳಾಜಿಯು ಅವನ ಇಚ್ಛೆಯಂತೆ ತಾರಾಬಾಯಿಯ ಮೊಮ್ಮಗನಾದ **ರಾಮರಾಜನನ್ನು** ಪಟ್ಟಕ್ಕೆ ತಂದನು. ರಾಮ

ರಾಜನು ಹೆಸರಿಗೆ ಅರಸನಾಗಿ, ೬೫|| ಲಕ್ಷದ ಸೀಮೆಯನ್ನು ತನಗಾಗಿ ಇಟ್ಟು ಕೊಂಡು ಎಲ್ಲ ಅಧಿಕಾರವನ್ನು ಪೇಶ್ವೆಗೆ ಒಪ್ಪಿಸಿದನು. ಅಂದಿನಿಂದ ಪೇಶ್ವೆಯು ಉಳಿದ ಸರದಾರರಿಗಿಂತ ಹೆಚ್ಚಿನವನೆಂದು ಎಣಿಸಲ್ಪಡಹತ್ತಿದನು. ಬಾಳಾಜಿಯ ಈ ಹೆಚ್ಚಳವು ತಾರಾಬಾಯಿಗೂ ಉಳಿದ ಸರದಾರರಿಗೂ ಸಹನವಾಗಲಿಲ್ಲ ತಾರಾಬಾಯಿಯು ಬಾಳಾಜಿಯ ಅಧಿಕಾರಗಳನ್ನು ಕಸಿದುಕೊಳ್ಳಬೇಕೆಂದು ಎಷ್ಟು ಹೇಳಿದರೂ ರಾಮರಾಜನು ಕೇಳಲಿಲ್ಲ. ಆಗ ಆಕೆಯು ಅರಸನನ್ನು ಸೆರೆಯಿಟ್ಟು ಯಶವಂತರಾವ ಧಾಬಾಡೆ, ದಮಾಜಿ ಗಾಯಕವಾಡ ಇವರನ್ನು ತನ್ನ ನೆರವಿಗಾಗಿ ಸಾತಾರೆಗೆ ಕರೆಯಿಸಿದಳು. ಇದನ್ನೆಲ್ಲ ತಿಳಿದು ಬಾಳಾಜಿಯು ದಾಭಾಡೆ-ಗಾಯಕವಾಡರನ್ನು ಸೆರೆ ಹಿಡಿದು ಪುಣೆಯಲ್ಲಿಟ್ಟು ರಾಮರಾಜನನ್ನು ಸೆರೆಬಿಡಿಸಿದನು. ಮತ್ತು ಬಲವಾದಸೈನ್ಯವನ್ನು ಸಾತಾರೆಯಲ್ಲಿಟ್ಟು ವಿರೋಧಿಗಳ ಕಾಟವನ್ನು ತಪ್ಪಿಸಿದನು.

---

# ೧೧ನೆಯ ಪಾಠ

## ಬಾಳಾಜಿ ಬಾಜೀರಾಯ (ಮುಂದೆ ಸಾಗಿದ್ದು)

೧. **ದಕ್ಷಿಣದಲ್ಲಿಯ ರಾಜ್ಯ ವಿಸ್ತಾರದ ಪ್ರಯತ್ನಗಳು:— (ಅ)** ಕ್ರಿ. ಶ. **೧೭೫೭**ರಲ್ಲಿ ಫ್ರೇಂಚ ಸೇನಾಪತಿಯಾದ ಬುಸಿಯ ಸಹಾಯದಿಂದ ನಿಜಾಮ ಸೈನ್ಯವು ಮರಾಠರ ಮೇಲೆ ಸಾಗಿಬಂದಿತು ಘೋಡ ನದಿಯ ಬಳಿಯಲ್ಲಿಯೂ ಮರುವರ್ಷ ಭಾಲಕಿ ಎಂಬಲ್ಲಿಯೂ ಯುದ್ಧವಾಗಿ ನಿಜಾಮನು ಸೋತು ತಾಪಿ ಗೋದಾವರಿಗಳ ನಡುವಿನ ಸೀಮೆಯನ್ನು ಕೊಟ್ಟು ಬಾಳಾಜಿ ಯೊಡನೆ ಒಪ್ಪಂದ ಮಾಡಿಕೊಂಡನು. **(ಆ)** ಕಡಪೆ, ಕರ್ನೂಲ, ಸವಣೂರ ಇವುಗಳ ನವಾಬರು ತುಂಗಭದ್ರೆಯ ತೀರದ ಮರಾಠರ ಸೀಮೆಯನ್ನು ತೆಗೆದು ಕೊಂಡಿದ್ದರು. ಬಾಳಾಜಿಯು ಅತ್ತಕಡೆಗೆ ಸಾಗಿ ನವಾಬರನ್ನು ಸೋಲಿಸಿ ತನ್ನ ಸೀಮೆಗಳನ್ನು ಕೈಸೇರಿಸಿಕೊಂಡನು. ಬಳಿಕ **ಶ್ರೀರಂಗ ಪಟ್ಟಣಕ್ಕೆ** ಹೋಗಿ ಅದನ್ನು ಮುತ್ತಿದನು. ಆಗ ಅಲ್ಲಿಯ ಅರಸನಾದ **ನಂದಿರಾಜನು** ೫ ಲಕ್ಷರೂಪಾಯಿ ಕಪ್ಪನ್ನು ಕೊಟ್ಟನು. **(೧೩)** ಕುಲಾಬೆಯ **ಕಾನ್ಹೋಜಿ ಆಂಗ್ರೆಯ** ತರುವಾಯ **ತುಳಾಜಿ** ಎಂಬವನು ಅಧಿಕಾರಿಯಾದನು ಇವನು

ಶೂರನೂ ಮುತ್ಸದ್ದಿಯೂ ಆಗಿದ್ದು ತನ್ನ ಹಡಗುಪಡೆಯನ್ನು ಚನ್ನಾಗಿ ಬಲಿಸಿದ್ದನು. ಆವನು ಬಾಳಾಜಿಯನ್ನು ಹೆಚ್ಚಾಗಿ ದ್ವೇಷಿಸುತ್ತಿದ್ದನು. ಈ ತುಳಾಜಿಯು ಪಶ್ಚಿಮ ದಂಡೆಯಲ್ಲಿ ಇಂಗ್ಲಿಷರ ಮತ್ತು ಫ್ರೇಂಚರ ವರ್ಚಸ್ಸು ನೆಲೆಗೊಳಿಸಲಿಕ್ಕೆ ಆಸ್ಪದ ಕೊಟ್ಟಿದ್ದಿಲ್ಲ. ಬಾಳಾಜಿಯು ಅವನನ್ನು ಅಂಕಿತದಲ್ಲಿ ತರಬೇಕೆಂದು ನಿಶ್ಚಯಿಸಿ ಹಡಗುಪಡೆಗಾಗಿ ಇಂಗ್ಲಿಷರ ಸಹಾಯವನ್ನು ಕೇಳಿದನು. ಅವರು ಸಂತೋಷದಿಂದ ನೆರವಾಗಲೊಪ್ಪಿ ಹಡಗುಪಡೆಯ ಆಧಿಪತ್ಯವನ್ನು ತಾವೇ ವಹಿಸಿಕೊಂಡರು ನೆಲದಾರಿಯಿಂದಲೂ ನೀರುದಾರಿಯಿಂದಲೂ ಇಬ್ಬರ ಸೈನ್ಯಗಳು ತುಳಾಜಿಯಮೇಲೆ ಸಾಗಿದವು. **ಸಿಂಧುದುರ್ಗ, ವಿಜಯದುರ್ಗಗಳು** ತುಳಾಜಿಯ ಕೈಬಿಟ್ಟದ್ದರಿಂದ ತುಳಾಜಿಯು ಕೈಸೆರೆಯಾದನು. ಇಂಗ್ಲಿಷರು ತುಳಾಜಿಯ ಹಡಗುಪಡೆಯನ್ನು ಸುಟ್ಟು ಹಾಳುಮಾಡಿದರು. ಈ ಯುದ್ಧದಿಂದ **ಬಾಣಕೋಟೆ** ಮುಂತಾದ ೫ ಬಂದರಗಳು ಇಂಗ್ಲಿಷರಿಗೆ ದೊರೆತವು. **ವಿಜಯದುರ್ಗ** ಮೊದಲಾದ ಉಳಿದ ಪ್ರದೇಶವು ಬಾಳಾಜಿಯ ವಶವಾಯಿತು ತುಳಾಜಿಯೊಡನೆ ಮರಾಠರ ಹಡಗುಪಡೆಯ ಕೀರ್ತಿಯು ಅಡಗಿಹೋಯಿತು ! **(ಈ)** ರಘೂಜಿ ಭೋಸಲೆಯು ದಾಳಿಗೆ ಬಂಗಾಲದ ಸುಭೇದಾರನಾದ ಅಲಿವರ್ದಿಖಾನನು ಬೇಸತ್ತು ಮರಾಠರೊಡನೆ ಒಪ್ಪಂದ ಮಾಡಿಕೊಂಡನು. ಕ್ರಿ. ಶ. **೧೭೫೧** ಇದರಿಂದ ಕಟಕ ಪ್ರಾಂತವು ಮರಾಠರಿಗೆ ದೊರೆತದ್ದಲ್ಲದೆ ಬಂಗಾಲದ ಚೌಥಾಯಿಯೆಂದು ವರ್ಷಕ್ಕೆ ೧೨ ಲಕ್ಷ ರೂಪಾಯಿಗಳು ಸಿಗಹತ್ತಿದವು. ರಘೂಜಿ ಭೋಸಲೆ ಸತ್ತತರುವಾಯ ಅಧಿಕಾರದ ಸಲುವಾಗಿ ಅವನ ಮಕ್ಕಳಲ್ಲಿ ಒಳಜಗಳಗಳು ನಡೆದಾಗ ಅತ್ತ ಕ್ಲೈವನು ಪ್ಲಾಸೀ ಯುದ್ಧದಲ್ಲಿ ಜಯಹೊಂದಿ ಬಂಗಾಲದಲ್ಲಿ ಇಂಗ್ಲಿಷರ ಅಧಿಕಾರವನ್ನು ಸ್ಥಿರಗೊಳಿಸಿದನು **(ಉ) ದಾಭಾಡೆ-ಗಾಯಕವಾಡ** ಇವರು ಬಾಳಾಜಿಯೊಡನೆ ಒಪ್ಪಂದ ಮಾಡಿಕೊಂಡರು. ದಾಬಾಡೆಯು ವಾರ್ಷಿಕ ವೇತನ ಪಡೆದು ಸುಮ್ಮನಾದನು. ಗಾಯಕವಾಡನು ಗುಜರಾಥದ ಅರ್ಧಭಾಗವನ್ನು ತೆಗೆದುಕೊಂಡು ಪೇಶವೆಯು ಕರೆದಾಗ ಸೈನ್ಯದೊಂದಿಗೆ ನೆರವಾಗಲೊಪ್ಪಿದನು. **(ಊ) ಸಲಾಬತಜಂಗನು** ಕ್ರಿ. ಶ **೧೭೫೭** ರಲ್ಲಿ ಸಿಂಧಖೇಡ ಎಂಬಲ್ಲಿ ಮರಾಠರಿಂದ ಸೋತು ೨೫ ಲಕ್ಷದ ಸೀಮೆಯನ್ನು ಕೆಲವು ಕೋಟೆಗಳನ್ನು ಕೊಡಲೊಪ್ಪಿದನು. ಆದರೆ ಅವನು ಮುಂದೆ ಆದರಂತೆ ನಡೆಯಲಿಲ್ಲ. ಆಗ ಪೇಶವೆಯು ಸದಾಶಿವರಾಯನನ್ನು ನಿಜಾಮನ ಮೇಲೆ

ಕಳುಹಿದನು. ಉದಗೀರದ ಬಳಿ ಕಾಳಗವಾಯಿತು ಕ್ರಿ. ಶ. ೧೭೬೦ ನಿಜಾಮನು ಸೋತು **ಅಶೀರಗಡ** ಮುಂತಾದ ಕೋಟೆಗಳನ್ನು ೬೦ ಲಕ್ಷದ ಸೀಮೆಯನ್ನು ಮರಾಠರಿಗೆ ಕೊಡಬೇಕಾಯಿತು.

೨. **ಉತ್ತರದ ರಾಜ್ಯವಿಸ್ತಾರ:**— ದಿಲ್ಲಿಯ ಬಾದಶಾಹನಾದ ಅಹಮ್ಮದಶಾಹನು ಅಯೋಧ್ಯೆಯ ಸುಭೇದಾರನಾದ **ಸಫದರಜಂಗ** ನನ್ನು ತನ್ನ ವಜೀರನನ್ನು ಮಾಡಿಕೊಂಡನು. ಆಗ ರೋಹಿಲರೂ ಪಠಾಣರೂ ಸಫದರ ಜಂಗನನ್ನು ವಿರೋಧಿಸಿ ಅಯೋಧ್ಯಾ ಪ್ರಾಂತದಮೇಲೆ ದಾಳಿ ಮಾಡಿದರು. ವಜೀರನು ಸಿಂಧೆ ಹೋಳಕರರ ನೆರವನ್ನು ಕೇಳಲು ಅವರು ಹೋಗಿ ಫರುಕಾಬಾದದ ಬಳಿಯಲ್ಲಿ ರೋಹಿಲರನ್ನೂ ಪಠಾಣರನ್ನೂ ಸೋಲಿಸಿದರು. ಮರಾಠರ ಈ ಪರಾಕ್ರಮವನ್ನು ಕಂಡು ಬಾದಶಾಹನು, ಅವರಿಗೆ ಗಂಗಾ-ಯಮುನೆಗಳ ನಡುಸೀಮೆಯನ್ನೂ ಮುಲ್ತಾನ, ಪಂಜಾಬ, ರೋಹಿಲಖಂಡ, ರಜಪುತಸ್ತಾನ ಇವುಗಳ ಚೌಥಾಯಿಯ ಅಧಿಕಾರವನ್ನೂ ಕೊಟ್ಟನು. ಇದರಿಂದ ಬಾದಶಾಹನ ಹಗೆಗಳನ್ನು ತಡೆಯುವ ಕೆಲಸವು ಮರಾಠರ ಪಾಲಿಗೆ ಬಂತು.

ಇತ್ತ ರಘುನಾಥರಾಯನು ಕ್ರಿ. ಶ. ೧೭೩೦ರಲ್ಲಿ ಗುಜರಾಥದಲ್ಲಿದ್ದ ಬಂಡನ್ನು ಮುರಿದು ರಜಪುತಸ್ತಾನದಮೇಲೆ ದೌಡುಮಾಡಿ ಅಲ್ಲಿಯ ಅರಸರಿಂದ ಕಪ್ಪನ್ನೆತ್ತಿಕೊಂಡು ದಕ್ಷಿಣಕ್ಕೆ ಬಂದನು. ಕ್ರಿ ಶ. ೧೭೫೭ರಲ್ಲಿ ಉತ್ತರಕ್ಕೆ ಸಾಗಿ ಭರತಖಂಡಕ್ಕೆ ಮುತ್ತಿಗೆಹಾಕಿ **ಸುರಜಮಲ್ಲ**ನಿಂದ ೩೦ ಲಕ್ಷ ರೂ. ಗಳನ್ನು ತಕ್ಕೊಂಡು ಬಂದನು. ಆಮೇಲೆ ದಿಲ್ಲಿಗೆ ಹೋಗಿ ಗಾಜೀಉದ್ದೀನನಿಗೆ ನೆರವಾಗಿ ಮರಾಠರ ವರ್ಚಸ್ಸನ್ನು ನೆಲೆಗೊಳಿಸಿದನು

ರಘುನಾಥರಾಯನು ದಕ್ಷಿಣಕ್ಕೆ ಬಂದ ಬಳಿಕ ಗಾಜೀಉದ್ದೀನನನ್ನು ಮುರಿಯುವದಕ್ಕಾಗಿ ನಜೀಬಖಾನನು ಅಬ್ದಾಲಿಯನ್ನು ಕರೆಯಿಸಿದನು. ಆಗ ಅಬ್ದಾಲಿಯು ಇನೆಯ ಸರತಿ ಹಿಂದುಸ್ಥಾನವನ್ನು ಸೇರಿ ಮುಲ್ತಾನ-ಲಾಹೋರ ವಶಮಾಡಿಕೊಂಡು ಸಮದಖಾನ ಎಂಬವನನ್ನು ಅಲ್ಲಿಯ ಅಧಿಕಾರಿಯನ್ನಾಗಿ ಮಾಡಿ ದಿಲ್ಲಿಗೆ ಸಾಗಿ ನಜೀಬನನ್ನ ವಜೀರನನ್ನಾಗಿ ಮಾಡಿದನು. ತನ್ನ ಮಗನಾದ ತೈಮೂರಶಾಹನನ್ನು ಪಂಜಾಬದ ಅಧಿಕಾರಿಯನ್ನಾಗಿ ಮಾಡಿ ತನ್ನ ದೇಶಕ್ಕೆ ಹೋದನು.

ಅಬ್ದಾಲಿಯು ಬಂದ ಸುದ್ದಿಯನ್ನು ಕೇಳಿ ಪೇಶವೆಯು ರಘುನಾಥರಾಯನನ್ನು ಮತ್ತೆ ಉತ್ತರಕ್ಕೆ ಕಳುಹಿದನು. ರಘುನಾಥರಾಯನು ಸಿಂಧೆ-ಹೋಳಕರರನ್ನು ಕೂಡಿಸಿಕೊಂಡು ದಿಲ್ಲಿಗೆ ಹೋದನು. ಅಲ್ಲಿಂದ ಸಮದಖಾನನನ್ನು ಸೋಲಿಸಿ ಮುಲ್ತಾನ ಲಾಹೋರಗಳನ್ನು ವಶಮಾಡಿಕೊಂಡನು. ರಘುನಾಥರಾಯನು ಬರುವ ಸುದ್ದಿಯನ್ನು ಕೇಳಿ ತೈಮೂರಷಾಹನು ಓಡಿಹೋದನು. ಬಳಿಕ ರಘುನಾಥರಾಯನು ಅಟಕ ನದಿಯ ದಂಡೆಯಲ್ಲಿ ಮರಾಠರ ನಿಶಾನೆಯನ್ನು ನಿಲ್ಲಿಸಿದನು! ಈ ರೀತಿಯಿಂದ ರಘುನಾಥರಾಯನು ಸಿಂಧೆ ಹೋಳಕರರ ಸಹಾಯದಿಂದ ರೋಹಿಲ, ಪಠಾಣ, ರಜಪೂತ ಇವರನ್ನೆಲ್ಲ ಸೋಲಿಸಿ ಉತ್ತರ ಹಿಂದುಸ್ಥಾನದಲ್ಲಿ ಮರಾಠರ ಸಾಮ್ರಾಜ್ಯವನ್ನು ಹಬ್ಬಿಸಿದನು.

---

## ೧೨ ನೆಯ ಪಾಠ

### ಮರಾಠರ ಸಾಮ್ರಾಜ್ಯಕ್ಕೆ ಬಡಿದ ಸಿಡಿಲು, ಅಥವಾ ಪಾನಿಪತದ ಮೂರನೆಯ ಯುದ್ಧ. ಕ್ರಿ. ಶ. ೧೭೬೧

೧. **ಹೋಳಕರನ ಮನೆಮುರುಕತನ:-** ಬಾಜೀರಾಯನ ಕಾಲದಿಂದ ಉತ್ತರದ ಕಾರಭಾರವೆಲ್ಲ ಸಿಂಧೆ–ಹೋಳಕರರ ಕೈಯಲ್ಲಿತ್ತು. ಅದು ರಘುನಾಥರಾಯನ ಕೈಸೇರಿದಂದಿನಿಂದ ಅವರ ಹಿರಿಯತನವು ಮೊದಲಿನಂತೆ ನಡೆಯದಾಯಿತು ಆಗ ಮಲ್ಹಾರರಾಯನು ಪೇಶವೆಯ ವಿಷಯವಾಗಿ ಅಸೂಯೆಪಡಹತ್ತಿದನು

ಉತ್ತರದ ವಿಜಯವನ್ನು ಸಂಪಾದಿಸಿ ಮರಳಿ ಬಂದ ಬಳಕ ದತ್ತಾಜಿಯೂ ಜನಕೋಜಿಯೂ ಪೇಶವೆಯ ಹೇಳಿಕೆಯಂತೆ ನಜೀಬಖಾನನ ಪಾರುಪತ್ಯಕ್ಕಾಗಿ ಹೊರಟರು ಅಷ್ಟರಲ್ಲಿ ಹೋಳಕರ ಮಲ್ಹಾರರಾಯನು ಅವರನ್ನು ಕಂಡು— ನಿಮ್ಮದು ಮರುಳುಬುದ್ಧಿ; ಅಟಕದಿಂದ ರಾಮೇಶ್ವರದವರೆಗೆ ಪೇಶವೆಯರ ಅಧಿರಾಜ್ಯವಾಗಿದೆ; ನೀವು ನಜೀಬನನ್ನಷ್ಟು ಗೊತ್ತಿಗೆ ಹಚ್ಚಿದರೆ ಪೇಶವೆಯರನ್ನು ತಡೆದವರೇ ಇಲ್ಲ; ಆಮೇಲೆ ಅವರು ನಮ್ಮನ್ನು ಕೇಳುವರೇ! ಅಂತೇ ನಜೀಬನನ್ನು ಕಾಯ್ದುಕೊಂಡೇ ಕೆಲಸಮಾಡಿರಿ!!

ಎಂದು ಹೇಳಿದನು. ಜನಕೋಜಿಗೆ ಹೋಳಕರನ ಈ ವಿಚಾರವು ಸರಿಬರಲಿಲ್ಲ; ದತ್ತಾಜಿಯು ಮಾತ್ರ ಕಿವಿಸೋತನು.

೨. **ನಜೀಬಖಾನನ ಕಾರಸ್ಥಾನ**:— ಬಳಿಕ ದತ್ತಾಜಿಯು ನಜೀಬಖಾನನ ಪಾರಿಪತ್ಯ ಮಾಡುವದನ್ನು ಬಿಟ್ಟು ಅವನೊಡನೆ ಸಲಿಗೆಯನ್ನು ಬೆಳೆಯಿಸಹತ್ತಿದನು. ಧೂರ್ತನಾದ ನಜೀಬಖಾನನು ದತ್ತಾಜಿಯೊಡನೆ ಸವಿಮಾತಾಡುತ್ತ ತೋರಿಕೆಯಲ್ಲಿ ಮರಾಠರ ಸಹಾಯಕನಂತೆ ಇರಹತ್ತಿದನು. ಮತ್ತು **ಸುಜಾಉದ್ದೌಲನ** ಕೂಡ ಒಳಸಂಚು ಮಾಡಿ, ಅಬದಾಲಿಯನ್ನು ಮತ್ತೆ ಕರೆಕಳುಹಿದನು. ದತ್ತಾಜಿಯು ಮಾತ್ರ ನಜೀಬಖಾನನನ್ನು ನಂಬಿ ಸುಮ್ಮಸಿದ್ದನು. ಇಷ್ಟರಲ್ಲಿ ಅಬದಾಲಿಯು ಪಂಜಾಬಕ್ಕೆ ಬಂದ ಸುದ್ದಿ ಹತ್ತಿತು. ಅದನ್ನು ಕೇಳಿದ ಕೂಡಲೆ ಅಯೋಧ್ಯೆಯ ವಜೀರನಾದ ಸುಜಾಉದ್ದೌಲನು ನಜೀಬನನ್ನು ಕೂಡಿಕೊಂಡನು. ದತ್ತಾಜಿಯು ನಜೀಬನ ಈ ಕಾರಸ್ಥಾನವನ್ನು ಕಂಡು ಬೆರಗಾದನು.

೩. **ದತ್ತಾಜಿಯ ಸಾಹಸ**:— ಬಳಿಕ ದತ್ತಾಜಿಯು ಹೋಳಕರನಿಗೂ ಗೋವಿಂದಪಂತ ಬುಂದೇಲಿಗೂ ತನ್ನ ನೆರವಿಗೆ ಬರಬೇಕೆಂದು ಹೇಳಿ ಕಳುಹಿ, ತಾನು ತಡಮಾಡದೆ ಅಬದಾಲಿಯನ್ನು ತಡೆಯುವದಕ್ಕಾಗಿ ಉತ್ತರಕ್ಕೆ ಹೊರಟನು. ಅಬದಾಲಿಯು ಗಂಗಾ-ಯಮುನೆಗಳ † ಅಂತರ್ವೇದಿಯನ್ನು ಸೇರಿ ನಜೀಬ-ವಜೀರರನ್ನು ಕೂಡಿಕೊಂಡು ದಿಲ್ಲಿಯ ಕಡೆಗೆ ಬರಹತ್ತಿದನು. ಇದನ್ನು ಕಂಡು ದತ್ತಾಜಿಯು ದಿಲ್ಲಿಗೆ ಬಂದು ಗಾಜೀಉದ್ದಿನನನ್ನು ಕೂಡಿದನು. ಹೋಳಕರನೂ ಬುಂದೇಲಿಯೂ ಅವನ ನೆರವಿಗೆ ಬರಲಿಲ್ಲ! ಆದದರಿಂದ ದತ್ತಾಜಿಯೊಬ್ಬನೇ ಎದೆಗೊಡಬೇಕಾಯಿತು. ಅಬದಾಲಿಯ ಕಡೆಯ ಸೈನ್ಯವು ಯಮುನಾ ನದಿಯನ್ನು ದಾಟಹತ್ತಿರಲು ದತ್ತಾಜಿಯು ಒಮ್ಮೆಲೆ ಅದರ ಮೇಲೆ ಬಿದ್ದನು. ಎರಡೂ ಸೈನ್ಯಗಳ ನಡುವೆ ಭಯಂಕರ ಯುದ್ಧವಾಗಿ ದತ್ತಾಜಿಯು ಮರಣ ಹೊಂದಿದನು. ಆಗ ಅವನ ಸೈನ್ಯವು ಎದೆಗುಂದಿ ಹಿಮ್ಮೆಟ್ಟಿತು. ಅಬದಾಲಿಯು ಜಯಹೊಂದಿದ ಬಳಿಕ ತನ್ನ ಸಂಗಡಿಗರೊಂದಿಗೆ ಅಂತರ್ವೇದಿಯಲ್ಲಿ ತಳವೂರಿದನು.

† ಎರಡು (ಗಂಗಾ-ಯಮುನಾ) ನದಿಗಳ ನಡುವಿನ ಸೀಮೆ.

೪. **ಸೇಡಿನ ಸಿದ್ಧತೆ**:— ಆಗ ಸದಾಶಿವರಾಯನು ಉದಗೀರದಿಂದ ಹೊರಟವನು ಇನ್ನೂ ಪುಣೆಗೆ ಬಂದಿದ್ದಿಲ್ಲ. ಮೈಸೂರ ಕಡೆಗೆ ಹೈದರನೂ ಅರ್ಕಾಟದ ಕಡೆಗೆ ಇಂಗ್ಲಿಷರೂ ಪ್ರಬಲರಾಗುತ್ತ ನಡೆದಿದ್ದರು. ಮರಾಠರ ಅಂಕಿತರಾಗದಿದ್ದವರು ಅವರಿಬ್ಬರು. ಉದಗೀರದ ಯುದ್ಧದ ನಂತರ ಅವರ ಕಡೆಗೆ ಹೊರಳುವ ವಿಚಾರವು ಬಾಳಾಜಿಯದಿತ್ತು. ಅಷ್ಟರಲ್ಲಿ ದತ್ತಾಜಿಯ ಮರಣದ ವಾರ್ತೆಯು ಪುಣೆಗೆ ಮುಟ್ಟಿತು! ಆದದರಿಂದ ಬಾಳಾಜಿಯು ದಕ್ಷಿಣದ ಕೆಲಸಗಳನ್ನು ಬದಿಗಿಟ್ಟು ಸದಾಶಿವರಾಯನನ್ನು ಕಾಣಹೊರಟನು ಪಟದೂರಲ್ಲಿ ಎಲ್ಲರೂ ಕೂಡಿದರು. ಸದಾಶಿವರಾಯನೇ ಸೇನಾಪತಿಯಾಗಬೇಕೆಂದು ಗೊತ್ತಾಯಿತು. ವಿಶ್ವಾಸರಾಯ, ಬಳವಂತರಾವ ಮೆಹೇಂದಳೆ, ಇಬ್ರಾಹಿಮ ಖಾನ, ಸಮಶೇರ ಬಹದ್ದೂರ, ದಮಾಜಿ ಗಾಯಕವಾಡ ಮೊದಲಾದ ವೀರರು ಸಂಗಡ ಹೊರಟರು. ಜಾನೋಜಿಯು ಮಾತ್ರ ಹೋಗಲಿಲ್ಲ! ಮರಾಠ ಸೈನ್ಯವು ಬರ್ಹಾಣಪುರ, ಗ್ವಾಲೇರಗಳ ಮೇಲಿಂದ ಆಗ್ರಾಕ್ಕೆ ಮುಟ್ಟಿತು. ಅಲ್ಲಿ ಜನಕೋಜಿಯೂ ಮಲ್ಹಾರರಾಯನೂ ಬಂದು ಕೂಡಿದರು ಆಗ ಎಲ್ಲರೂ ಹಿಂದಿನ ಹಟತಟಗಳನ್ನು ಮರೆತು, ಒಮ್ಮನಸ್ಸಿನಿಂದ ಅಬದಾಲಿಯ ಸೇಡು ತೀರಿಸಲು ಸಜ್ಜಾದರು ಅಬದಾಲಿಯ ಸೈನ್ಯಕ್ಕೆ ಕಾಳುಕಡಿಗಳು ಸಿಗದಂತೆಯೂ ನಜೀಬಖಾನ, ಸುಜಾಉದ್ದೌಲ ಇವರ ನೆರವು ಅವನಿಗೆ ದೊರೆಯದಂತೆಯೂ ಮಾಡುವ ಕೆಲಸವು ಗೋವಿಂದವಂತನಿಗೆ ಒಪ್ಪಿಸಲ್ಪಟ್ಟಿತು.

೫. **ಸದಾಶಿವರಾಯನ ಪರಾಕ್ರಮ**:— ಆಮೇಲೆ ಸದಾಶಿವರಾಯನು ಉತ್ತರಕ್ಕೆ ಸಾಗಿ ದಿಲ್ಲಿಯನ್ನು ವಶಮಾಡಿಕೊಂಡು, ಅಲ್ಲಿ ತನ್ನ ಅಧಿಕಾರವನ್ನು ನೆಲೆಸಿದನು. ಯಮುನಾ ನದಿಯ ಆಚೆಯ ದಂಡೆಯಲ್ಲಿ ಇದ್ದ ಅಬದಾಲಿಯು ಸದಾಶಿವರಾಯನ ಈ ಪರಾಕ್ರಮವನ್ನು ಕಣ್ಮುಟ್ಟಿ ನೋಡುತ್ತಿದ್ದನು. ಆಗ ಸುಜಾಉದ್ದೌಲನಿಗೆ ತಾನು ಅಬದಾಲಿ–ನಜೀಬಖಾನರನ್ನು ಕೂಡಿದ್ದಕ್ಕೆ ಪಶ್ಚಾತ್ತಾಪವೆನಿಸಿತು. ಅಬದಾಲಿಯು ಸಹ ಯುದ್ಧದ ವಿಚಾರವನ್ನು ಬಿಟ್ಟುಕೊಟ್ಟು, ಒಪ್ಪಂದದ ಮಾತು ತೆಗೆದನು. ಆದರೆ ಇಷ್ಟಕ್ಕೆ ಬಿಟ್ಟರೆ ಇವರ ಕಾಟವು ತಪ್ಪದೆಂದು ಬಗೆದು ಸದಾಶಿವರಾಯನು ಒಪ್ಪಂದಕ್ಕೆ ಒಪ್ಪಲಿಲ್ಲ ಮುಂದೆ ಅವನು ದಿಲ್ಲಿಯ ಉತ್ತರಕ್ಕಿರುವ **ಕಾನಪುರ**ಕ್ಕೆ ನಡೆದನು. ಕುಂಜ-

ಪುರವು ಅಬದಾಲಿಯ ರಾಣ್ಯವಾಗಿದ್ದು ಅವನು ಅಲ್ಲಿಯೇ ನದಿಯನ್ನು ದಾಟಿ ಅಂತರ್ವೇದಿಯನ್ನು ಸೇರಿದ್ದನು. ಸದಾಶಿವರಾಯನು ಅಲ್ಲಿಯ ಸರದಾರನಾದ ಸಮದಖಾನನನ್ನು ನೋಲಿಸಿ ಕುಂಜಪುರವನ್ನು ಕಸಿದುಕೊಂಡನು ಕ್ರಿ ಶ ೧೭೬೦

ಗೋವಿಂದಪಂತನಿಂದ ಮಾತ್ರ ಯಾವ ಕೆಲಸವೂ ನೆರವೇರಲಿಲ್ಲ **ಇಟಾವಾ-ಕುಂಜಪುರ**ಗಳಲ್ಲಿ ಅಬದಾಲಿಯ ಒಲವು ಕಡಿಮೆ ಇದ್ದರೂ ಇವನು ಪ್ರಯತ್ನ ಮಾಡದೆ ಸುಮ್ಮನಿದ್ದನು

**೬. ಪಾನೀಪತದ ಯುದ್ಧ** — ಅಬದಾಲಿಯ ದಾರಿಯನ್ನು ಕಟ್ಟು ಮಾಡಿದ ಬಳಿಕ, ಮರಾಠರ ಸೈನ್ಯವು ಅಂತರ್ವೇದಿಯನ್ನು ಸೇರುವ ಹವಣಿಕೆಯಲ್ಲಿತ್ತು ಇಷ್ಟರಲ್ಲಿ ಅಬದಾಲಿಯು ಒಳ್ಳೆಯ ಧೈರ್ಯದಿಂದ **ಭಾಗಪತ**ದ ಬಳಿಯಲ್ಲಿ ಯಮುನಾ ನದಿಯನ್ನು ದಾಟಿ, ದಿಲ್ಲಿ ಕುಂಜಪುರಗಳ ನಡುವೆ, **ಪಾನೀಪತ**ದ ಹತ್ತರ ತಳವೂರಿದನು ಇದರಿಂದ ದಿಲ್ಲಿಗೂ ಸದಾಶಿವರಾಯನಿಗೂ ಇರುವ ಸಂಬಂಧವು ಕಡಿಯಿತು ಆಗ ಸದಾಶಿವರಾಯನು ಕುಂಜಪುರದಿಂದ ದಕ್ಷಿಣಕ್ಕೆ ಬಂದು, ಇಬ್ರಾಹಿಮುಖಾನನ ಹೇಳಿಕೆಯಂತೆ ಪಾನೀಪತದ ನೆರೆಯಲ್ಲಿಯೇ ಕಂದಕವನ್ನು ಆಗಿಸಿ ತಳವೂರಿದನು ಕ್ರಿ ಶ ೧೭೬೦ ನೆಯ ವರ್ಷದ ಕೊನೆಯ ಎರಡು ತಿಂಗಳಲ್ಲಿ ಕೆಲವು ಸಣ್ಣ ಕದನಗಳಾಗಿ ಅವುಗಳಲ್ಲಿ ಮರಾಠರು ಜಯಹೊಂದಿದರೂ ಬಳವಂತರಾಯನು ಹತನಾದನು ಮುಂದೆ ಮರಾಠರಿಗೆ ಕಾಳುಕಡಿಗಳ ಕೊರತೆಯಾಗಹತ್ತಿತು ಗೋವಿಂದಪಂತನು ದಿಲ್ಲಿಯಿಂದ ಸದಾಶಿವರಾಯನ ನೆರವಿಗೆ ಹೊರಟಿರಲು, ಅಬದಾಲಿಯು ಅವನನ್ನು ತಡೆದನು, ಆ ಯುದ್ಧದಲ್ಲಿ ಗೋವಿಂದಪಂತನೂ ಬಿದ್ದುಹೋದನು ಅನ್ನ ಸಾಮಗ್ರಿಯು ಇಲ್ಲದಂತಾಗಲು ಸೈನ್ಯದಲ್ಲಿ ಗೊಂದಲವೇಳುವ ಸಂಭವವುಂಟಾಯಿತು ಆಗ ಸದಾಶಿವರಾಯನು ಇನ್ನು ತಡೆದು ನಿಲ್ಲುವದರಲ್ಲಿ ಅರ್ಥವಿಲ್ಲೆಂದು ತಿಳಿದು ಯುದ್ಧವನ್ನು ಆರಂಭಿಸಿದನು ಕ್ರಿ ಶ ೧೭೬೧ರ ಜನೇವರಿ ೧೪ನೆಯ ತಾರೀಖಿನ ಬೆಳಗಿನಿಂದ ಯುದ್ಧವು ನಡೆಯಿತು ಮಧ್ಯಾಹ್ನದ ವರೆಗೆ ಮರಾಠರಿಗೇ ಗೆಲವಾಗುವ ತೋರಿಕೆಯಿತ್ತು ಆದರೆ ಮುಂದೆ ವಿಶ್ವಾಸರಾಯನು ಗುಂಡುತಾಗಿ ಮಡಿದನು ಇದನ್ನು ಕಂಡು ಸದಾಶಿವರಾಯನು ಹೌಹಾರಿ, ಆನೆಯನ್ನಿಳಿದು ಕುದುರೆಯನ್ನೇರಿ ಸೈನಿಕರನ್ನು ಹುರುವುಗೊಳಿ-

ಸುತ್ತ ಕಾದತೊಡಗಿದನು. ಕೆಲಹೊತ್ತಿದಮೇಲೆ ಅವನೂ ಕಾಣದಾದನು! ಇಬ್ಬರೂ ಹಿರಿಯಾಳುಗಳು ಅಡಗಲು ಮರಾಠರು ಎದೆಗುಂದಿ ಕಾಲ್ದೆಗೆದರು. ಜನಕೋಜಿಯ ಪರಾಕ್ರಮವು ವ್ಯರ್ಥವಾಯಿತು. ಅಬದಾಲಿಗೆ ಜಯ ದೊರೆಯಿತು.




ಪಾನೀಪತ ಯುದ್ಧದ ನಕಾಶ

ಯುದ್ಧವು ಮುಗಿದ ಬಳಿಕ ಅಬದಾಲಿಯ ಸವಾರರು ಮರಾಠರನ್ನು ಬೆನ್ನಟ್ಟಿ ಸಾವಿರಾರು ಜನರ ಕೊಲೆಮಾಡಿದರು. ಮಲ್ಹಾರರಾವ, ದಮಾಜಿ, ಮಹದಾಜಿ ಶಿಂಧೆ, ನಾನಾಫಡಣವೀಸ ಮೊದಲಾದವರು ಪಾರಾಗಿ ಬಂದರು. ಬಾಳಾಜಿಯು ಸದಾಶಿವರಾಯನ ನೆರವಿಗೆಂದು ಸೈನ್ಯದೊಂದಿಗೆ ಹೊರಟು ಗ್ವಾಲ್ಹೇರದ ವರೆಗೆ ಬಂದಿರಲು, ಪಾನೀಪತದ ಅಪಜಯದ ಭಯಂಕರವಾದ ಸುದ್ದಿಯು ಅವನಿಗೆ ತಿಳಿಯಿತು ಆಗ ಅವನು ಎದೆಯೊಡಕೊಂಡು ಹಿಂದಿರುಗಿದನು. ಪುಣೆಗೆ ಬಂದ ತುಸು ದಿವಸಗಳಲ್ಲಿಯೇ ಮರಣ ಹೊಂದಿದನು.

ಬಾಳಾಜಿಯು ಶೂರನೂ ಮುತ್ಸದ್ದಿಯೂ ಶಾಂತ ಸ್ವಭಾವದವನೂ ಆಗಿದ್ದನು. ಇವನ ರಾಜ್ಯಕಾರಭಾರದ ಅಚ್ಚುಕಟ್ಟುತನವು ಹೊಗಳುವಂಥದಿತ್ತು.

೭. **ಪಾನೀಪತದ ಅಪಜಯದ ಕಾರಣಗಳು:**— ೧. ಸಿಂಧೆ-ಹೊಳಕರರು ಮರಾಠರ ಸ್ನೇಹಿತರಾದ ರಜಪುತರನ್ನೂ ಜಾಟರನ್ನೂ ನೋಯಿಸಿದ್ದರಿಂದ ಅವರು ಮರಾಠರಿಗೆ ನೆರವಾಗಲಿಲ್ಲ. ೨. ಗೋವಿಂದ ಪಂತನು ಯಾವ ಸಾಹಸವನ್ನೂ ಮಾಡದೆ ಇದ್ದದರಿಂದ ಅಬದಾಲಿ, ನಜೀಬ ಖಾನ, ಸುಜಾಉದ್ದೌಲ ಇವರ ಸಂಧಾನಕ್ಕೆ ಅನುಕೂಲವಾಯಿತು. ೩. ಸ್ವದೇಶದ ದಾರಿಯು ಕಟ್ಟಾದದ್ದರಿಂದ ಅಬದಾಲಿಯು ಯುದ್ಧಮಾಡದೆ ಪಾರಾಗುವಂತೆ ಇದ್ದಿಲ್ಲ. ಅವನು ಧೀರನೂ ಅನುಭವಿಕನೂ ಆಗಿದ್ದವರಿಂದ ಅತಿ ಸಾಹಸದಿಂದಲೂ ಯುಕ್ತಿಯಿಂದಲೂಕಾದಿದನು. ೪. ದಿಲ್ಲಿ-ಕುಂಜಪುರಗಳ ನಡುವೆ ಅಬದಾಲಿಯ ಸೈನ್ಯವು ಸಿಕ್ಕಿದ್ದರೂ ಮರಾಠರು ಅವನಮೇಲೆ ಒಮ್ಮೆಲೇ ಎರಡೂ ಸಿಟ್ಟಿನಿಂದ ಏರಿ ಬರಲಿಲ್ಲ. ೫ ಮರಾಠರಿಗೆ ಕಾಳುಕಡಿಗಳು ಸಿಗದಂತಾದದರಿಂದ ಅವರು ಅವಸರದಿಂದ ಯುದ್ಧವನ್ನು ಆರಂಭಿಸಬೇಕಾಯಿತು. ೬ ಯುದ್ಧ ಪದ್ಧತಿ ಮತ್ತು ಯುದ್ಧ ಸಾಧನ ಇವುಗಳಲ್ಲಿ ಕಾಲಕ್ಕೆ ತಕ್ಕ ಸುಧಾರಣೆಗಳನ್ನು ಮಾಡಲಿಲ್ಲ; ತೋಫು - ತುಬಾಕಿಗಳನ್ನು ಉಪಯೋಗಿಸಹತ್ತಿದ ಮೇಲೆಯೂ ಆನೆಯ ಮೇಲೆ ಕುಳಿತು ಯುದ್ಧಮಾಡುವದನ್ನು ಬಿಡಲಿಲ್ಲ ೭. ಮರಾಠರು ತಮ್ಮ ಸೈನಿಕರಿಗೆ ತೋಫುಗಾರಿಕೆಯ ಶಿಕ್ಷಣವನ್ನು ಕೊಡಲಿಲ್ಲ. ಕೆಲಸಗಾರನಾಗಿ ಬಂದ ‡ಗಾರ್ದಿ ಇಬ್ರಾಹಿಮಖಾನನ ತೋಫುಗಳನ್ನು ನಂಬಿ ಬೈಲುಯುದ್ಧಕ್ಕೆ ನಿಂತದ್ದರಿಂದ ಸದಾಶಿವರಾಯನು ಅವನಹೇಳಿಕೆಯಂತೆಯೇ ನಡೆಯಬೇಕಾಯಿತು! ೮ ವಿಶ್ವಾಸರಾಯನು ಬಿದ್ದಕೂಡಲೇ ಸದಾಶಿವರಾಯನು ರಾವುತುಂಬಿ ಶತ್ರುಗಳ ಮೇಲೆ ಹರಿದುಹೋದದ್ದರಿಂದ ಮರಾಠರ ಸೈನ್ಯದಲ್ಲಿ ಅವ್ಯವಸ್ಥೆಯುಂಟಾಯಿತು.

೮. **ಪಾನೀಪತದ ಯುದ್ಧದ ಪರಿಣಾಮ:**— ೧. ದಕ್ಷಿಣದಲ್ಲಿಯ ಸುಮಾರು ೧॥ ಲಕ್ಷ ದಂಡಾಳುಗಳು ಈ ಯುದ್ಧದಲ್ಲಿ ಮಡಿದದರಿಂದ ಮುಂದಿನ

‡ 'ಗಾರ್ದಿ' ಎಂಬದು 'ಗಾರ್ಡ್ಸ್' ಎಂಬದರ ರೂಪವು. ಇಬ್ರಾಹಿಮಖಾನನೊಡನೆ ಬಂದ ಮರಾಠರಲ್ಲಿ ಕೆಲಸಕ್ಕೆ ನಿಂತ ಮುಜಫರಖಾನ ಗಾರ್ದಿಯು ಸದಾಶಿವರಾಯನ ಕೊಲೆಯ ಪ್ರಯತ್ನ ಮಾಡಿದ್ದನು. ಸರದೇಸಾಯಿ ಕೃತ ಹಿಂ. ಸ. ಇತಿಹಾಸ ಪು. ೧೩೮.

ಕಾಲದಲ್ಲಿ ಕರ್ತೃತ್ವಶಾಲಿಗಳ ಕೊರತೆಯೆನಿಸಿತು. ೨. ಮರಾಠರ ಸಾಮ್ರಾಜ್ಯ ವೃಕ್ಷವು ಸೊಕ್ಕಿನಿಂದಬೆಳೆಯುತ್ತಿರುವಾಗಲೇ, ಪಾನೀಪತದ ಸೋಲೆಂಬ ಸಿಡಿಲು ಬಡಿದು ಅದು ಮುಪ್ಪಾಯಿತು. ೩. ಅಬದಾಲಿಯು ಜಯಹೊಂದಿದರೂ ಅವನು ಆಳತೆಗೆಟ್ಟ ಹಾನಿಗೆ ಗುರಿಯಾದುದರಿಂದ ಈ ದೇಶದ ಗೊಡವೆಯನ್ನು ಬಿಟ್ಟು ಹೊರಟುಹೋದನು. ೪. ನಜೀಬಖಾನ, ಸುಜಾಉದ್ದೌಲ ಇವರ ಕನಸು ಬಯಲಾಗಿ, ದಿಲ್ಲಿಯ ಸಾಮ್ರಾಜ್ಯವು ಮಾತ್ರ ತೀರ ಬಲಗುಂದಿತು ೫. ಮರಾಠರೂ ಮುಸಲ್ಮಾನರೂ ಅರಸೊತ್ತಿಗೆಗಾಗಿ ಕಾದಿಕಾದಿ ದಣಿದು ಇಬ್ಬರೂ ಹಣ್ಣಾದರು; ಫ್ರೆಂಚರನ್ನು ಮೂಲೆಗೊತ್ತಿ ಆದೇ ಪ್ರಬಲರಾಗುತ್ತಿದ್ದ ಇಂಗ್ಲಿಷರಿಗೆ ಮಾತ್ರ ರಾಜ್ಯಸ್ಥಾಪನೆಗೆ ಇಂಬುದೊರೆಯಿತು.

---

# ೧೩ನೆಯ ಪಾಠ

## ಯುರೋಪದ ವ್ಯಾಪಾರಸ್ಥರ ಬರುವಿಕೆ

೧. **ಯುರೋಪದವರು ಹಿಂದುಸ್ತಾನಕ್ಕೆ ಬರುವ ಹೊಸ ಮಾರ್ಗ ಹುಡುಕುವ ಪ್ರಯತ್ನ**:— ಹಿಂದುಸ್ತಾನದಲ್ಲಿ ಹುಟ್ಟುವ ಬಟ್ಟೆ, ಸಕ್ಕರೆ, ಹರಳು, ಮಸಾಲೆ ಮುಂತಾದ ಪದಾರ್ಥಗಳು ಪ್ರಾಚೀನ ಕಾಲದಿಂದಲೂ ಯುರೋಪಖಂಡಕ್ಕೆ ಹೋಗುತ್ತಿದ್ದವು. ಇತಲಿದೇಶದ † **ಜಿನೋವಾ ವೇನೀಸ** ಪಟ್ಟಣಗಳು ಆ ಕಾಲದಲ್ಲಿ ವ್ಯಾಪಾರಕ್ಕಾಗಿ ಒಳ್ಳೆಯ ಹೆಸರಾಗಿದ್ದವು. ಅಲ್ಲಿಯ ವ್ಯಾಪಾರಸ್ಥರು ತುರ್ಕಸ್ಥಾನ, ಏಶಿಯಾಮೈನರ, ಇರಾಣ, ಅರಬೀಸಮುದ್ರ ಇವುಗಳ ಮಾರ್ಗವಾಗಿ ಹಿಂದುಸ್ತಾನಕ್ಕೆ ಬಂದು, ಇಲ್ಲಿಯ ಸರಕುಗಳನ್ನು ಕೊಂಡುಕೊಂಡು ಹೋಗುತ್ತಿದ್ದರು. ಈ ಕ್ರಮವು ಕ್ರಿ. ಶ. ೧೫ನೆಯ ಶತಕದ ಮಧ್ಯಕಾಲದ ವರೆಗೂ ನಡೆದಿತ್ತು. ಆದರೆ ಕ್ರಿ. ಶ. **೧೫೪೩**ನೆಯ ವರುಷ ತುರ್ಕರು **ಕಾನಸ್ತಾಂತಿನೋಪಲ**ವನ್ನು ಗೆದ್ದುಕೊಂಡು, ಗ್ರೀಕ ರಾಜ್ಯವನ್ನು ಮುಳುಗಿಸಿ, ಇತಲಿಯಿಂದ ಇರಾಣದ ವರೆಗೆ ತಮ್ಮ ರಾಜ್ಯವನ್ನು ಹಬ್ಬಿಸಿದರು ಯುರೋಪದವರು ಹಿಂದುಸ್ತಾನಕ್ಕೆ ಬರುವ ದಾರಿಯಲ್ಲಿ ಹತ್ತುವ ತುರ್ಕಸ್ತಾನ ಮುಂತಾದ ದೇಶಗಳೆಲ್ಲ ಹೀಗೆ ಮುಸಲ್ಮಾನರ ವಶವಾದದರಿಂದ ಯುರೋಪ

---

† ಪುಟ ೪೮ರಲ್ಲಿಯ ನಕಾಶ ನೋಡು.


ಇರಾಣ
ಅಫಗಾಣಿಸ್ತಾನ
ಅರಬಸ್ತಾನ
ಯುರೋಪ-ಹಿಂದುಸ್ಥಾನಗಳ ಹಳೆ-ಹೊಸ ದಾರಿಗಳು
ಭೂಮಾರ್ಗ
ಜಲಮಾರ್ಗ

ದವರ ವ್ಯಾಪಾರಕ್ಕೆ ತೊಂದರೆಯುಂಟಾಗಹತ್ತಿತು ಮುಂದೆ ಯುರೋಪಿಯನ ರಿಗೂ ಮುಸಲ್ಮಾನರಿಗೂ ಧರ್ಮ ಸಂಬಂಧವಾದ ಹಲವು ಯುದ್ಧಗಳಾದುದ ರಿಂದ ಈ ತೊಂದರೆಯು ಮತ್ತಿಷ್ಟು ಹೆಚ್ಚಿತು. ಯುರೋಪದವರಿಗೆ ಹಿಂದು ಸ್ತಾನದ ಸರಕುಗಳಂತೂ ಬೇಕೇಬೇಕಿದ್ದವು. ಆದದರಿಂದ ಅವರು ಹಿಂದುಸ್ತಾ ನಕ್ಕೆ ಬರುವ ಹೊಸ ಮಾರ್ಗವನ್ನು ಹುಡುಕಬೇಕಾಯಿತು.

**ಯುರೋಪ ಖಂಡದಲ್ಲಿ ಉಂಟಾದ ಜಾಗ್ರತೆ**:- ಆಕಾಲದಲ್ಲಿ ಮುದ್ರಣ ಕಲೆಯ ಮೂಲಕ ಯುರೋಪದವರ ಜ್ಞಾನವು ಹೆಚ್ಚುತ್ತ ನಡೆದಿತ್ತು. ಭೂಮಿಯು ಗೋಲರೂಪವಾಗಿರುವದೆಂಬ ಮಾತು ಅವರಿಗೆ ಗೊತ್ತಾಗಿತ್ತು. ಹೋಕಾಯಂತ್ರದ ಶೋಧವಾಗಿತ್ತು. ಮದ್ದು ಮಾಡುವ ರೀತಿಯು ಗೊತ್ತಾಗಿತ್ತು.

**ಹೊಸ ಮಾರ್ಗ ಹುಡುಕಿದ್ದು**: ಸ್ಪೇನ ಪೋರ್ತುಗಾಲ ದೇಶದ ಅರಸರು ನಾವಿಕವಿದ್ಯೆಗೆ ಹೆಚ್ಚಾಗಿ ಉತ್ತೇಜನವನ್ನಿತ್ತರು. ಅವರ ಸಹಾಯವನ್ನು ಪಡೆದ ನಾವಿಕರು ಹಿಂದುಸ್ತಾನಕ್ಕೆ ಬರುವ, ನೀರುದಾರಿಯನ್ನು ಹುಡುಕತೊಡಗಿದರು ಕಡೆಗೆ **ವಾಸ್ಕೋಡಿಗಾಮ** ಎಂಬ ಪೋರ್ತುಗೀಜ ನಾವಿಕನು ಆಫ್ರಿಕಾಖಂಡ ವನ್ನು ಸುತ್ತುಹಾಕಿ ಕ್ರಿ. ಶ. **೧೪೯೮**ರಲ್ಲಿ ಹಿಂದುಸ್ಥಾನದ ಪಶ್ಚಿಮತೀರದಲ್ಲಿರುವ ಕಲ್ಲೀಕೋಟೆ (ಕಾಲಿಕತ) ಎಂಬ ಬಂದರಕ್ಕೆ ಬಂದಿಳಿದನು. ಅಂದಿನಿಂದ ಯುರೋಪ-ಹಿಂದುಸ್ತಾನಗಳ ವ್ಯಾಪಾರವು ಈ ಹೊಸ ಮಾರ್ಗದಿಂದ ಸಾಗ ಹತ್ತಿತು.

೨. **ಪೋರ್ತುಗೀಜರ ಉತ್ಕರ್ಷ**:— ವಾಸ್ಕೋಡಿಗಾಮನು ಕಲ್ಲೀ ಕೋಟೆಯ **ಸಾಮೋರಿನ** ಎಂಬ ಅರಸನಿಂದ ವ್ಯಾಪ್ಯಾರದ ಅಧಿಕಾರವನ್ನು ಪಡೆದು ಅಲ್ಲಿವ್ಯಾಪಾರವನ್ನು ಆರಂಭಿಸಿದನು. ಆದರೆ ಈಮೊದಲು ಅಲ್ಲಿವ್ಯಾಪಾರ ಮಾಡುತ್ತಿದ್ದ †ಮೂರರೆಂಬ ಆಫ್ರಿಕದ ಮುಸಲ್ಮಾನ ವ್ಯಾಪಾರಸ್ಥರ ವಿರೋಧದ ಮೂಲಕ ಪೋರ್ತುಗೀಜರಿಗೆ ತೊಂದರೆಯಾಗಹತ್ತಿತು. ಕಡೆಗೆ ಅವರು ಸಾಮೋರಿನನ ಆಶ್ರಯನ್ನು ಬಿಟ್ಟು ಕೋಚೀನದ ಅರಸನಾದ **ತ್ರಿಮುಂಪಾರನ** ಆಸರವನ್ನು ಹೊಂದಿದರು. ಬಳಿಕ ಬರಬರುತ್ತ ಪೋರ್ತುಗೀಜರ ವ್ಯಾಪಾರವು ಬೆಳೆಯಹತ್ತಿತು.

---

†ಇವರೇ ಮುಂದೆ ಮಲಬಾರದಲ್ಲಿ ಸ್ಥಿರಗೊಂಡು ನಿಂತು ‹ಮೋಪಲಾ› ಎಂಬ ಹೆಸರು ಹೊಂದಿದರು.

**ಆಲ್ಮಿಡಾ:—** ಕ್ರಿ. ಶ. ೧೫೦೫-೧೫೦೯. ಪೋರ್ತುಗೀಜರ ವ್ಯಾಪಾರವು ಬೆಳೆಯುತ್ತ ನಡೆದಂತೆ ಅವರು ತಮ್ಮ ಸ್ಥಾನಗಳನ್ನು ರಕ್ಷಿಸಿಕೊಳ್ಳಬೇಕಾಯಿತು. ಆದಕ್ಕಾಗಿ ಅವರು **ಆಲ್ಮಿಡಾ** ಎಂಬವನನ್ನು ಮೊದಲನೆಯ ಗವ್ಹರ್ನರನನ್ನು ನಿಯಮಿಸಿದರು. ಇವನು ಮೂರರ ಬಲವನ್ನು ತಗ್ಗಿಸಿ ಬಲವಾದ ಒಂದು ಹಡಗುಪಡೆಯನ್ನು ಸಜ್ಜಗೊಳಿಸಿದನು.

**ಅಲ್ಬುಕರ್ಕ:**— ಕ್ರಿ ಶ. ೧೫೦೯-೧೫೧೫ **ಅಲ್ಬುಕರ್ಕನು** ಪೋರ್ತುಗೀಜರ ಎರಡನೆಯ ಗವ್ಹರ್ನರನು. ಇವನು ಈ ದೇಶದ ಅರಸರ ಜಗಳದಲ್ಲಿ ಸೇರಿ ರಾಜ್ಯವನ್ನು ಸ್ಥಾಪಿಸುವ ಪ್ರಯತ್ನ ಮಾಡಿದನು. ಕಿ. ಶ. ೧೫೧೦ರಲ್ಲಿ ವಿಜಾಪುರದವರಿಂದ ಗೋವೆಯನ್ನು ಗೆದ್ದುಕೊಂಡು ಅದನ್ನು ಪೋರ್ತುಗೀಜರ ರಾಜಧಾನಿಯನ್ನು ಮಾಡಿದನು. ಯುದ್ಧಕಲೆಯ ಶಿಕ್ಷಣವನ್ನು ಕೊಟ್ಟು ಈ ದೇಶದ ಜನರ ಸೈನ್ಯವನ್ನು ಸಿದ್ಧಪಡಿಸಿದನು. ಇವನ ಕಾಲದಲ್ಲಿ ಸುರತ, ವಸಯಿ ಠಾಣೆ, ಮುಂಬಯಿ, ಮಂಗಳೂರ, ಕೋಲಂಬೋ ಇವು ಇವರ ಸ್ಥಾನಗಳಾಗಿದ್ದವು.

**೩. ಪೋರ್ತುಗೀಜರ ಅವನತಿಯ ಕಾರಣಗಳು:**— ಕ್ರಿ. ಶ. ೧೫೦೮ರಲ್ಲಿ ಪೋರ್ತುಗಾಲವು ಸ್ಪೇನದವರ ವಶವಾದದರಿಂದ ಸ್ವದೇಶದ ಸಹಾಯುವು ಹಿಂದುಸ್ತಾನದಲ್ಲಿಯ ಪೋರ್ತುಗೀಜರಿಗೆ ಸಾಕಷ್ಟು ಸಿಗದಾಯಿತು. ಅಲ್ಬುಕರ್ಕನ ತರುವಾಯ ಸಮರ್ಥರಾದ ಗವ್ಹರ್ನರರು ಯಾರೂ ಬರಲಿಲ್ಲ. ಪೋರ್ತುಗೀಜರು ತಮ್ಮ ಏರಿಕೆಯ ಕಾಲದಲ್ಲಿ ಧರ್ಮಪ್ರಸಾರಕ್ಕಾಗಿ ಒತ್ತಾಯದ ಮಾರ್ಗವನ್ನು ಅವಲಂಬಿಸಿದ್ದರಿಂದ ಈ ದೇಶದ ಜನರು ಅವರನ್ನು ದ್ವೇಷಿಸಹತ್ತಿದರು. ಕ್ರಿ. ಶ. **೧೬೦೫**ರಲ್ಲಿ ಅಂಬೋಯಿನಾ ದ್ವೀಪವನ್ನು ಡಚ್ಚರು ಕಸಿದುಕೊಂಡದರಿಂದ ಅತ್ತ ಕಡೆಯ ಪೋರ್ತುಗೀಜರ ವ್ಯಾಪಾರವು ಕುಗ್ಗಿತು. ಹಡಗುಪಡೆಯ ಸಾಮರ್ಥ್ಯದ ಹೆಮ್ಮೆಯಿಂದ ಜಹಾಂಗೀರನ ಸಂಬಂಧವುಳ್ಳ ಒಂದು ಹಡಗವನ್ನು ಇವರು ಸುಲಿದುಕೊಂಡರು. ಆದದರಿಂದ ಅವನು ಸಿಟ್ಟಾಗಿ ಇವರನ್ನು ಮುರಿಯುವ ಪ್ರಯತ್ನ ಮಾಡಹತ್ತಿದನು. ಕ್ರಿ. ಶ. **೧೬೧೨**ರಲ್ಲಿ ಇಂಗ್ಲಿಷರು ಸುವಾಲಿ ಎಂಬಲ್ಲಿ ಪೋರ್ತುಗೀಜರನ್ನು ಸೋಲಿಸಿದರು. ಬರಬರುತ್ತ ಪೋರ್ತುಗೀಜರ ಸ್ಥಾನಗಳು ಕೈಬಿಡಹತ್ತಿದವು. ಕ್ರಿ. ಶ. **೧೭೩೯**ರಲ್ಲಿ ಸಾಷ್ಟೀ ಪ್ರಾಂತವು ಪೇಶ್ವೆಯವರ ವಶವಾದ ಬಳಿಕ ಉತ್ತರ ಕೊಂಕಣದಿಂದ ಇವರು

ಕಾಲ್ದೆಗೆದರು. **ಗೋವೆ, ದೀವ, ದಮನ** ಇವು ಮಾತ್ರ ಇಂದಿಗೂ ಪೋರ್ತುಗೀಜರ ಅಧೀನದಲ್ಲಿರುವವು.

೪. **ಡಚ್ಚರ ವೃತ್ತಾಂತ** :— ಕ್ರಿ. ಶ. **೧೬೦೨**ರಲ್ಲಿ ಡಚ್ಚರು ತಮ್ಮದೊಂದು ಸಂಘವನ್ನು ಸ್ಥಾಪಿಸಿ ಸಮುದ್ರದ ಮೇಲೆ ವರ್ಚಸ್ಸನ್ನು ನೆಲಸಿ ಬರಬರುತ್ತ ಪೋರ್ತುಗೀಜರ ವ್ಯಾಪಾರವನ್ನು ಸೆಳೆದುಕೊಂಡರು. ಬಳಿಕ **ಸುಮಾತ್ರಾ, ಜಾವಾ** ಮೊದಲಾದ ನಡುಗಡ್ಡೆಗಳನ್ನು ಗೆದ್ದುಕೊಂಡು ಪೂರ್ವದ ಕಡೆಯ ವ್ಯಾಪಾರದಿಂದ ವಿಪುಲವಾದ ಲಾಭವನ್ನು ಹೊಂದಹತ್ತಿದರು. ಕ್ರಿ. ಶ. **೧೬೧೧**ರಲ್ಲಿ ಇವರು ಪೋರ್ತುಗೀಜರ ಹಡಗುಪಡೆಯನ್ನು ಸೋಲಿಸಿ ಅವರ ಸುರತದ ಸ್ಥಾನವನ್ನು ತೆಗೆದುಕೊಂಡರು. **ನಾಗಾಪಟ್ಟಣ, ಚಿನಸುರಾ, ಸಿಲೋನ, ತ್ರಿಂಕೋಮಾಲಿ** ಇವು ಡಚ್ಚರ ವ್ಯಾಪಾರದ ಸ್ಥಾನಗಳಾಗಿದ್ದವು. ಕ್ರಿ. ಶ **೧೬೨೩**ರಲ್ಲಿ ಡಚ್ಚರಿಗೂ ಇಂಗ್ಲಿಷರಿಗೂ ಜಗಳಹತ್ತಿದಾಗ ಡಚ್ಚರು **ಅಂಬೋಯಿನಾ**ದಲ್ಲಿ ಇಂಗ್ಲೀಷ ವ್ಯಾಪಾರಿಗಳನ್ನು ಕೊಲೆಗೊಳಿಸಿದರು. ಅಂದಿನಿಂದ ಇಂಗ್ಲಿಷರು ಆತ್ತಕಡೆಯ ತಮ್ಮ ವ್ಯಾಪಾರವನ್ನು ನಿಲ್ಲಿಸಿ ಹಿಂದುಸ್ಥಾನದಲ್ಲಿಯೆ ಸ್ಥಿರಗೊಳ್ಳುವ ಪ್ರಯತ್ನ ನಡೆಯಿಸಿದರು. ಕ್ರಿ. ಶ. **೧೬೫೨**ರಲ್ಲಿ ಯುರೋಪಖಂಡದಲ್ಲಿ ಇಂಗ್ಲಿಷರು ಡಚ್ಚರನ್ನು ಸೋಲಿಸಿದಂದಿನಿಂದ ಡಚ್ಚರ ಕಸುವು ಕುಂದಹತ್ತಿತು. ಹಿಂದುಸ್ಥಾನದಲ್ಲಿಯ ಡಚ್ಚರ ಸ್ಥಾನಗಳೆಲ್ಲ ಇಂಗ್ಲಿಷರ ವಶವಾದವು. ಸುಮಾತ್ರಾ ಮೊದಲಾದ ಪೂರ್ವದ ನಡುಗಡ್ಡೆಗಳು ಮಾತ್ರ ಇಂದಿಗೂ ಡಚ್ಚರ ವಶದಲ್ಲಿವೆ.

---

# ೧೪ ನೆಯ ಪಾಠ

## ಇಂಗ್ಲಿಷರೂ ಫ್ರೇಂಚರೂ

೧. **ಇಂಗ್ಲಿಷರ ಬರುವಿಕೆ** :— ಇಂಗ್ಲಂಡದ "**ಈಸ್ಟ ಇಂಡಿಯಾ ಕಂಪನಿ**" ಎಂಬ ವ್ಯಾಪಾರದ ಸಂಘದವರು ಕ್ರಿ. ಶ. **೧೬೦೦** ರಲ್ಲಿ ತಮ್ಮ ದೇಶದ ರಾಣಿಯಾದ **ಎಲಿಜಾಬೇಥ**ಳಿಂದ ಪೂರ್ವದ ಕಡೆಯ ದೇಶದ ಸಂಗಡ ವ್ಯಾಪಾರಮಾಡುವ ಅಪ್ಪಣೆಯನ್ನು ಪಡೆದರು. ಇವರು ಮೊದಲು **ಮಲಕ್ಕಾ** ಮುಂತಾದ ದ್ವೀಪಗಳ ಸಂಗಡ ವ್ಯಾಪಾರ ಮಾಡಲಾರಂಭಿಸಿದರು. ಆದರೆ

ಪೋರ್ತುಗೀಜರೂ ಡಚ್ಚರೂ ಇಂಗ್ಲಿಷ ವ್ಯಾಪಾರಿಗಳಿಗೆ ವಿರೋಧಿಗಳಾದದರಿಂದ ಇವರು ಅತ್ತಕಡೆಯ ವ್ಯಾಪಾರವನ್ನು ಬಿಟ್ಟುಕೊಟ್ಟು, ಹಿಂದುಸ್ಥಾನದಲ್ಲಿಯ ತಮ್ಮ ವ್ಯಾಪಾರವನ್ನೇ ಹೆಚ್ಚಿಸಹತ್ತಿದರು. ಕ್ರಿ. ಶ ೧೬೦೮ ರಲ್ಲಿ ಕ್ಯಾಪ್ಟನ್ **ಹಾಕಿನ್ಸ** ಎಂಬ ಗೃಹಸ್ಥನು ಬರುವ ಸರಕಿನ ಮೇಲೆ ನೂರಕ್ಕೆ ಮೂರುವರೆಯಂತೆ ಸುಂಕವನ್ನು ಕೊಡಲೊಪ್ಪಿ **ಜಹಾಂಗೀರ** ಬಾದಶಾಹನಿಂದ, ಸುರತದಲ್ಲಿ ವ್ಯಾಪಾರಮಾಡುವ ಅಧಿಕಾರವನ್ನು ಪಡೆದನು ಕ್ರಿ ಶ ೧೬೧೫ರಲ್ಲಿ ಇಂಗ್ಲಂಡದ ಅರಸನಾದ **ಜೇಮ್ಸನು** ಸರ್ **ಥಾಮಸ್ ರೋ** ಎಂಬ ವಕೀಲನನ್ನು ಕಾಣಿಕೆಯೊಂದಿಗೆ ಜಹಾಂಗೀರನ ಓಲಗಕ್ಕೆ ಕಳುಹಿದನು. ರೋನ ಪ್ರಯತ್ನದಿಂದ ಹಿಂದುಸ್ಥಾನದ ದಂಡೆಗುಂಟ ವ್ಯಾಪಾರ ಮಾಡುವ ಅಧಿಕಾರವು ಕಂಪನಿಗೆ ದೊರೆಯಿತು.

**ವಖಾರಗಳನ್ನು ಸ್ಥಾಪಿಸಿದ್ದು:—** ಮುಂದಿನ ನೂರು ವರ್ಷಗಳಲ್ಲಿ ಕಂಪನಿಯುವರು ಹಿಂದುಸ್ಥಾನದ ಪೂರ್ವ-ಪಶ್ಚಿಮ ದಂಡೆಗಳಲ್ಲಿ ಅಲ್ಲಲ್ಲಿ ತಮ್ಮ ವಖಾರುಗಳನ್ನು ಸ್ಥಾಪಿಸಿದರು. ಅವುಗಳಲ್ಲಿ **ಸುರತ, ಪೋರ್ಟ್‌ಸೆಂಟ ಜಾರ್ಜ** (ಮದ್ರಾಸ) **ಪೋರ್ಟ ಉಯಿಲ್ಯಮ್** (ಹುಗಳಿ) ಇವು ಮುಖ್ಯವಾಗಿದ್ದವು. ಕ್ರಿ. ಶ. ೧೬೬೧ರಲ್ಲಿ ಪೋರ್ತುಗಾಲದ ರಾಜನು ತನ್ನ ಮಗಳನ್ನು ಇಂಗ್ಲಂಡದ ೨ನೆಯ ಚಾರ್ಲಸನಿಗೆ ಕೊಟ್ಟಾಗ ಮುಂಬಯಿ ನಡುಗಡ್ಡೆಯನ್ನು ಕಾಣಿಕೆಯಾಗಿ ಕೊಟ್ಟನು. ಮುಂದೆ ಚಾರ್ಲಸನು ಅದನ್ನು ವರ್ಷಕ್ಕೆ ೧೦ ಪೌಂಡು ಭಾಡಿಗೆಯಿಂದ ಕಂಪನಿಗೆ ಕೊಟ್ಟನು. ಕ್ರಿ ಶ. ೧೬೮೭ರಲ್ಲಿ ಸುರತವನ್ನು ಬಿಟ್ಟು ಕಂಪನಿಯುವರು ಮುಂಬಯಿಗೆ ಬಂದು, ಅದನ್ನೇ ವ್ಯಾಪಾರದ ಮುಖ್ಯ ಸ್ಥಳವನ್ನು ಮಾಡಿದರು.

**ಯುನಾಯಿಟೆಡ್ ಈಸ್ಟ ಇಂಡಿಯಾ ಕಂಪನಿಯ ಸ್ಥಾಪನೆ :—** ಕಂಪನಿಗಾಗುವ ಲಾಭವನ್ನು ಕಂಡು, ಉಳಿದವರು ತಾವೂ ವ್ಯಾಪಾರ ಮಾಡಬೇಕೆಂದು ಪ್ರಯತ್ನಿಸಹತ್ತಿದರು ಅದುವರೆಗೆ ಹಿಂದುಸ್ಥಾನದ ಕೂಡ ಈಸ್ಟ ಇಂಡಿಯಾ ಕಂಪನಿಯುವರು ಮಾತ್ರ ವ್ಯಾಪಾರ ಮಾಡಬೇಕೆಂಬ ನಿರ್ಬಂಧವಿತ್ತು. ಅದು ತಪ್ಪಿ ಬೇಕಾದವರು ವ್ಯಾಪಾರ ಮಾಡಬಹುದೆಂದು ಗೊತ್ತಾಯಿತು. ಕೂಡಲೆ ಬೇರೊಂದು ಕಂಪನಿಯು ಹುಟ್ಟಿ ಹಿಂದುಸ್ಥಾನದ ಕೂಡ ಅದರ ವ್ಯಾಪಾರವು ಆರಂಭವಾಯಿತು. ಎರಡೂ ಕಂಪನಿಗಳು ಏರಾಟ

ಕೆಯಿಂದ ತಮ್ಮ ಸರಕುಗಳನ್ನು ಮಾರಹತ್ತಿದ್ದರಿಂದ ಲಾಭದ ಮಾನವು ಕಡಿಮೆಯಾಗಹತ್ತಿತು. ಈ ಕ್ರಮವು ಕೆಲವು ವರ್ಷ ನಡೆದ ಬಳಿಕ ಒಕ್ಕಟ್ಟಿನಿಂದ ವ್ಯಾಪಾರ ಮಾಡುವದೇ ಕ್ಷೇಮವೆಂದು ಮನಗಂಡು, ಎರಡೂ ಕಂಪನಿಯವರು ಒಟ್ಟಾಗಿ '**ಯುನಾಯಿಟೆಡ್ ಈಸ್ಟ ಇಂಡಿಯಾ ಕಂಪನಿ**' ಎಂಬ ಹೆಸರಿನಿಂದ ವ್ಯಾಪಾರ ಮಾಡಹತ್ತಿದರು. ಕ್ರಿ. ಶ. **೧೭೦೭** ಅಂದಿನಿಂದ ಇಂಗ್ಲಿಷರು ದಿನದಿನಕ್ಕೆ ಏಳ್ಗೆಯನ್ನು ಹೊಂದಹತ್ತಿದರು.

**ಬಂಗಾಲದಲ್ಲಿ ಕಂಪನಿಯ ಏಳ್ಗೆ:**— ೧೭೧೫ ರಲ್ಲಿ ಬಂಗಾಲದ ಮೊಗಲ ಸುಭೇದಾರನಾದ **ಮುರ್ಶಿದ ಕುಲೀಖಾನನ** ವಿರುದ್ಧವಾಗಿ ದೂರಿಕೊಳ್ಳಲಿಕ್ಕೆಂದು ಕಂಪನಿಯವರು ಬಾದಷಾಹನಲ್ಲಿಗೆ ಕೆಲವು ವಕೀಲರನ್ನು ಕಳುಹಿದರು. ಅವರು ದಿಲ್ಲಿಗೆ ಹೋದಾಗ **ಫರಕ್‌ಶಿಯರ**ನಿಗೆ ಜಡ್ಡಾಗಿತ್ತು. ವಕೀಲರಲೊಬ್ಬನಾದ **ಸರ್ಜನ್ ಹ್ಯಾಮಿಲ್ಟನನ** ಉಪಾಯದಿಂದ ಬಾದಷಹನಿಗೆ ಗುಣವಾಗಲು ಅವನು ಇಂಗ್ಲಿಷ ಕಂಪನಿಯವರಿಗೆ ೩೮ ಊರುಗಳನ್ನು ಕೊಟ್ಟನಲ್ಲದೆ, ಅವರ ಸರಕಿನ ಮೇಲಿನ ಸುಂಕವನ್ನು ತೆಗೆದು ಹಾಕಿದನು. ಅಂದಿನಿಂದ ಬಂಗಾಲದಲ್ಲಿ ಕಂಪನಿಯವರು ಪ್ರಬಲರಾಗಹತ್ತಿದರು.

೨.**ಫ್ರೇಂಚರ ವೃತ್ತಾಂತ:**— ಕ್ರಿ. ಶ. **೧೬೬೦** ರಲ್ಲಿ '**ಫ್ರೇಂಚ ಈಸ್ಟ ಇಂಡಿಯಾ ಕಂಪನಿ**'ಯು ಉಂಟಾಗಿ ಅದು ಹಿಂದುಸ್ಥಾನದ ಕೂಡ ವ್ಯಾಪಾರ ಮಾಡಹತ್ತಿತು ಫ್ರೇಂಚರಿಗೆ ಆರಂಭದಿಂದಲೇ ರಾಜಾಶ್ರಯವಿದ್ದದರಿಂದ, ಉಳಿದವರಿಗಿಂತ ಶೀಘ್ರವಾಗಿ ಅವರ ವ್ಯಾಪಾರವು ಹೆಚ್ಚಿತು. **ಸುರತ, ಮಚ್ಛಲೀಪಟ್ಟಣ, ಪಾಂಡೀಚೇರಿ, ಚಂದ್ರನಗರ, ಮಾಹಿಮ, ಕಾರೀಕಲ್** ಮುಂತಾದವು ಫ್ರೇಂಚರ ವ್ಯಾಪಾರದ ಸ್ಥಳಗಳಾಗಿದ್ದವು. ಫ್ರೇಂಚ ಗವ್ಹರ್ನರನಾದ ಮೊದಲನೆಯ **ಮಾರ್ಟಿನ**ನು ಕ್ರಿ. ಶ. **೧೬೭೪** ರಲ್ಲಿ ಪಾಂಡೀಚೇರಿಯನ್ನು ಫ್ರೇಂಚರ ಮುಖ್ಯ ಪಟ್ಟಣವನ್ನು ಮಾಡಿ ಅದನ್ನು ಚೆನ್ನಾಗಿ ಬದಲಿಸಿದನು. ಮತ್ತು **ಶಿವಾಜಿ**ಯು ಕರ್ನಾಟಕದಮೇಲೆ ದಂಡೆತ್ತಿ ಬಂದಾಗ ಅವನೊಡನೆ ಸಖ್ಯವನ್ನು ಬೆಳಿಸಿ ವ್ಯಾಪಾರದ ಅನುಕೂಲತೆಗಳನ್ನು ಪಡೆದನು. ಚಂದ್ರನಗರದ ವಖಾರು ಇವನ ಕಾಲದಲ್ಲಿಯೇ, ಕ್ರಿ. ಶ. **೧೬೯೦-೯೨** ರ ವರೆಗೆ ಸ್ಥಾಪಿಸಲ್ಪಟ್ಟಿತು. ೨ನೆಯ ಗವ್ಹರ್ನರನಾದ **ಲೆನ್ವಾರ**ನು ಕಂಪ

ನಿಯ ಕಾರಭಾರದಲ್ಲುಂಟಾದ ಅವ್ಯವಸ್ಥೆಯನ್ನು ಇಲ್ಲದಂತೆ ಮಾಡಿ ವ್ಯಾಪಾರವನ್ನು ಬೆಳೆಸಿದನು.

ಇವನ ತರುವಾಯ ಕ್ರಿ ಶ. ೧೭೩೫-೪೦ ರ ವರೆಗೆ **ಡ್ಯೂಮಾಸನು** ಇನೆಯ ಗವ್ಹರ್ನರನಾದನು. ಇವನು ಜಾಣನೂ ಸುಸ್ವಭಾವವುಳ್ಳವನೂ ಆಗಿದ್ದು ಅರ್ಕಾಟದ ನವಾಬನನ್ನು ಒಲಿಸಿಕೊಂಡು ಫ್ರೆಂಚರ ಮಹತ್ವವನ್ನು ಹೆಚ್ಚಿಸಿದನು. ಇವನು ನವಾಬನಿಗೆ ಧನಸಹಾಯಮಾಡಿ, ಅವನಿಂದ ನಾಣ್ಯಗಳನ್ನು ಮುದ್ರಿಸುವ ಅಧಿಕಾರವನ್ನೂ **ಕಾರಿಕಲ್** ಬಂದರವನ್ನೂ ಸಂಪಾದಿಸಿದನು. ಕ್ರಿ.ಶ. **೧೭೩೯**ರಲ್ಲಿ ರಘೂಜಿ ಭೋಸಲೆಯು ಅರ್ಕಾಟದಮೇಲೆ ಸಾಗಿಬಂದು **ದೋಸ್ತಅಲಿ**ಯನ್ನು ಕೊಲ್ಲಲು, ಅವನ ಅಳಿಯ **ಚಂದಾಸಾಹೇಬನು** ತನ್ನ ಜನರೊಂದಿಗೆ ಪಾಂಡೀಚೇರಿಗೆ ಹೋಗಿ ಡ್ಯೂಮಾಸನ ಆಶ್ರಯದಲ್ಲಿರಹತ್ತಿದನು.

ಡ್ಯೂಮಾಸನ ತರುವಾಯ ಕ್ರಿ ಶ. **೧೭೪೧** ರಲ್ಲಿ ಇತಿಹಾಸ ಪ್ರಸಿದ್ಧನಾದ **ಡ್ಯೂಪ್ಲೆಯು** ಗವ್ಹರ್ನರನಾದನು. "ಹಿಂದುಸ್ತಾನದ ಜನರಲ್ಲಿ ಒಕ್ಕಟ್ಟಿಲ್ಲ ಸಂಬಳ ಕೊಟ್ಟವರ ಊಳಿಗ ಮಾಡಲು ಇಲ್ಲಿ ಬೇಕಾದಷ್ಟು ಜನರು ಸಿಗುವರು; ಈ ದೇಶದ ಅರಸರು ತಮ್ಮತಮ್ಮೊಳಗೆ ಜಗಳಾಡುತ್ತಿರುವರು. ಯುದ್ಧ ಕಲೆಯ ಶಿಕ್ಷಣವನ್ನು ಕೊಟ್ಟರೆ ಉತ್ತಮ ಸೈನಿಕರಾಗಲು ಈ ಜನರು ತಕ್ಕವರಿರುವರು; ಅಮೇರಿಕೆ-ಆಫ್ರಿಕೆಗಳ ನಿವಾಸಿಗಳ ಹಾಗೆ ಕಾಡುಸ್ಥಿತಿಯವರೂ ಪುಕ್ಕರೂ ಇವರಲ್ಲ; ಫ್ರೆಂಚರಾಷ್ಟ್ರವು ತಕ್ಕ ಸಹಾಯವನ್ನು ಮಾಡಿದರೆ ಹಿಂದೀಯರ, ನೆರವಿನಿಂದಲೇ ಹಿಂದುಸ್ತಾನದಲ್ಲಿ ಫ್ರೆಂಚರ ಸಾಮ್ರಾಜ್ಯವನ್ನು ಸ್ಥಾಪಿಸಲಿಕ್ಕಾಗುವದು." ಎಂಬೀ ತನ್ನ ಅಭಿಪ್ರಾಯವನ್ನು ಡ್ಯೂಪ್ಲೆಯು ವ್ಯಕ್ತಪಡಿಸಿದನು.

ಆಗ ಫ್ರಾನ್ಸದ ಪರಿಸ್ಥಿತಿಯು ನೆಟ್ಟಗಿದ್ದಿಲ್ಲ; ಆದದರಿಂದ ಹಿಂದುಸ್ತಾನದ ಕಡೆಗೆ ಲಕ್ಷ್ಯ ಕೊಡುವದು ಅದಕ್ಕೆ ಸಾಧಿಸಲಿಲ್ಲ. ಹೀಗಿದ್ದರೂ ಡ್ಯೂಪ್ಲೆಯು ತನ್ನ ಸ್ವಂತದ ಸಂಪತ್ತನ್ನೆಲ್ಲಸೂರೆಮಾಡಿ, ಹಿಂದುಸ್ತಾನದಲ್ಲಿ ಫ್ರೆಂಚರ ಸಾಮ್ರಾಜ್ಯವನ್ನು ಸ್ಥಾಪಿಸುವದಕ್ಕಾಗಿ ಬಹಳವಾಗಿ ಹೆಣಗಿದನು ಈ ಕೆಲಸದಲ್ಲಿ ಇವನ ಹೆಂಡತಿಯು ಇವನಿಗೆ ಬಹಳ ನೆರವಾದಳು. ಈಕೆಯು ಒಳ್ಳೆಯ ಚತುರಳೂ ಹಿಂದುಸ್ತಾನದ ಅನೇಕ ಭಾಷೆಗಳನ್ನು ತಿಳಿದವಳೂ

ಆಗಿದ್ದಳು. ಡ್ಯೂಪ್ಲೆಯ ಕಾಲದಲ್ಲಿಯೇ ಇಂಗ್ಲಿಷರಿಗೂ ಫ್ರೇಂಚರಿಗೂ ಯುದ್ಧವು ಆರಂಭವಾಯಿತು. ಉಭಯತರಲ್ಲಿ ಕ್ರಿ. ಶ. ೧೭೪೪ರಿಂದ ೧೭೬೦ರ ವರೆಗೆ ಮೂರು ಯುದ್ಧಗಳಾದವು. ೨ನೆಯ ಯುದ್ಧವು ನಡೆದಿರುವಾಗ ಫ್ರಾನ್ಸದವರು ಡ್ಯೂಪ್ಲೆಯನ್ನು ತಮ್ಮ ದೇಶಕ್ಕೆ ಕರೆಯಿಸಿಕೊಂಡರು. ಮುಂದೆ ಡ್ಯೂಪ್ಲೆಯು ತನ್ನ ಆಯುಷ್ಯವನ್ನು ಬಡತನದಲ್ಲಿ ಕಳೆಯುತ್ತಿರಲು ಕ್ರಿ. ಶ **೧೭೬೩** ರಲ್ಲಿ ಮರಣಹೊಂದಿದನು. ಕಡೆಯದಾದ **ವಾಂಡಿವಾಸ**ದ ಕಾಳಗದಿಂದ ಫ್ರೇಂಚರ ಅಧಿಕಾರವು ನಷ್ಟವಾಯಿತು. ಡೂಪ್ಲೆಯ ಕಲ್ಪನೆಗಳ ಲಾಭವು ಫ್ರಾನ್ಸ ದೇಶಕ್ಕಾಗಲಿಲ್ಲ. ಇಂಗ್ಲಿಷರು ಮಾತ್ರ ಅವೇ ಕಲ್ಪನೆಗಳನ್ನು ಎತ್ತಿಕೊಂಡು ಬರಬರುತ್ತ ಪ್ರಬಲರಾಗಿ ಈ ದೇಶದ ಸೀಮೆಗಳನ್ನು ಒಂದೊಂದಾಗಿ ಕೈವಶ ಮಾಡಿಕೊಳ್ಳಹತ್ತಿದರು

---

# ೧೫ ನೆಯ ಪಾಠ

## ಇಂಗ್ಲಿಷರಿಗೂ ಫ್ರೇಂಚರಿಗೂ ನಡೆದ ಯುದ್ಧಗಳು

## ಕ್ರಿ. ಶ. ೧೭೪೦ ೧೭೬೧

೧. **ಇಂಗ್ಲಿಷ ಮತ್ತು ಫ್ರೇಂಚ ಕಂಪನಿಗಳ ಪರಿಸ್ಥಿತಿ:**— ಕ್ರಿ. ಶ. **೧೭೪೦**ರ ಸುಮಾರಕ್ಕೆ † ತುಳಾಜಿ ಆಂಗ್ರ್ಯಯು ಬಲಗುಂದಿದ ಬಳಿಕ ಪಶ್ಚಿಮ ದಂಡೆಯಲ್ಲಿ ಇಂಗ್ಲಿಷರು ಪ್ರಬಲರಾಗುತ್ತ ನಡೆದರು. **ಮದ್ರಾಸದ** ಕಡೆಯಲ್ಲಿ ಅವರ ವ್ಯಾಪಾರವು ಒತ್ತರದಿಂದ ಬೆಳೆಯ ತೊಡಗಿತು; ಮತ್ತು **ಬಂಗಾಲ**ದಲ್ಲಿಯೂ ಮುಂದುವರಿಯಹತ್ತಿದರು.

ಫ್ರೇಂಚರ ವ್ಯಾಪಾರವೂ ಸುಸೂತ್ರವಾಗಿ ನಾಗಿತ್ತು. **ಪಾಂಡಿಚೇರಿಯ** ಗವ್ಹರ್ನರನಾದ **ಡ್ಯೂಪ್ಲೆಯು** ಫ್ರೇಂಚರ ರಾಜ್ಯವನ್ನು ಹಿಂದುಸ್ಥಾನದಲ್ಲಿ ಸ್ಥಾಪಿಸುವ ಮಹತ್ವಾಕಾಂಕ್ಷೆಯನ್ನು ತಾಳಿ, ಅದಕ್ಕಾಗಿ ಒಳ್ಳೆಯ ಸಾಹಸವನ್ನು ನಡೆಯಿಸಿದ್ದನು. ಅಲ್ಲದೆ ಇಂಗ್ಲೀಷರನ್ನು ಈ ದೇಶದಿಂದ ಹೊರದೂಡುವ ವಿಚಾರವೂ ಅವನದಿತ್ತು.

ಆಗ ಮೊಗಲ ಸಾಮ್ರಾಜ್ಯವು ತೀರ ಬಲಗುಂದಿತ್ತು. ಮರಾಠರ ಲಕ್ಷವು ದಿಲ್ಲಿಯ ಕಡೆಗೆ ತೊಡಗಿಕೊಂಡಿತ್ತು. ಇಂಗ್ಲಿಷರೂ ಫ್ರೇಂಚರೂ

† ಈ ಸಂಗತಿಯು ಹಿಂದೆ ೩೯ನೆಯ ಪುಟದಲ್ಲಿ ಹೇಳಿದೆ.

ನಿಜಾಮ ಮೊದಲಾದ ಅರಸರಿಗೆ ನೆರವಾಗಿ, ಇಲ್ಲವೆ ಅವರ ಜಗಳದಲ್ಲಿ ಕೈಹಾಕಿ, ತಮ್ಮ ತಮ್ಮ ಸಾಮರ್ಥ್ಯವನ್ನು ಹೆಚ್ಚಿಸುವ ಕ್ರಮವನ್ನು ಕೈಕೊಂಡಿದ್ದರು. ಮತ್ತು ಇಂಗ್ಲಿಷರ ವ್ಯಾಪಾರವನ್ನು ಕುಗ್ಗಿಸಬೇಕೆಂದು ಫ್ರೇಂಚರೂ, ಫ್ರೇಂಚರ ಬಲವನ್ನು ಮುರಿಯಬೇಕೆಂದು ಇಂಗ್ಲಿಷರೂ ಹವಣಿಸುತ್ತಿದ್ದರು

**೨. ಇಂಗ್ಲಿಷರಿಗೂ ಫ್ರೇಂಚರಿಗೂ ಆದ ಮೊದಲನೆಯ ಯುದ್ಧ :–** ಕ್ರಿ. ಶ. ೧೭೪೪ ೧೭೪೮ **ಪಾಂಡಿಚೇರಿಯು** ಫ್ರೇಂಚರ ಮುಖ್ಯ ಠಾಣ್ಯವೂ **ಮದ್ರಾಸವು** ಇಂಗ್ಲಿಷರ ಮುಖ್ಯ ಠಾಣವೂ ಆಗಿದ್ದವು. ಯುರೋಪ ಖಂಡದಲ್ಲಿ ಇಂಗ್ಲಿಷ-ಫ್ರೇಂಚರಲ್ಲಿ ಯುದ್ಧವು ಆರಂಭವಾದ ಬಳಿಕ ಕ್ರಿ. ಶ. **೧೭೪೬**ರಲ್ಲಿ ಫ್ರಾನ್ಸದವರು **ಲಾಬಡೋರ್ನೆ** ಎಂಬ ಶೂರ ಸೇನಾಪತಿಯನ್ನ ಬಲವಾದ ಹಡಗುಪಡೆಯೊಂದಿಗೆ ಹಿಂದುಸ್ಥಾನಕ್ಕೆ ಕಳುಹಿದರು. ಅವನು ಬಂದಕೂಡಲೆ ಮದ್ರಾಸವನ್ನು ಮುತ್ತಿ ಅದನ್ನು ವಶಮಾಡಿಕೊಂಡನು. **ಸೆಂಟ ಡೆವ್ಹಿಡ**ವು ಮಾತ್ರ ಇಂಗ್ಲಿಷರ ಕಡೆಗೆ ಉಳಿಯಿತು. ಇಷ್ಟರಲ್ಲಿ ಯುರೋಪದಲ್ಲಿ ಇಂಗ್ಲಿಷರಿಗೂ ಫ್ರೇಂಚರಿಗೂ **ಎಕ್ಸಲಾ ಶಾಪೆಲ** ಎಂಬಲ್ಲಿ ಒಪ್ಪಂದವಾದದರಿಂದ ಈ ದೇಶದ ಯುದ್ಧವನ್ನು ನಿಲ್ಲಿಸಬೇಕಾಯಿತು. + ಮದ್ರಾಸವು ಇಂಗ್ಲಿಷರಿಗೆ ಮರಳಿ ದೊರೆಯಿತು.

**೩. ಹೈದ್ರಾಬಾದ – ಅರ್ಕಾಟಗಳ ಪಟ್ಟದ ಸಲುವಾಗಿ ನಡೆದ ಯುದ್ಧ:—** ಕ್ರಿ. ಶ. **೧೭೪೦-೧೭೫೪.** ಯುದ್ಧವು ನಿಂತರೂ ಎರಡೂ ಕಂಪನಿಗಳ ಹಗೆತನವು ಹೆಚ್ಚಾಗುತ್ತಲೇ ಇತ್ತು. ಅವರು ಒಬ್ಬರನ್ನೊಬ್ಬರು ನಾಶಪಡಿಸುವ ದಾರಿಯನ್ನೇ ಹುಡುಕುತ್ತಿದ್ದರು ಇದೇ ಹೊತ್ತಿಗೆ ದಕ್ಷಿಣ ದೇಶದಲ್ಲಿ ಎರಡು ಕಡೆಗಳಲ್ಲಿ ಪಟ್ಟದ ಸಲುವಾಗಿ ಜಗಳಗಳು ಹುಟ್ಟಿದವು

**೧.** ದೋಸ್ತ ಅಲ್ಲಿಯ ತರುವಾಯ ಅವನ ಮಗ ಸಫದರ ಅಲ್ಲಿಯು **ಅರ್ಕಾಟ**ದ ನವಾಬನಾದನು. ಮುಂದೆ ಅವನ ಕೊಲೆಯಾದ ಬಳಿಕ, ನಿಜಾಮನಿಂದ ನಿಯಮಿಸಲ್ಪಟ್ಟ **ಅನ್ವರುದ್ದೀನ**ನೆಂಬ ಕಾರಭಾರಿಯೇ ಅಲ್ಲಿಯ ನವಾಬ

---

+ ಫ್ರೆಂಚರು ಮದ್ರಾಸವನ್ನು ಹಿಡುದುಕೊಂಡಂತೆ, ಅತ್ತ ಅಮೇರಿಕೆಯ ಯುದ್ಧದಲ್ಲಿ ಇಂಗ್ಲಿಷರು ಫ್ರೇಂಚರ ಲುಯಿಬರ್ಗವನ್ನು ತೆಗೆದುಕೊಂಡಿದ್ದರು. ಆ ಲುಯಿಬರ್ಗವನ್ನು ಉಳಿಸಿಕೊಳ್ಳುವದಕ್ಕಾಗಿ ಫ್ರೇಂಚರು ಮದ್ರಾಸವನ್ನು ಬಿಟ್ಟುಕೊಡಬೇಕಾಯಿತು.

ನಾದನು. ಆಗ ದೋಸ್ತಅಲ್ಲಿಯ ಅಳಿಯನಾದ **ಚಂದಾಸಾಹೇಬನು** ತಾನು ನವಾಬನಾಗಬೇಕೆಂದು ಫ್ರೆಂಚರ ಸಹಾಯವನ್ನು ಬೇಡಿದನು. ಮಹತ್ವಾಕಾಂಕ್ಷಿಯಾದ ಡ್ಯೂಪ್ಲೆಯು ಚಂದಾಸಾಹೇಬನ ಬೆನ್ನು ಕಟ್ಟಿದನು. ೨. ಕ್ರಿ ಶ. ೧೭೪೮ರಲ್ಲಿ ನಿಜಾಮ ಉಲ್ಮುಲ್ಕನು ಸಾಯಲು ಅವನ ಮಗನಾದ **ನಾಸಿರಜಂಗ**ನಿಗೂ ಅವನ ಅಣ್ಣನ ಮಗನಾದ **ಮುಜಫರಜಂಗ**ನಿಗೂ ಪಟ್ಟದ ಸಲುವಾಗಿ ಜಗಳಹತ್ತಿದವು ಆಗ ಮುಜಫರಜಂಗನು ಡೂಪ್ಲೆಯ ಸಹಾಯವನ್ನು ಪಡೆದನು. ಇಂಗ್ಲಿಷರು ಅನ್ವರುದ್ದೀನ ಮತ್ತು ನಾಸಿರಜಂಗ ಇವರ ಪಕ್ಷವನ್ನು ವಹಿಸಿದನು.

ಆಮೇಲೆ ಫ್ರೆಂಚರು ಮುಜಫರಜಂಗ, ಚಂದಾಸಾಹೇಬ ಇವರನ್ನು ಕೂಡಿಕೊಂಡು ಅನ್ವರುದ್ದೀನನ ಮೇಲೆ ಸಾಗಿಹೋದರು. ಕ್ರಿ. ಶ ೧೭೪೯ರಲ್ಲಿ ಅಂಬೂರ ಎಂಬಲ್ಲಿ ಯುದ್ಧವಾಗಿ ನವಾಬನು ಸೋತು ಹತನಾದನು. ಅವನ ಮಗ ಮಹಮ್ಮದ ಅಲ್ಲಿಯು **ತ್ರಿಚನಾಪಳ್ಳಿ**ಗೆ ಓಡಿಹೋದನು; ಚಂದಾಸಾಹೇಬನು ಅರ್ಕಾಟಿನ ನವಾಬನಾದನು ಮುಂದೆ ಫ್ರೆಂಚರು ಮೊದಲಾದವರು ಹೈದರಾಬಾದದ ಕಡೆಗೆ ಹೊರಟರು ಅಷ್ಟರಲ್ಲಿ ನಾಸಿರಜಂಗನು ಕೊಲ್ಲಲ್ಪಟ್ಟದ್ದರಿಂದ ಮುಜಫರ ಜಂಗನಿಗೆ ಅನಾಯಾಸವಾಗಿ ಪಟ್ಟ ದೊರೆಯಿತು. ಕ್ರಿ. ಶ. ೧೭೫೧ರಲ್ಲಿ ಫ್ರೆಂಚ ಸೇನಾಪತಿಯಾದ **ಬುಸಿಯೊಡನೆ** ಮುಜಫರಜಂಗನು ತನ್ನ ರಾಜಧಾನಿಯ ಕಡೆಗೆ ಸಾಗಿರಲು, ಬುಸಿಯು ಒಂದೆ ಉಳಿದು ಹೊತ್ತುಸಾಧಿಸಿ, **ಕಡಪೆ**ಯ ನವಾಬನು ಮುಜಫರಜಂಗನನ್ನು ಕೊಲ್ಲಿಸಿದನು ಬುಸಿಯು ಪ್ರಸಂಗವನ್ನು ತಿಳಿದು ನಿಜಾಮನ ಇನ್ನೊಬ್ಬ ಮಗನಾದ **ಸಲಾಬತಜಂಗ**ನನ್ನು ಪಟ್ಟಕ್ಕೆ ಕುಳ್ಳಿರಿಸಿ, ತಾನು ಏಳು ವರ್ಷಗಳ ವರೆಗೆ ಹೈದರಾಬಾದದಲ್ಲಿ ನಿಂತು ಅಲ್ಲಿ ಫ್ರೆಂಚರ **ವರ್ಚಸ್ಸನ್ನು** ನೆಲೆಗೊಳಿಸಿದನು ಸಲಾಬತಜಂಗನು ಸೈನ್ಯದ ವೆಚ್ಚಕ್ಕಾಗಿ ಉತ್ತರ ಸರಕಾರ ಎಂಬ ಪ್ರಾಂತವನ್ನು ಫ್ರೆಂಚರಿಗೆ ಕೊಟ್ಟನು. ಡೂಪ್ಲೆಯು, ನಾಸಿರಜಂಗ ಕೊಲೆಯಾದ ಸ್ಥಳದಲ್ಲಿ **ಡೂಪ್ಲೆಫತಾಬಾದ** ಎಂಬ ಪಟ್ಟಣವನ್ನು ನೆಲಿಸಿದನು. ಫ್ರೆಂಚರು ಸಮರ್ಥರೆಂದು ದೇಶದಲ್ಲೆಲ್ಲ ಹೆಸರಾದರು.

**ಅರ್ಕಾಟಿದ ಮುತ್ತಿಗೆ:—** (ಕ್ರಿ. ಶ! ೧೭೫೧) ಬುಸಿಯು ಹೈದರಾಬಾದದಲ್ಲಿರುವಾಗ ಇತ್ತ ಚಂದಾಸಾಹೇನು ತ್ರಿಚನಾಪಳ್ಳಿಗೆ ಮುತ್ತಿಗೆ

ಹಾಕಿದನು. ತ್ರಿಚನಾಪಳ್ಳಿಯೊಂದು ಕೈಸೇರಿದರೆ ಅರ್ಕಾಟದ ಪ್ರಾಂತವೆಲ್ಲ ಫ್ರೇಂಚರ ಅಧೀನವಾಗುವವೆಂದು ನೆನೆದು ಇಂಗ್ಲಿಷರ ಕಡೆಯ ಕ್ಯಾಪ್ಟನ್ ಕ್ಲೈವನು " ಚಂದಾಸಾಹೇಬನ ರಾಜಧಾನಿಯಾದ ಅರ್ಕಾಟವನ್ನು ಈಗ ನಾವು ವಶಮಾಡಿಕೊಂಡರೆ, ಅದನ್ನು ಉಳಿಸಿಕೊಳ್ಳುವದಕ್ಕಾಗಿ ಅವನು ತ್ರಿಚನಾಪಳ್ಳಿಯನ್ನು ಬಿಟ್ಟುಬರುವನು. ಇದರಿಂದ ಸಹಜವಾಗಿ ಮಹಮ್ಮದಲ್ಲಿಯ ಬಿಡುಗಡೆಯಾಗುವದು; ಅಪ್ಪಣೆಯಾದರೆ ಈ ಕೆಲಸವನ್ನು ಕೈಕೊಳ್ಳಲು ಸಿದ್ಧನಿರುವೆನು " ಎಂದು ಮದ್ರಾಸದ ಗವ್ಹರ್ನರನಾದ ಸಾಂಡರ್ಸನಿಗೆ ತಿಳುಹಿದನು. ಕ್ಲೈವನು ಮೊದಲು ಕಾರಕೂನನಾಗಿದ್ದನು. ಅವನು ಆ ಕೆಲಸವನ್ನು ಬಿಟ್ಟು ಸೈನ್ಯದಲ್ಲಿಸೇರಿ ಹಲವು ಸಾಹಸಗಳನ್ನು ಮಾಡಿ ಹೆಸರಾದ ಕ್ಯಾಪ್ಟನನೆನಿಸಿದ್ದನು. ಆದದರಿಂದ ಸ್ಯಾಂಡರ್ಸನು ಅವನ ಕಡೆಗೆ ಅರ್ಕಾಟದ ಮುತ್ತಿಗೆಯ ಕೆಲಸವನ್ನು ಒಪ್ಪಿಸಿದನು. ಕೂಡಲೆ ಕ್ಲೈವನು ಒಳ್ಳೆಯ ಹುರುಪಿನಿಂದ ೫೦೦ ರಾಹುತರೊಡನೆ ಅರ್ಕಾಟದಮೇಲೆ ಬಿದ್ದು ಅದನ್ನು ವಶಮಾಡಿಕೊಂಡನು.

ಅರ್ಕಾಟವು ಇಂಗ್ಲಿಷರ ವಶವಾಗಲು, ಚಂದಾಸಾಹೇಬನು ತನ್ನ ಮಗನಾದ **ರಾಜಾಸಾಹೇಬನ** ಸಂಗಡ ದೊಡ್ಡ ದಂಡನ್ನು ಕೊಟ್ಟು ಕಳುಹಲು, ಅವನು ಬಂದು ಅರ್ಕಾಟವನ್ನು ಮುತ್ತಿದನು. ಆದರೆ ಕ್ಲೈವನು ೫೩ ದಿವಸಗಳ ವರೆಗೆ ಒಳ್ಳೆಯ ಧೈರ್ಯದಿಂದ ಆ ಮುತ್ತಿಗೆಯನ್ನು ತಡೆದನು. ಆಗ ಅರ್ಕಾಟದ ಆಶೆಯನ್ನು ಬಿಟ್ಟು ರಾಜಾಸಾಹೇಬನು ಹೊರಟುಹೋದನು.

**ಅರ್ಣಿ, ಕಾವೇರಿಪಾಕಗಳ ಯುದ್ಧ**:— ಅಷ್ಟರಲ್ಲಿ ಮದ್ರಾಸದಿಂದ ಹೊರಟ ಹೊಸ ದಂಡು ಅರ್ಕಾಟಕ್ಕೆ ಮುಟ್ಟಿತು. ಬಳಿಕ ಕ್ಲೈವನು ರಾಜಾಸಾಹೇಬನನ್ನು ಬೆನ್ನಟ್ಟಿ ಅರ್ಣಿಯ ಹತ್ತರ ಅವನನ್ನು ಸೋಲಿಸಿ; **ಕಾಂಜಿವರಮು**ವನ್ನು ತೆಗೆದುಕೊಂಡನು. ಮುಂದೆ ರಾಜಾಸಾಹೇಬನು ಮದ್ರಾಸದ ಮೇಲೆ ಸಾಗಿ ಹೋಗುತ್ತಿರಲು ಕ್ಲೈವನು ಮತ್ತೆ ಅವನನ್ನು ಬೆನ್ನಟ್ಟಿ **ಕಾವೇರಿಪಾಕ** ಎಂಬಲ್ಲಿ ಸೋಲಿಸಿ ಡೂಪ್ಲೆಫತಾಬಾದವನ್ನು ಹಾಳುಮಾಡಿದನು.

ಬಳಿಕ ಮೇಜರ **ಲಾರೇನ್ಸನೂ** ಕ್ಲೈವನೂ ತ್ರಿಚನಾಪಳ್ಳಿಯನ್ನು ಮುತ್ತಿದ್ದ ಚಂದಾಸಾಹೇಬನ ಮೇಲೆ ಸಾಗಿಹೋದರು. ಡೂಪ್ಲೆಯು **ಲಾ** ಎಂಬ ಸೇನಾಪತಿಯನ್ನು ಚಂದಾಸಾಹೇಬನ ಸಹಾಯಕ್ಕೆ ಕಳುಹಿದನು. **ಶ್ರೀರಂಗಂ**

ಎಂಬಲ್ಲಿ ಯುದ್ಧವಾಗಿ ಚಂದಾಸಾಹೇಬನು ಸೋತು, ತಂಜಾವರದ ಅರಸನ ಆಶ್ರಯಕ್ಕೆ ಹೋದನು ಆದರೆ ಮುಂದೆ ಆ ಅರಸನೇ ಅವನನ್ನು ಕೊಲ್ಲಿಸಿದನು. ಅತ್ತ ಇಂಗ್ಲಿಷರಿಗೂ ಫ್ರೇಂಚರಿಗೂ **ಬಾಹೂರೆ** ಎಂಬಲ್ಲಿ ಯುದ್ಧವಾಗಿ ಫ್ರೇಂಚರು ಸೋತರು. ಮುಹಮ್ಮದಲ್ಲಿಯು ನವಾಬನಾದನು. ಕ್ರಿ. ಶ. ೧೭೫೨

ಅರ್ಕಾಟದ ಯುದ್ಧದಿಂದ ಫ್ರೇಂಚರ ಬೊಕ್ಕಸವು ಬರಿದಾಯಿತು. ಆಗ ಡೂಪ್ಲೆಯ ಅಪೇಕ್ಷೆಯಂತೆ ಫ್ರೇಂಚ ಸರಕಾರವು ಅವನಿಗೆ ನೆರವಾಗಲಿಲ್ಲ ಡೂಪ್ಲೆಯು ಒಪ್ಪಿಗೆಯಿಲ್ಲದೆ ಯುದ್ಧವನ್ನು ಆರಂಭಿಸಿದನೆಂಬ ತಪ್ಪು ಹೊರಿಸಿ, ಅವರು ಅವನನ್ನು ಫ್ರಾನ್ಸಕ್ಕೆ ಕರೆಯಿಸಿಕೊಂಡರು. ಡೂಪ್ಲೆಯ ತರುವಾಯ **ಗೋಡೆಹು** ಎಂಬವನನ್ನು ಗವ್ಹರ್ನರನಾಗಿ ಬಂದು ಇಂಗ್ಲಿಷರ ಕೂಡ ಪಾಂಡಿಚೇರಿಯಲ್ಲಿ ಒಪ್ಪಂದ ಮಾಡಿಕೊಂಡನು ಕ್ರಿ ಶ ೧೭೫೫

೪. **ಇಂಗ್ಲಿಷ – ಫ್ರೇಂಚರ ಕೊನೆಯ ಯುದ್ಧ** :— ಕ್ರಿ ಶ. **೧೭೫೮ – ೧೭೬೧.** ಕ್ರಿ. ಶ. **೧೭೫೬**ರಲ್ಲಿ ಯುರೋಪಖಂಡದಲ್ಲ ಇಂಗ್ಲಿಷ ಫ್ರೇಂಚರ ನಡುವೆ ಯುದ್ಧವು ಆರಂಭವಾಯಿತು. ಆಗ ಫ್ರೇಂಚರು **ಕಾವುಂಟ ಲಾಲಿ** ಎಂಬವನನ್ನು ದೊಡ್ಡ ಹಡಗುಪಡೆಯೊಂದಿಗೆ ಹಿಂದುಸ್ಥಾನಕ್ಕೆ ಕಳುಹಿದರು. ಅವನು ಈ ದೇಶಕ್ಕೆ ಬಂದಕೂಡಲೆ ಪೋರ್ಟನೆಂಟ ಡೆವ್ಹಿಡವನ್ನು ವಶಮಾಡಿಕೊಂಡನು. ಬಳಿಕ ಉತ್ತರ ಸರಕಾರದಲ್ಲಿದ್ದ ಬುಸಿಯನ್ನು ತನ್ನ ನೆರವಿಗೆ ಕರೆದುಕೊಂಡು ಮದ್ರಾಸದ ಕಡೆಗೆ ಸಾಗಿದನು ಅಷ್ಟರಲ್ಲಿ ಇಂಗ್ಲಿಷ ಸೇನಾಪತಿಯಾದ ಸರ್ **ಆಯರ್ ಕೂಟ** ಎಂಬವನು ಅವನನ್ನು ತಡೆದನು. **ವಾಂಡಿವಾಶ**ದಲ್ಲಾದ ಯುದ್ಧದಲ್ಲಿ ಲಾಲಿಯು ಸೋತು ಪಾಂಡಿಚೇರಿಗೆಬಂದನು. ಆದರೆ ಕೂಟನು ಬೆನ್ನಟ್ಟಿ ಬಂದು ಅದನ್ನೂ ವಶಮಾಡಿಕೊಂಡನು ಕ್ರಿ. ಶ. **೧೭೬೧.** ಬಳಿಕ ಲಾಲಿಯು ಸೆರೆಸಿಕ್ಕು ಇಂಗ್ಲಂಡಕ್ಕೆ ಕಳುಹಲ್ಪಟ್ಟನು. ಈ ಮೊದಲೇ, ಇಂಗ್ಲಿಷರ ಕಡೆಯ ಕರ್ನಲ **ಫೋರ್ಡನು** ಉತ್ತರ ಸರಕಾರವನ್ನೂ ಕ್ಲೈವನು ಚಂದ್ರನಗರವನ್ನೂ ವಶಮಾಡಿಕೊಂಡರು. ಪಾಂಡಿಚೇರಿಯು ಕೈಬಿಟ್ಟದ್ದರಿಂದ ಹಿಂದುಸ್ಥಾನಲ್ಲಿಯ ಫ್ರೇಂಚರ ವರ್ಚಸ್ಸು ನಷ್ಟವಾಯಿತು. ಕ್ರಿ ಶ ೧೭೬೩ರಲ್ಲಿ **ಪಾರೀಸ**ದಲ್ಲಿ ಒಪ್ಪಂದವಾಗಿ, ಯುರೋಪದಲ್ಲಿ ಇಂಗ್ಲಿಷ-ಫ್ರೇಂಚರ ನಡುವೆ ನಡೆದ ಯುದ್ಧವು ಶಾಂತವಾಯಿತು. ಆಗ ಪಾಂಡಿಚೇರಿ

ಚಂದ್ರನಗರಗಳು ಮರಳಿ ಫ್ರೇಂಚರಿಗೆ ದೊರೆತವು. ಅಂದಿನಿಂದ ಅವರು ರಾಜ್ಯ ದಾಶೆಯನ್ನು ಬಿಟ್ಟು ಬರಿಯ ವ್ಯಾಪಾರವನ್ನು ಮಾಡಹತ್ತಿದರು.

**೫. ಇಂಗ್ಲಿಷ ಮತ್ತು ಫ್ರೇಂಚರ ಜಯಾಪಜಯಗಳ ಕಾರಣಗಳು:–** **ಇಂಗ್ಲಿಷ ಕಂಪನಿ**ಯವರು ವ್ಯಾಪಾರವನ್ನು ಒಳ್ಳೆಯ ಜಾಣತನದಿಂದ ಸಾಗಿಸಿದ್ದರು. ಇವರ ರಾಜಕಾರಣದಲ್ಲಿಯೂ ವ್ಯಾಪಾರದ ಬೆಳವಣಿಗೆಯು ಮುಖ್ಯ ಉದ್ದೇಶವಾಗಿತ್ತು. ಆದದರಿಂದ ಇವರು ಬಹುಶಃ ಹಣದ ತೊಂದರೆಯಲ್ಲಿ ಸಿಲುಕಲಿಲ್ಲ. ಇಂಗ್ಲಂಡದ ಸರಕಾರವು ತಮ್ಮ ಕಂಪನಿಯವರಿಗೆ ಎಲ್ಲ ರೀತಿಯಿಂದ ನೆರವಾಗಹತ್ತಿತು. **ರೊ, ಹ್ಯಾಮಿಲ್ಟನ್, ಹಾಕಿನ್ಸ, ಕ್ಲೈವ, ಲಾರೆನ್ಸ, ಕೂಟ** ಮೊದಲಾದ ಕೆಲಸಗಾರರು ತಮ್ಮ ದೇಶದ ಕಂಪನಿಯ ಏಳ್ಗೆಗಾಗಿ ಮನಮುಟ್ಟಿ ದುಡಿದರು. ಇಂಗ್ಲಂಡದ ಹಡಗುಪಡೆಯ ಸಾಮರ್ಥ್ಯವು ಹೆಚ್ಚಿನದಿದ್ದದರಿಂದ ಹಿಂದುಸ್ಥಾನದಲ್ಲಿ ಫ್ರೇಂಚರನ್ನು ಸೋಲಿಸಲು ಹೆಚ್ಚು ಅನುಕೂಲವಾಯಿತು.

**ಫ್ರೇಂಚ ಕಂಪನಿ**ಯವರು ವ್ಯಾಪಾರಕ್ಕಿಂತ ರಾಜಕಾರಣದಲ್ಲಿ ಹೆಚ್ಚು ಮನಸುಹಾಕಿದರು ಇದರಿಂದ ಹಣದ ಕೊರತೆಯುಂಟಾಗಿ ಅವರು ಫ್ರೇಂಚ ಸರಕಾರವನ್ನು ಹೆಚ್ಚಾಗಿ ಅವಲಂಬಿಸಬೇಕಾಯಿತು. ಆ ಸರಕಾರವು ಯುರೋಪದ ರಾಜಕಾರಣದಲ್ಲಿ ತೊಡಗಿದ್ದರಿಂದ ಅದು ತಮ್ಮ ಕಂಪನಿಯವರಿಗೆ ಹೊತ್ತಿಗೆ ನೆರವಾಗಲಿಲ್ಲ. ಕಂಪನಿಯ ವ್ಯವಸ್ಥಾಪಕರು ಯೋಗ್ಯರಾದವರನ್ನು ಕೆಲಸಗಾರರನ್ನಾಗಿ ಕಳುಹಿಸಲಿಲ್ಲ ದುರಾಗ್ರಹ, ಅಸೂಯೆ, ಇವುಗಳ ಮೂಲಕ ಕೆಲಸಗಾರರಲ್ಲಿ ಒಡಕು ಹುಟ್ಟಿದ್ದರಿಂದ ಶತ್ರುಗಳಿಗೆ ಸಡಿಲು ಸಿಕ್ಕಿತು. ಲಾಲಿಯು ಉತ್ತರ ಸರಕಾರದಲ್ಲಿದ್ದ ಬುಸಿಯನ್ನು ಕರೆಯಿಸಿಕೊಂಡದ್ದರಿಂದ ಆ ಪ್ರಾಂತವು ಕೈಬಿಟ್ಟಿತು. ಫ್ರೇಂಚರ ಹಡಗುಪಡೆಯು ಕಡಿಮೆಯದಿದ್ದದರಿಂದ ಇಂಗ್ಲಿಷರ ಮುಂದೆ ತಡೆದು ನಿಲ್ಲುವದು ಅವರಿಂದಾಗಲಿಲ್ಲ

---

## ೧೬ನೆಯ ಪಾಠ

### ಬಂಗಾಲ ಪ್ರಾಂತದ ಅಧಿಕಾರವು ಇಂಗ್ಲಿಷರ ಕೈಸೇರಿದ್ದು.

**೧. ಬಂಗಾಲ ಪ್ರಾಂತದ ಪರಿಸ್ಥಿತಿ :—** ಅಲಿವರ್ದೀಖಾನನು ಮೊದಲು ಬಂಗಾಲದ ಮೊಗಲ ಸುಭೇದಾರನಾಗಿದ್ದನು. ಮುಂದೆ ಮೊಗಲರು

ದುರ್ಬಲರಾಗಲು ಸ್ವತಂತ್ರನಾಗಿ ಆ ಪ್ರಾಂತದ ನವಾಬನೆನಿಸಿದನು. ಇವನು ಜಾಣತನದಿಂದಲೂ ದಕ್ಷತೆಯಿಂದಲೂ ಕಾರಭಾರವನ್ನು ಸಾಗಿಸಿದ್ದನು. ಡಚ್ಚ, ಇಂಗ್ಲಿಷ, ಫ್ರೇಂಚ ಈ ಯುರೋಪದ ವ್ಯಾಪಾರಸ್ಥರ ಚಿನ್ಸುರಾ, ಕಲಕತ್ತೆ, ಚಂದ್ರನಗರ ಮುಂತಾದ ಸ್ಥಾನಗಳು ಇವನ ಸೀಮೆಯೊಳಗಿದ್ದವು ಈ ಪರಕೀಯರನ್ನು ಹೆಚ್ಚಿಗೆ ಬಲಿಯಬಿಟ್ಟರೆ ಇದರಿಂದ ರಾಜ್ಯಕ್ಕೆ ಅಪಾಯವಾಗಬಹುದೆಂದು ತಿಳಿದು, ನವಾಬನು ಇವರ ಸುಳಿದಾಟವನ್ನು ನಿರೀಕ್ಷಿಸುತ್ತಿದ್ದನು. ತನ್ನ ಒಪ್ಪಣೆಯ ಹೊರತು ಯಾರಿಗೂ ಕೋಟೆಕೊತ್ತಳಗಳನ್ನು ಕಟ್ಟಗೊಡುತ್ತಿರಲಿಲ್ಲ. ಇಂಗ್ಲಿಷರ ಮೇಲಂತೂ ಇವನ ಲಕ್ಷವು ವಿಶೇಷವಾಗಿತ್ತು. ಕ್ರಿ. ಶ. ೧೭೧೫ರಲ್ಲಿ ದಿಲ್ಲಿಯ ಬಾದಶಾಹನಿಂದ ಇಂಗ್ಲಿಷ ಕಂಪನಿಯ ಸರಕಿನ ಮೇಲಿನ ಸುಂಕಕ್ಕೆ ಬಿಡುವು ದೊರೆತಿತ್ತು. ಆದರೆ ಬರಬರುತ್ತ ಕಂಪನಿಯ ಕೆಲಸಗಾರರು ಸ್ವಂತದ ಸರಕನ್ನು ಸಹ ಸುಂಕವಿಲ್ಲದೆ ತರಹತ್ತಿದರು. ನವಾಬನು ಕೆಲಸಗಾರರು ಈ ದಬ್ಬಾಟವನ್ನು ತಡೆಯಲು ಪ್ರಯತ್ನಿಸುತ್ತಿದ್ದನು ಆದರೆ ಇವನು ಮರಾಠರ ದಾಳಿಗಳಿಂದ ಹಣ್ಣಾದದ್ದರಿಂದ ಈ ಜನರನ್ನು ದಾರಿಗೆ ಹಚ್ಚುವ ಕೆಲಸವು ಇವನಿಗೆ ಸಾಧಿಸಲಿಲ್ಲ. ಕ್ರಿ. ಶ. ೧೭೫೬ರಲ್ಲಿ ಅಲಿವರ್ದೀಖಾನನು ಮರಣಹೊಂದಿದನು. ಬಳಿಕ ಇವನ ಮೊಮ್ಮಗನಾದ **ಸಿರಾಜಉದ್ದೌಲನು** ನವಾಬನಾದನು

**೨. ಸಿರಾಜಉದ್ದೌಲನು ಕಲಕತ್ತೆಯನ್ನು ಕಸಿದದ್ದು:—** ಸಿರಾಜಉದ್ದೌಲನು ಮೊದಲೇ ಇಂಗ್ಲಿಷರನ್ನು ನೋಡುತ್ತಿರಲಿಲ್ಲ. ಇವನಿಗೆ ಬೇಡಾದ **ಕಿಸನದಾಸ** ಎಂಬೊಬ್ಬ ಸಾವಕಾರನು ತನ್ನ ಬದುಕನ್ನೆಲ್ಲ ಕಟ್ಟಿಕೊಂಡು ಕಲಕತ್ತೆಗೆ ಬಂದು ಇಂಗ್ಲಿಷರ ಆಶ್ರಯದಲ್ಲಿರಹತ್ತಿದನು. ಮತ್ತು ಕಲಕತ್ತೆಯ ಗವ್ಹರ್ನರನಾದ **ಡ್ರೇಕನು** ನವಾಬನ ಒಪ್ಪಿಗೆಯನ್ನು ಪಡೆದುಕೊಳ್ಳದೆ ಕೋಟೆಯನ್ನು ಭದ್ರಪಡಿಸಹತ್ತಿದನು. ಆದದರಿಂದ ನವಾಬನು ಡ್ರೇಕನಿಗೆ ಕಿಸನದಾಸನನ್ನು ನಮ್ಮ ವಶಕ್ಕೆ ಕೊಡಬೇಕು, ಕೋಟೆಯ ಹೊಸದಾಗಿ ಕಟ್ಟಿಸಿದ ಭಾಗವನ್ನು ಕೆಡವಿಸಬೇಕು ಎಂದು ತಿಳುಹಿಸಿದನು. ಆಗ ಡ್ರೇಕನು ಕಿಸನದಾಸನ ವಿಷಯವಾಗಿ ಏನೂ ಬರೆಯದೆ, ಫ್ರೇಂಚರು ಏರಿಬರುವ ಸಂಭವವಿದ್ದದರಿಂದ ಕೋಟೆಯ ಹಾಳಾದ ಭಾಗವನ್ನಷ್ಟೇ ಸರಿಪಡಿಸಿದ್ದೇವೆ; ಹೊಸ ಕೆಲಸವನ್ನೇನು ಮಾಡಿಸಲಿಲ್ಲ. ಎಂದು ಉತ್ತರ ಬರೆದನು ಇದರಿಂದ

ನವಾಬನು ಸಿಟ್ಟಾಗಿ ಇಂಗ್ಲಿಷರ ಸ್ಥಾನಗಳನ್ನೆಲ್ಲ ಕಸಿದುಕೊಳಬೇಕೆಂದು ಅಪ್ಪಣೆ ಕೊಟ್ಟನು. ಆಗ ಅವನ ಅಧಿಕಾರಿಗಳು **ಕಾಸಿಮುಬಝಾರ**ವನ್ನು ಕೈಸೇರಿಸಿಕೊಂಡು, ಅಲ್ಲಿದ್ದ ಇಂಗ್ಲಿಷರನ್ನು ಸೆರೆಹಿಡಿದು, ಕಲಕತ್ತೆಯ ಕಡೆಗೆ ಸಾಗಿಸಿದರು ಡ್ರೇಕನು ನವಾಬನ ಸೈನ್ಯವನ್ನು ಸೋಲಿಸಿಬಿಡಬಹುದೆಂದು ತಿಳಿದಿದ್ದನು. ಆದರೆ ಸಿರಾಜಉದ್ದೌಲನು ದೊಡ್ಡ ಸೈನ್ಯದೊಂದಿಗೆ ಒತ್ತರ-ದಿಂದ ಕಲಕತ್ತೆಗೆ ಬರಲು ಡ್ರೇಕನು ಹೆದರಿದನು. ಕೂಡಲೆ ಅವನೂ ಬಹುಜನ ಇಂಗ್ಲಿಷರೂ ಕೋಟೆಯಿಂದ ಪಾರಾಗಿ ಹಡಗಗಳನ್ನೇರಿ ಮುಖದ ಹತ್ತಿರ **ಫೂಲ್ತಾ** ಎಂಬಲ್ಲಿ ಹೋಗಿ ನಿಂತುಕೊಂಡರು. ಹಿಂದೆ ಕೋಟೆಯಲ್ಲಿ ಉಳಿದ ೧೭೦ ಜನರು ನವಾಬನ ಸೈನ್ಯಕ್ಕೆ ಇದಿರಾಗಿ ಹೋಗಿ ಸೋತರು ಕೋಟೆಯು ನವಾಬನ ಕೈಸೇರಿತು † ೧೪೬ ಜನರು ಸೆರೆಹಿಡಿಯಲ್ಪಟ್ಟರು.

**೩. ಇಂಗ್ಲಿಷರು ಮರಳಿ ಕಲಕತ್ತೆಯನ್ನು ತೆಗೆದುಕೊಂಡಿದ್ದು :—** ಕಲಕತ್ತೆಯು ಕೈಬಿಟ್ಟ ಸುದ್ದಿಯು ಮದ್ರಾಸಕ್ಕೆ ಮುಟ್ಟಿತು. ಅಲ್ಲಿ ಎರಡು ತಿಂಗಳ ವರೆಗೆ ವಿಚಾರವಾಗಿ ಬಂಗಾಲಕ್ಕೆ ಸೈನ್ಯವನ್ನು ಕಳುಹಿಸಬೇಕೆಂದು ಗೊತ್ತಾಯಿತು. ಆ ಮೇರೆಗೆ **ವಾಟ್ಸನನೂ ಕ್ಲೈವನೂ** ಮದ್ರಾಸದಿಂದ ಹೊರಟು ಕ್ರಿ. ಶ. ೧೭೫೬ರ ಕೊನೆಗೆ ಫೂಲ್ತಾಕ್ಕೆ ಬಂದರು ಆಗ ದಿಲ್ಲಿಯ ಬಾದಷಹನ ಮಗನು ಬಂಗಾಲದ ಮೇಲೆ ದಂಡೆತ್ತಿ ಬರತಕ್ಕವನಿರುವನೆಂದು ತಿಳಿದದ್ದರಿಂದ ಸಿರಾಜಉದ್ದೌಲನ ಲಕ್ಷವು ಕಲಕತ್ತೆಯ ಕಡೆಗೆ ಇರಲಿಲ್ಲ. ಕ್ಲೈವನು ಹೊತ್ತು ಸಾಧಿಸಿ ಕಲಕತ್ತೆಯನ್ನು ವಶಮಾಡಿಕೊಂಡನು ಈ

† "ನವಾಬನ ಕಡೆಯವರು ಈ ೧೪೬ ಜನರನ್ನು ೧೮ ಅಡಿ ಚೌರಸಾಕಾರದ ಕತ್ತಲೆಯ ಕೋಣೆ (ಬ್ಲಾಕ್ ಹೋಲ್) ಯಲ್ಲಿ ಹಾಕಿದರು; ಅಲ್ಲಿ ಗಾಳಿಯಾಡಲು ದಾರಿಯಿಲ್ಲದ್ದರಿಂದ ಅವರಲ್ಲಿಯ ೧೨೩ ಜನರು ಮರುದಿನ ಬೆಳಗಾಗುವಷ್ಟರಲ್ಲಿ ಸತ್ತುಹೋದರು." ಎಂದು ಹೇಳುವ ರೂಢಿಯುಂಟು ಆದರೆ ಈ ಬ್ಲ್ಯಾಕ್ ಹೋಲದ ಸಂಗತಿಯು ನಿಜವಲ್ಲೆಂದು ಹಲವು ಇತಿಹಾಸಜ್ಞರ ಮತವಿದೆ.

ನೋಜರ ಬಸ ಎಂಬವರು 'ರಾಯಿಜ್ ಆಫ್ ಕ್ರಿಶ್ಚಿನ್ ಪಾವರ್ ಇನ್ ಇಂಡಿಯಾ' ಎಂಬ ಪುಸ್ತಕದಲ್ಲಿ "ಈ ಕೋಣೆಯಲ್ಲಿ ಒಂಬತ್ತೇ ಜನರನ್ನು ಇಟ್ಟಿದ್ದರು. ಅವರಲ್ಲಿ ಒಬ್ಬನು ಬೆನೇಯುವನೂ ಇಬ್ಬರು ಗಾಯಹೊಂದಿದವರೂ ಇದ್ದರು. ಅವರೇ ಮೂವರು ಸತ್ತರು ಉಳಿದ ಆರೂ ಜನರು ಬದುಕಿದ್ದರು" ಎಂದು ಬರೆದಿರುವರು

(ಓತೂರಕರರ ಹಿಂ. ಇ. ಪುಟ ೩೨೧)

ಸುದ್ದಿಯನ್ನು ಕೇಳಿ ಸಿರಾಜಉದ್ದೌಲನು ಇಂಗ್ಲಿಷರನ್ನು ತಡೆಯಲು ಹೊರಟು ಡಮ್‌ಡಮ್ ಎಂಬಲ್ಲಿ ಸೋತು ಅವರೊಡನೆ ಒಪ್ಪಂದ ಮಾಡಿಕೊಂಡನು ಇದರಿಂದ ಅವನು ಇಂಗ್ಲಿಷರ ಸ್ಥಾನಗಳನ್ನು ಬಿಟ್ಟುಕೊಟ್ಟು ಕಲಕತ್ತೆಯಲಾದ ಹಾನಿಯನ್ನು ತುಂಬಿಕೊಡಬೇಕಾಯಿತು.

**೪ ಸಿರಾಜ ಉದ್ದೌಲನ ವಿರುದ್ಧವಾಗಿ ಕ್ಲೈವನು ಮಾಡಿದ ಒಳಸಂಚು** :— ಇಷ್ಟರಲ್ಲಿ ಇಂಗ್ಲಿಷ - ಫ್ರೇಂಚರ ಕೊನೆಯ ಯುದ್ಧವು ಪ್ರಾರಂಭವಾಯಿತು. ಆಗ ಕ್ಲೈವನು ಚಂದ್ರ ನಗರವನ್ನು ಹಿಡಿದುಕೊಂಡು ಫ್ರೇಂಚರ ಉಳಿದ ಸ್ಥಳಗಳನ್ನು ವಶಮಾಡಿಕೊಳ್ಳಲು ನೆರವಾಗಬೇಕೆಂದು ಸಿರಾಜಉದ್ದೌಲನನ್ನು ಕೇಳಿದನು. ಆಗ ಸಿರಾಜಉದ್ದೌಲನು ಇಂಗ್ಲಿಷರು ಹೀಗೆ ಬಲಿಷ್ಠರಾಗುವವನ್ನು ಕಂಡು ಅವರೊಡನೆಯೆ ಯುದ್ಧಮಾಡಬೇಕೆಂದು ಗೊತ್ತುಮಾಡಿ ಫ್ರೇಂಚರನ್ನು ನೆರವಿಗೆ ಕರೆದನು

ಅಲಿವರ್ದಿಖಾನನ ಅಳಿಯನಾದ **ಮೀರಜಾಫರ**ನೆಂಬವನು ಸಿರಾಜ ಉದ್ದೌಲನ ಸೇನಾಪತಿಯಾಗಿದ್ದನು. ಅವನಿಗೂ ಸಿರಾಜಉದ್ದೌಲನಿಗೂ ಸೆಟ್ಟಿಗಿದ್ದಿಲ್ಲ. ಇದನ್ನು ತಿಳಿದು ಕ್ಲೈವನು ಮೀರಜಾಫರನಿಗೆ ಪಟ್ಟದಾಶೆಯನ್ನು ಹಚ್ಚಿ ಸಿರಾಜಉದ್ದೌಲನನ್ನು ತಳ್ಳುವ ಒಳಸಂಚು ಮಾಡಿದನು. ಅದರಲ್ಲಿ ಕ್ಲೈವನು ಸಿರಾಜಉದ್ದೌಲನ ಮೇಲೆ ಸಾಗಿ ಬರಬೇಕು, ಆಯತ ಹೊತ್ತಿನಲ್ಲಿ ಮೀರಜಾಫರನು ಸೈನ್ಯದೊಂದಿಗೆ ಕ್ಲೈವನನ್ನು ಕೂಡಿಕೊಳ್ಳಬೇಕು " ಎಂದು ಗೊತ್ತಾಯಿತು. ಈ ಪ್ರಸಂಗದಲ್ಲಿ ಒಳಸಂಚಿಗೆ ನೆರವಾದದ್ದಕ್ಕಾಗಿ ಉಮೀಚಂದನೆಂಬ ಮುರ್ಶಿದಾಬಾದದ ಸಾಹುಕಾರನೊಬ್ಬನು ೩೦ ಲಕ್ಷ ರೂಪಾಯಿಗಳನ್ನು ಬೇಡಹತ್ತಿದನು. ಆಗ ಕ್ಲೈವನು ತನಗೂ ಮೀರಜಾಫರ-ನಿಗೂ ಆದ ಕರಾರ ಪತ್ರದ ನಕಲನ್ನು ಒಂದು ಕೆಂಪು ಕಾಗದದ ಮೇಲೆ ಮಾಡಿಸಿ ಅದರಲ್ಲಿ ಮಾತ್ರ ' ಉಮಾಚಂದನಿಗೆ ೩೦ ಲಕ್ಷ ರೂಪಾಯಿಗಳನ್ನು ಕೊಡತಕ್ಕದ್ದು ' ಎಂಬ ಸಂಗತಿಯನ್ನು ಕಾಣಿಸಿದನು. ಆ ಸುಳ್ಳು ಕಾಗದಕ್ಕೆ ಗವ್ಹರ್ನರನಾದ ವಾಟ್ಸನನು ಸಹಿಹಾಕಲು ಒಪ್ಪಲಿಲ್ಲ ಆದದರಿಂದ ಕ್ಲೈವನು ಲುಶಿಂಗಟನ್ ಎಂಬವನಿಂದ ವಾಟ್ಸನನ ಸಹಿಮಾಡಿಸಿ ಆ ಕಾಗದವನ್ನು ಉಮೀಚಂದನಿಗೆ ತೋರಿಸಿ ಅವನನ್ನು ಸುಮ್ಮನಿರಿಸಿದನು.

**೫. ಪ್ಲಾಸಿಯ ಯುದ್ಧ:**— ಕ್ರಿ ಶ ೧೭೫೭ ಬಳಿಕ ಕ್ಲೈವನು ಸಿರಾಜಉದ್ದೌಲನ ಮೇಲೆ ಸಾಗಿದನು. ಪ್ಲಾಸಿ ಎಂಬಲ್ಲಿ ಎರಡೂ ಸೈನ್ಯಗಳು ಇದಿರಾದವು. ಮೀರಜಾಫರನು ತನ್ನ ಸೈನ್ಯದೊಂದಿಗೆ ಬದಿಗಾದನ. ಆದರೆ ಅವನು ಕ್ಲೈವನನ್ನು ಕೂಡಿಕೊಳ್ಳಲಿಲ್ಲ. ಮುಂದೆ ಯುದ್ಧವು ನಡೆದು ಸಿರಾಜ ಉದ್ದೌಲನ ನಂಬುಗೆಯವನಾದ ಮೀರಮದನನು ಸಾಯಲು ಸಿರಾಜ



ಲಾರ್ಡ ಕ್ಲೈವ

ಉದ್ದೌಲನು ಎದೆಗುಂದಿ ಓಡಿಹೋದನು ಕ್ಲೈವನಿಗೆ ಜಯದೊರೆಯಿತು. ಕೂಡಲೆ ಅವನು, ಮೀರಜಾಫರನು ತನ್ನನ್ನು ಕೂಡದೆ ಇದ್ದದರ ಸಿಟ್ಟನ್ನು ತೋರಗೊಡದೆ ಅವನಿಗೆ ತಲೆಬಾಗಿ ಸಲಾಮುಮಾಡಿ, ಅವನನ್ನು ಮುರಶಿದಾಬಾದಕ್ಕೆ ಕರೆದೊಯ್ದು ನವಾಬನನ್ನು ಮಾಡಿದನು ಸಿರಾಜಉದ್ದೌಲನು ಕೈಗೆ

ಸಿಗಲು, ಮೀರಜಾಫರನ ಮಗ ಮೀರನನು ಅವನನ್ನು ಕ್ರೂರತನದಿಂದ ಕೊಲ್ಲಿಸಿದನು.

ಆ ಮೇಲೆ, ಮೀರಜಾಫರನು ಮೊದಲು ಒಪ್ಪಿದಂತೆ, ಕಂಪನಿಗೂ ಅದರ ಕೆಲಸಗಾರರಿಗೂ ಕೂಡಿ ೨ ಕೋಟಿ ೨೦ ಲಕ್ಷ ರೂಪಾಯಿಗಳನ್ನು ಕೊಟ್ಟನು. ಅವುಗಳಲ್ಲಿಯ ೨೩ ಲಕ್ಷರೂಪಾಯಿಗಳು ಕ್ಲೈವನ ಪಾಲಿಗೆ ಬಂದವು. ನಡುವೆ ಓಡಾಡಿದ ಉಮಿಚಂದನಿಗೆ ಮಾತ್ರ ಏನೂ ಸಿಗಲಿಲ್ಲ! ಅವನು ತನ್ನ ಹಣವನ್ನು ಬೇಡಲು, ಕ್ಲೈವನು- ಕರಾರಪತ್ರದಲ್ಲಿ ನಿಮಗೆ ಹಣ ಕೊಡಬೇಕೆಂದು ಬರೆದಿಲ್ಲ; ಕೆಂಪು ಕಾಗದವು ಸುಳ್ಳು ಇದೆ. ಆದದರಿಂದ ಹಣ ಸಿಗಲಾರದು ಎಂದು ಹೇಳಿದನು.

೬. **ಪ್ಲಾಸಿಯ ಯುದ್ಧದ ಪರಿಣಾಮ**:-- ಇಂಗ್ಲಿಷರು ರಾಜ್ಯಸ್ಥಾಪನೆಗಾಗಿ ಕೈಕೊಂಡ ಯುದ್ಧಗಳಲ್ಲಿ ಪ್ಲಾಸಿಯ ಯುದ್ಧವೇ ಮೊದಲನೆಯದು! ಪ್ಲಾಸಿಯ ಜಯದ ನಂತರ ಬಂಗಾಲದಲ್ಲಿ ಇಂಗ್ಲಿಷರ ಅಧಿಕಾರವು ಸ್ಥಿರವಾಯಿತು; ಇದೇ ಜಯದ ಬಲದಿಂದ ಅವರು ವಾಂಡಿವಾಶದಲ್ಲಿ ಫ್ರೇಂಚರನ್ನು ಪೂರ್ಣವಾಗಿ ಸೋಲಿಸಿ ಅರ್ಕಾಟಪ್ರಾಂತವನ್ನು ಕೈಸೇರಿಸಿಕೊಂಡರು. ಮರಾಠರೂ ಮೊಗಲರೂ ಅಬದಾಲಿಯ ದಾಳಿಯನ್ನು ತಡೆಯುತ್ತಿರುವಾಗ ಇತ್ತ ಬಂಗಾಲ ಅರ್ಕಾಟ ಪ್ರಾಂತಗಳಲ್ಲಿ ನೆಲೆಯೂರಿದ ಇಂಗ್ಲಿಷರು ಪ್ಲಾಸಿಯ ಗೆಲವಿನಿಂದ ಹುರುಪುಗೊಂಡು ತಮ್ಮ ಅಧಿಕಾರವನ್ನು ಬೆಳೆಯಿಸಹತ್ತಿದರು.

೭. **ಮೀರಜಾಫರನ ಆಳಿಕೆಯೂ ಇಂಗ್ಲಿಷರ ಏಳಿಗೆಯೂ**:— ಮೀರಜಾಫರನು ನವಾಬನಾದದ್ದು ದಿಲ್ಲಿಯ ಬಾದಷಾಹನಿಗೆ ಸೇರಲಿಲ್ಲ. ಅವನು ತನ್ನ ಮಗನಾದ ಅಲ್ಲೀಗೋಹರನನ್ನು ಅಯೋಧ್ಯೆಯ ಸುಜಾಉದ್ದೌಲನೊಡನೆ ಬಂಗಾಲದ ಮೇಲೆ ಕಳುಹಿದನು. ಆಗ ಕ್ಲೈವನು ಯುದ್ಧದ ಗೋಜಿಗೆ ಹೋಗದೆ ಮೀರಜಾಫರನಿಂದ ಬಾದಷಾಹನಿಗೆ ಕಾಣಿಕೆಯನ್ನು ಕೊಡಿಸಿದನು. ಆದದರಿಂದ ಬಾದಷಾಹನು ಸಮಾಧಾನ ಹೊಂದಿ, ಮೀರಜಾಫರನನ್ನು ನವಾಬನೆಂದು ಒಪ್ಪಿದ್ದಲ್ಲದೆ, ಕ್ಲೈವನಿಗೆ **ಅಮೀರ** ಎಂಬ ಪದವಿಯನ್ನು ೧೧ ಸಾವಿರದ ಮನಸಬದಾರಿಕೆಯನ್ನೂ ಕೊಟ್ಟನು.

ಆದರೆ ಮೀರಜಾಫರನ ಆಳಿಕೆಯು ಸುಸೂತ್ರವಾಗಿ ಸಾಗಲಿಲ್ಲ. ಅವನು ಇಂಗ್ಲಿಷ ಕಂಪನಿಗೆ ಹಣ ಕೊಡುವದರಲ್ಲಿಯೆ ಹಣ್ಣಾದನು ಹೊತ್ತು ಹೊತ್ತಿಗೆ ಸಂಬಳ ಸಿಗದೆಯಿದ್ದವರಿಂದ ಅವನ ಕೈಕೆಳಗಿನ ಜನರು ಅಸಂತುಷ್ಟರಾದರು. ಆಗ ಅವನು ಇಂಗ್ಲಿಷರ ಸಂಬಂಧವನ್ನು ತಪ್ಪಿಸುವದಕ್ಕಾಗಿ **ಚಿನ್ಸುರೆ**ಯಲ್ಲಿದ್ದ ಡಚ್ಚರೊಡನೆ ಒಳಸಂಚು ನಡೆಸಿದನು. ತುಸು ದಿವಸಗಳಲ್ಲಿ ಡಚ್ಚರ ಹೊಸ ದಂಡು ಚಿನ್ಸುರೆಗೆ ಬಂದಿಳಿಯಿತು. ಇದನ್ನು ತಿಳಿದು ಕ್ಲೈವನು ಕರ್ನಲ ಫೋರ್ಡನನ್ನು ಕಳುಹಿ ಡಚ್ಚರನ್ನು ಸೋಲಿಸಿ ಅವರ ಹಡಗುಪಡೆಯನ್ನು ನಾಶಗೊಳಿಸಿದನು. ಅಂದಿನಿಂದ ಡಚ್ಚರ ವರ್ಚಸ್ಸು ಅಡಗಿ, ಅವರು ಹಿಂದು ಸ್ಥಾನದಲ್ಲಿ ಬರಿಯ ವ್ಯಾಪಾರವನ್ನು ಮಾಡಿಕೊಂಡು ಇರಹತ್ತಿದರು

ಬಳಿಕ ಕ್ರಿ ಶ. ೧೭೬೦ರಲ್ಲಿ ಕ್ಲೈವನು ಇಂಗ್ಲಂಡಕ್ಕೆ ಹೋಗಲು **ವಾನ್ಸಿಟಾರ್ಟನು** ಕಲಕತ್ತೆಯ ಗವ್ಹರ್ನರನಾದನು. ಆಗ ಷಾಹಆಲಮನೂ ಸುಜಾ ಉದ್ದೌಲನೂ ಮತ್ತೆ ಬಂಗಾಲದ ಮೇಲೆ ದಂಡೆತ್ತಿಬಂದರು. ಆದರೆ ಕರ್ನಲ್ **ಕೋಲಿ ಅಡ್, ಮೀರನ,** ಕ್ಯಾಪ್ಟನ್ **ನಾಕ್ಸ** ಇವರು ಅವರನ್ನು ಪೂರ್ಣವಾಗಿ ಸೋಲಿಸಿದರು ಆದರೆ ಈ ಯುದ್ಧವು ನಡೆದಿರುವಾಗ ಮೀರಜಾಫರನ ಒಬ್ಬನೇ ಮಗನಾಗಿದ್ದ ಮೀರನನು ಸಿಡಿಲುಬಡಿದು ಸತ್ತನು.

ಮೀರಜಾಫರನು ಹೆಸರಿಗೆ ನವಾಬನಾಗಿದ್ದು ಅಧಿಕಾರವೆಲ್ಲ ಕಂಪನಿಯ ಕೈಸೇರಿತ್ತು. ಮೀರನನು ಸತ್ತಬಳಿಕ ಮೀರಜಾಫರನ ಅಳಿಯನಾದ **ಮೀರ ಕಾಶೀಮನು** ತನ್ನನ್ನು ನವಾಬನನ್ನು ಮಾಡಬೇಕೆಂದು ಕಂಪನಿಯವರಿಗೆ ಹೇಳಿಕೊಂಡನು. ಆಗ ವಾನ್ಸಿಟಾರ್ಟನು ಮೀರಜಾಫರನನ್ನು ತಳ್ಳಿ ಮೀರ ಕಾಸೀಮನನ್ನು ಪಟ್ಟಕ್ಕೆ ಕುಳ್ಳಿರಿಸಿದನು. ಇದಕ್ಕಾಗಿ ಮೀರಕಾಸೀಮನು ಮೀರ ಜಾಫರನ ಕಾಲದ ಸಾಲವನ್ನು ತೀರಿಸಿದ್ದಲ್ಲದೆ **ಬರದ್ವಾನ, ಮಿದನಾಪೂರ, ಚಿತಗಾಂಗ** ಎಂಬ ಮೂರು ಪರಗಣೆಗಳನ್ನು ಕಂಪನಿಯವರಿಗೆ ಕೊಟ್ಟನು. ಈ ಬಗೆಯಿಂದ ಬಂಗಾಲದಲ್ಲಿ ನವಾಬನ ಅಧಿಕಾರವು ಕಡಿಮೆಯಾಗುತ್ತಲೂ ಇಂಗ್ಲಿಷರ ಅಧಿಕಾರವು ಹೆಚ್ಚುತ್ತಲೂ ನಡೆಯಿತು.

**೮. ಮಧ್ಯಕಾಲದ ಇತಿಹಾಸದ ಸಿಂಹಾವಲೋಕನ**:— ಕ್ರಿ. ಶ. ೧೨೦೬ರಲ್ಲಿ ಆರಂಭವಾದ ಮಧ್ಯಕಾಲದ ಇತಿಹಾಸವು ಕ್ರಿ. ಶ. ೧೭೬೧ಕ್ಕೆ

ಮುಗಿಯುವದು ಈ ಕಾಲದಲ್ಲಿ ಮೊದಲು ಉತ್ತರದಲ್ಲಿ **ಪಠಾಣರ** ಸಾಮ್ರಾಜ್ಯವು ನೆಲೆಗೊಂಡು ಬೆಳೆದು, ಅಳಿಯಿತು. ದಕ್ಷಿಣದಲ್ಲಿ **ವಿಜಯ ನಗರದ** ಸಾಮ್ರಾಜ್ಯವು ಮೂಡಿ, ಬೆಳಗಿ, ಮುಳುಗಿತು; ಪಠಾಣರ ತರುವಾಯ **ಮೊಗಲರು** ದಿಲ್ಲಿಯ ಒಡೆಯರಾಗಿ, ಅಬ್ಬರದಿಂದ ಬಾಳಿ, ಕಡೆಗೆ ಹೆಸರಿಗೆ ಬಾದಷಾಹರಾಗಿ ಉಳಿದರು. ಮತ್ತು ಮೊಗಲರು ಬಲಗುಂದಿದ ಕಾಲದಲ್ಲಿ **ಮರಾಠರು** ಪ್ರಬಲರಾಗಿ ಸಾಮ್ರಾಜ್ಯ ವೈಭವದಿಂದ ಮೆರೆಯುತ್ತಿರಲು, ಪಾನಿಪತದ ಯುದ್ಧದ ಆಘಾತದಿಂದ ಹಿಂಜರಿದು ನಿಂತರು.

ಪಠಾಣರೂ ಮೊಗಲರೂ ಚಂಗೀಜಖಾನ, ನಾದಿರಷಾಹ, ಅಬದಾಲಿ ಮುಂತಾದ ದಾಳಿಗಾರರೂ ವಾಯುವ್ಯ ಮಾರ್ಗವಾಗಿ ಈ ದೇಶವನ್ನು ಸೇರಿದರು. ಈ ದಾರಿಯಿಂದ ಪರಚಕ್ರಗಳು ಬರುವ ಕ್ರಮವು ಮಧ್ಯಕಾಲದ ಆರಂಭದಿಂದ ಕೊನೆಯವರೆಗೆ ನಡೆಯಿತು. ಅದರಿಂದ ದಿಲ್ಲಿಯ ಒಡೆಯರಾಗಿದ್ದವರಿಗೆ ಈ ದಾಳಿಗಾರರನ್ನು ತಡೆಯುವದೊಂದು ಮಹತ್ವದ ಕೆಲಸವಾಗಿತ್ತು.

ಕ್ರಿ. ಶ. ೧೫ನೆಯ ಶತಕದ ಕಡೆಯಿಂದ ಈಚೆಗೆ ಪೋರ್ತುಗೀಜ ಮೊದಲಾದ ಯುರೋಪಿಯನರು ಸಮುದ್ರ ಮಾರ್ಗವಾಗಿ ಬಂದು, ಈ ದೇಶದಲ್ಲಿ ನೆಲೆಗೊಂಡರು ಇವರು. ವಾಯುವ್ಯ ದಿಕ್ಕಿನಿಂದ ಬಂದ ಪಠಾಣ ಮುಂತಾದವರಂತೆ ಸುಲಿಗೆಯ ಇಲ್ಲವೆ ರಾಜ್ಯದ ಆಸೆಯಿಂದ ಬಂದವರಲ್ಲ; ವ್ಯಾಪಾರವು ಇವರ ಉದ್ದೇಶವಾಗಿತ್ತು ಆದರೆ ಮುಂದೆ ಎಲ್ಲರಿಗೂ ಹೆಚ್ಚುಕಡಿಮೆ ಪ್ರಮಾಣದಿಂದ ರಾಜ್ಯದಾಶೆ ಹುಟ್ಟಿತು. ಇವರಲ್ಲಿಯ ಪೋರ್ತುಗೀಜ, ಡಚ್ಚರ ಆಶೆಯು ವ್ಯರ್ಥವಾದಬಳಿಕ ಕ್ರಿ. ಶ. ೧೮ನೆಯ ಶತಕದ ಮಧ್ಯದ ಸುಮಾರಕ್ಕೆ ಫ್ರೇಂಚರೂ ಇಂಗ್ಲಿಷರೂ ರಾಜ್ಯ ವಿಸ್ತಾರಕ್ಕಾಗಿ ಸಾಹಸ ಮಾಡಹತ್ತಿದರು. ಕಡೆಗೆ ಇಂಗ್ಲಿಷರು ಫ್ರೇಂಚರನ್ನು ಮುರಿದು ಬಂಗಾಲ-ಅರ್ಕಾಟ ಪ್ರಾಂತಗಳಲ್ಲಿಯೂ ಕೆಲಮಟ್ಟಿಗೆ ಪಶ್ಚಿಮ ತೀರದಲ್ಲಿಯೂ ಸ್ಥಿರಗೊಂಡರು.

ಈ ಮಧ್ಯ ಕಾಲದಲ್ಲಿ ಹಿಂದುಸ್ತಾನದಲ್ಲಿಯ ಪ್ರಾಚೀನ ಕಾಲದಲ್ಲಿ ನೆಲೆಗೊಂಡಿದ್ದ ಸ್ವಾಸ್ಥ್ಯವು ಇಲ್ಲದಾಯಿತು; ದೇಶಕ್ಕೆ ಹಲವುಕುತ್ತುಗಳೊದಗಿದವು; ದಾಳಿಗಾರರು ಅಗಣಿತ ಸಂಪತ್ತನ್ನು ಸುಲಿದೊಯ್ದರು; ಸಾವಿರಗಟ್ಟಲೆ ಜನರು ಕ್ರೂರ ಕೊಲೆಗೆ ಗುರಿಯಾದರು; ಒಂದಿಲ್ಲೊಂದು ಕಡೆಯಲ್ಲಿ ಧರ್ಮದ ಬಲು

ಮೆಯು ನಡೆದೇ ಇದ್ದಿತು. ಮುಸಲ್ಮಾನರೂ ಪೋರ್ತುಗೀಜರೂ ತಮ್ಮ ಧರ್ಮ ವನ್ನೂ ರಾಜ್ಯವನ್ನೂ ಹಬ್ಬಿಸುವದಕ್ಕಾಗಿ ಮಿತಿಮೀರಿ ಪ್ರಯತ್ನ ಮಾಡಿದರು. ಹಿಂದುಗಳು ಧರ್ಮ ಮತ್ತು ಸ್ವಾತಂತ್ರ್ಯ ಇವುಗಳನ್ನು ಕಾಯ್ದು ಕೊಳ್ಳುವದ ಕ್ಕಾಗಿ ಹೆಣಗಿದರು. ಪೋರ್ತುಗೀಜರು ನೀಗದ ಕೆಲಸಕ್ಕೆ ಕೈಹಾಕಿ ನಿರಾಶ ರಾದರು. ಹಿಂದು-ಮುಸಲ್ಮಾನರಿಬ್ಬರೂ ಕಾದಿಕಾದಿ ದಣಿದರು. ಪಾನೀಪತದ ಯುದ್ಧವಾದ ಎರಡೇ ದಿವಸಕ್ಕೆ ಪಾಂಡಿಚೇರಿಯಲ್ಲಿ ವಿಜಯಿಗಳಾದ ಇಂಗ್ಲಿಷರು ರಾಜ್ಯಸ್ಥಾಪನೆಯ ಉದ್ಯೋಗವನ್ನು ಕೈಕೊಂಡರು.

ಮಧ್ಯ ಕಾಲದ ಇತಿಹಾಸವು ಇಲ್ಲಿಗೆ ಮುಗಿಯಿತು. ಇನ್ನು ಮುಂದೆ ಅರ್ವಾಚೀನ ಕಾಲದ ಇತಿಹಾಸವು ಆರಂಭವಾಗುವದು.

---

# ೨ನೆಯ ಭಾಗ

# ಅರ್ವಾಚೀನ ಕಾಲ

( ಕ್ರಿ. ಶ. ೧೭೬೧—೧೯೪೭ )

## ೧ನೆಯ ಪಾಠ

### ಬಂಗಾಲದಲ್ಲಿ ಇಂಗ್ಲಿಷರ ರಾಜ್ಯಸ್ಥಾಪನೆಯ ಆರಂಭ

**೧. ಮೀರಕಾಸೀಮನ ಆಳಿಕೆ:—** ಮೀರಕಾಸೀಮನು ನವಾಬನಾದ ಬಳಿಕ ತನ್ನ ರಾಜಧಾನಿಯನ್ನು ಮುರ್ಶಿದಾಬಾದದಿಂದ **ಮೋಂಗಿರಕ್ಕೆ** ಒಯ್ದು ಹಿಡಿತದಿಂದ ಕಾರಭಾರವನ್ನು ಸಾಗಿಸಿ, ಕಂಪನಿಯ ಸಾಲವನ್ನು ತೀರಿಸಿದನು. ಕಂಪನಿಯ ಆಳುಕಿನಲ್ಲಿರುವದು ಅವನಿಗೆ ಜೀಡೆನಿಸಿತು. ಅವನು ತನ್ನ ಸೈನ್ಯವನ್ನು ತಿದ್ದಿಕೊಂಡು ತೋಫು-ಬಂದೂಕಿಗಳ ಕಾರಖಾನೆಯನ್ನು ಸಹ ಹಾಕಿದನು.

ನವಾಬನ ರಾಜ್ಯದಲ್ಲಿ ಕಂಪನಿಯ ಸರಕಿಗೆ ಸುಂಕವಿದ್ದಿಲ್ಲ. ಆದರೆ ಅದರ ಕೆಲಸಗಾರರು ಸ್ವಂತದ ಸರಕನ್ನೂ ಸುಂಕವಿಲ್ಲದೆ ಮಾರಹತ್ತಿದರು. ಇದರಿಂದ ರಾಜ್ಯದ ಉತ್ಪನ್ನವು ಕಡಿಮೆಯಾಗಹತ್ತಿದ್ದಲ್ಲದೆ ಸುಂಕ ಕೊಡುತ್ತಿದ್ದ ದೇಶಿಯ ವ್ಯಾಪಾರಸ್ಥರ ವ್ಯಾಪಾರವು ಕಟ್ಟಾಗಹತ್ತಿತು. ಆದದರಿಂದ ನವಾಬನು ಕೆಲಸಗಾರರ ಈ ಅನ್ಯಾಯವನ್ನು ತಡೆಯಬೇಕೆಂದು ವಾನ್ಸಿಟಾರ್ಟನಿಗೆ ತಿಳಿಸಿದನು. ಆದರೆ ಅದರಿಂದ ಉಪಯೋಗವಾಗಲಿಲ್ಲ. ಆಗ ಮೀರಕಾಸೀಮನು ದೇಶೀಯ ವ್ಯಾಪಾರಸ್ಥರ ಸರಕಿಗೂ ಸುಂಕದ ಬಿಡುವು ಕೊಟ್ಟನು. ಇದು ಕಂಪನಿಯವರಿಗೆ ಸರಿಬರಲಿಲ್ಲ. ಅವರು ನವಾಬನಿಗೆ ಹೀಗೆ ಬಿಡುವು ಕೊಡುವ ಅಧಿಕಾರವಿಲ್ಲೆಂದು ನಿರ್ಣಯಿಸಿದರು.

**೨. ಬಕ್ಸಾರದ ಯುದ್ಧ:—** ಕ್ರಿ. ಶ. **೧೭೬೪.** ಬಳಿಕ **ಪಾಟಣಾ**ದಲ್ಲಿದ್ದ **ಎಲಿಸ** ಎಂಬ ಇಂಗ್ಲಿಷ ಅಧಿಕಾರಿಯು ನವಾಬನ ಕೆಲವು ಅಧಿಕಾರಿಗಳನ್ನು

ಸೆರೆಯಲ್ಲಿಟ್ಟನು. ಕೂಡಲೆ ನವಾಬನು ದಂಡನ್ನು ಕಳುಹಿ ಎಲಿಸನನ್ನೂ ಅವನ ನೂರಾರು ಜನರನ್ನೂ ಸೆರೆಹಿಡಿದನು. ಇಂಗ್ಲಿಷ ಕಂಪನಿಯ ಸೈನ್ಯವು ಪಾಟ ಣಾದ ಮೇಲೆ ಸಾಗಿಬಂದಿತು. **ಘೇರಿಯಾ** ಎಂಬಲ್ಲಿ ಯುದ್ಧವಾಗಿ ಮೀರ ಕಾಸೀಮನು ಸೋಲಲು, ಅವನು ರೇಗಿಗೆದ್ದು ತನ್ನ ಸೆರೆಯಲ್ಲಿದ್ದ ಎಲಿಸ ಮುಂತಾದವರನ್ನೆಲ್ಲ ಕೊಲ್ಲಿಸಿದನು. ಮತ್ತು ಅಲ್ಲಿಂದ ಓಡಿಹೋಗಿ **ಷಾಹ ಆಲಮ, ಸುಜಾಉದ್ದೌಲ** ಇವರನ್ನು ಕೂಡಿಕೊಂಡು ಪಾಟಣಾದ ಕಡೆಗೆ ಸಾಗಿ ಬಂದನು ಇಷ್ಟರಲ್ಲಿ ಕಂಪನಿಯವರು **ಮೀರಜಾಫರ**ನನ್ನು ಮತ್ತೆ ಪಟ್ಟಗಟ್ಟಿ, ತಮ್ಮ ಅಧಿಕಾರವನ್ನು ಸ್ಥಿರಪಡಿಸಿಕೊಂಡಿದ್ದರು ಅವರ ಕಡೆಯ ಮೇಜರ **ಮನ್ರೊ** ಎಂಬವನು **ಬಕ್ಸಾರ**ದ ಬಳಿಯಲ್ಲಿ ಮೀರಕಾಸೀಮ ಮೊದಲಾದವರನ್ನು ಪೂರ್ಣವಾಗಿ ಸೋಲಿಸಿ, ಲಖನೌ ಮುಂತಾದ ಪಟ್ಟಣಗಳನ್ನು ವಶಮಾಡಿ ಕೊಂಡನು.

**೩. ಅಲಹಾಬಾದದ ಒಪ್ಪಂದ:—** ಕ್ರಿ ಶ. **೧೭೬೫** ಕ್ರಿ. ಶ **೧೭೬೦**ರಲ್ಲಿ ಕ್ಲೈವನು ಇಂಗ್ಲಂಡಕ್ಕೆ ಹೋದ ಸಂಗತಿಯನ್ನು ಹಿಂದೆ ಹೇಳಿದೆ ಇವನು ಇಂಗ್ಲಂಡದಲ್ಲಿಯ ಒಬ್ಬ ವಕೀಲರ ಮಗನು, ಚಿಕ್ಕಂದಿನಲ್ಲಿ ಅಭ್ಯಾಸ ಕ್ಕಿಂತ ಆಟ-ನೋಟಗಳ ಕಡೆಗೆ ಇವನ ಲಕ್ಷ್ಯವು ವಿಶೇಷವಿತ್ತು ವಿದ್ಯೆಯಲ್ಲಿ ಮುಂದುವರಿಯನೆಂದು ತಿಳಿದು ಇವನ ತಾಯಿ-ತಂದೆಗಳು ಇವನನ್ನು ಈಷ್ಟ ಇಂಡಿಯಾ ಕಂಪನಿಯಲ್ಲಿ ಸೇರಿಸಿದರು. ಇವನು ಮದ್ರಾಸದಲ್ಲಿ ಕೆಲವು ದಿವಸ ಕಾರಕೂನನಾಗಿದ್ದ ಬಳಿಕ ಆ ಕೆಲಸವನ್ನು ಮಾಡಲು ಮನಸ್ಸು ಒಪ್ಪದೆ ಇದ್ದುದರಿಂದ ಅದನ್ನು ಬಿಟ್ಟು ಸೈನ್ಯದಲ್ಲಿ ಸೇರಿದನು ಮೇಲಾದ ಸೇನಾಪತಿ ಯೆನಿಸಿದನು. ಮತ್ತು ಪ್ಲಾಸಿಯ ಯುದ್ಧದಲ್ಲಿ ಸಿರಾಜಉದ್ದೌಲನನ್ನು ಸೋಲಿಸಿ, ಬಂಗಾಲದಲ್ಲಿ ಕಂಪನಿಯ ಅಧಿಕಾರವನ್ನು ನೆಲೆಸಿದನು. ಇವನು ಇಂಗ್ಲಂಡಕ್ಕೆ ಹೋದಾಗ ಒಳ್ಳೇ ಮರ್ಯಾದೆಯನ್ನೂ ಲಾರ್ಡ ಪದವಿಯನ್ನೂ ಪಡೆದನು. ವಾನ್ಸಿಟಾರ್ಟನ ತರುವಾಯ ಕಂಪನಿಯುಯವರು ಇವನನ್ನೇ ಬಂಗಾಲದ ಗವ್ಹರ್ನರನನ್ನಾಗಿ ಮಾಡಿ ಕಳುಹಿದರು.

ಕ್ಲೈವನು ಮರಳಿ ಬರುವಷ್ಟರಲ್ಲಿ ಬಕ್ಸಾರದ ಯುದ್ಧವು ಮುಗಿದು ಬಂಗಾಲ ಪ್ರಾಂತವು ಪೂರ್ಣವಾಗಿ ಕಂಪನಿಯ ಕೈಸೇರಿತ್ತು. ಆಗ ಕಂಪ- ನಿಯ ರಾಜ್ಯವನ್ನು ಸ್ಥಾಪಿಸುವದು ಶಕ್ಯವಿದ್ದರೂ ಅದಕ್ಕೆ ಡಾಯರೆಕ್ಟರರು

ಒಪ್ಪಿಗೆಯನ್ನು ಕೊಡಲಿಲ್ಲ. ಆದದರಿಂದ ಕ್ಲೈವನು **ಅಲಹಾಬಾದಕ್ಕೆ** ಹೋಗಿ ಷಾಹೆ ಆಲಮ ಮತ್ತು ಸುಜಾಉದ್ದೌಲ ಇವರ ಸಂಗಡ ಒಪ್ಪಂದ ಮಾಡಿಕೊಂಡನು. ಕ್ರಿ. ಶ. ೧೭೬೫.

**ಷಾಹೆಆಲಮನೊಡನೆ ಆದ ಒಪ್ಪಂದ:**— ೧. ಬಾದಷಾಹನು **ಬಂಗಾಲ, ಬಿಹಾರ, ಓಡಿಸಾ** ಈ ಪ್ರಾಂತಗಳ ದಿವಾಣೀ ಅಧಿಕಾರವನ್ನು ಕಂಪನಿಗೆ ಕೊಡಬೇಕು. ೨. ಕಂಪನಿಯವರು **ಕೋರಾ, ಅಲಹಾಬಾದ** ಜಿಲ್ಹೆಗಳನ್ನೂ ವರ್ಷಕ್ಕೆ ೨೬ ಲಕ್ಷ ರೂ. ಕಾಣಿಕೆಯನ್ನೂ ಬಾದಷಾಹನಿಗೆ ಕೊಡಬೇಕು.



**ಲಾರ್ಡ ಕ್ಲೈವನು ಷಾಹೆ ಆಲಮನಿಂದ ದಿವಾಣಿ ಅಧಿಕಾರ ಪಡೆದದ್ದು**

೩. ಕಂಪನಿಯವರು ನಿಜಾಮನಿಂದ ಉತ್ತರ ಸರಕಾರವನ್ನು ಪಡೆದುಕೊಂಡದ್ದಕ್ಕೆ ಬಾದಷಾಹನು ಒಪ್ಪಿಗೆಯನ್ನು ಕೊಡಬೇಕು.

**ಸುಜಾಉದ್ದೌಲನ ಕೂಡ ಆದ ಒಪ್ಪಂದ:**— ೧. ವಜೀರನು ಕಾರಣವಿಲ್ಲದೆ ಯುದ್ಧ ಮಾಡಿದ್ದರಿಂದ ೫೦ಲಕ್ಷ ರೂಪಾಯಿಗಳನ್ನು **ಕೋರಾ ಅಲಹಾಬಾದ** ಜಿಲ್ಹೆಗಳನ್ನೂ ಕಂಪನಿಗೆ ಕೊಡಬೇಕು. ೨. ತನ್ನ ರಾಜ್ಯದಲ್ಲಿ ಕಂಪನಿಯ ಸರಕಿನಮೇಲೆ ಸುಂಕವನ್ನೆತ್ತಬಾರದು. ೩. ಮಾಂಡಲಿಕನಾಗಿದ್ದ

**ಕಾಶಿಯ** ಅರಸನಾದ **ಬಲವಂತಸಿಂಗನ** ಮೇಲಿನ ತನ್ನ ಒಡೆತನವನ್ನು ವಜೀರನು ಬಿಟ್ಟುಬಿಡಬೇಕು.

೪. **ಕ್ಲೈವನ ಇಬ್ಬಗೆಯ ಆಳಿಕೆ:**— ಅಲಹಾಬಾದದ ಒಪ್ಪಂದದ ನಂತರ ಕ್ಲೈವನು ಬಂಗಾಲದ ಕಂದಾಯದ ಹಣವನ್ನೆತ್ತುವ ಅಧಿಕಾರವನ್ನೂ ಸೈನ್ಯದ ವ್ಯವಸ್ಥೆಯನ್ನೂ ಕಂಪನಿಯು ಕೈಯಲ್ಲಿಟ್ಟುಕೊಂಡನು; ಮತ್ತು ನ್ಯಾಯತೀರಿಸುವದು ಮುಂತಾದ ಅಧಿಕಾರಗಳನ್ನು ನವಾಬನ ಕಡೆಗೆ ಒಪ್ಪಿಸಿದನು. ಆಗ ಬಂಗಾಲದ ಉತ್ಪನ್ನವು ೪ ಕೋಟಿಯಿತ್ತು. ನವಾಬನ ಕಾರಭಾರದ ವೆಚ್ಚಕ್ಕಾಗಿ ೫೩ ಲಕ್ಷ ರೂಪಾಯಿಗಳನ್ನು ಕಂಪನಿಯವರು ಅವನಿಗೆ ಕೊಡಬೇಕೆಂದು ಗೊತ್ತುಮಾಡಿದನು ಈ ರೀತಿಯಿಂದ ಎರಡು ಬಗೆಯ ಆಳಿಕೆಯು ಬಂಗಾಲದಮೇಲೆ ನಡೆಯಹತ್ತಿತು. ಈ ಆಳಿಕೆಗೆ **'ಕ್ಲೈವನ ಇಬ್ಬಗೆಯ ಆಳಿಕೆ'** (ದಿ ಡಬಲ್ ಗವ್ಹರ್ನಮೆಂಟ ಎಂಬ ಹೆಸರು).

೫. **ಕಂಪನಿಯ ಕಾರಭಾರದಲ್ಲಿ ಆದ ಸುಧಾರಣೆಗಳು:**— ಮೀರ ಜಾಫರನ ಕಾಲದಿಂದ, ಕಾಣಿಕೆಗಳನ್ನು ತೆಗೆದುಕೊಳ್ಳುವ ಚಟವು ಕಂಪನಿಯ ಕೆಲಸಗಾರರ ಮೈಯುಂಡಿತ್ತು. ಅವರು ಸ್ವಂತದ ವ್ಯಾಪಾರವನ್ನು ಬಲಿಸಿ ಒಳ್ಳೆಯ ರೊಕ್ಕಸ್ಥರಾಗಿದ್ದರು. ಅಲ್ಲದೆ, ಯುದ್ಧಕಾಲದಲ್ಲಿ ಸಿಗತಕ್ಕ ಇಮ್ಮಡಿ ಭತ್ತೆಯನ್ನು ಉಳಿದ ಕಾಲದಲ್ಲಿಯೂ ಅವರು ತೆಗೆದುಕೊಳ್ಳುತ್ತಿದ್ದರು. ಆದದರಿಂದ ಕ್ಲೈವನು, ಕೆಲಸಗಾರರು ಕಾಣಿಕೆಗಳನ್ನು ತೆಗೆದುಕೊಳ್ಳಬಾರದೆಂದೂ ಸ್ವಂತದ ವ್ಯಾಪಾರವನ್ನು ಇಂತಿಷ್ಟಕ್ಕಿಂತ ಹೆಚ್ಚಿಸಕೂಡದೆಂದೂ ಕಟ್ಟುಮಾಡಿದನು; ಮತ್ತು ಇಮ್ಮಡಿ ಭತ್ತೆಯನ್ನು ನಿಲ್ಲಿಸಿಬಿಟ್ಟನು.

ಇದರಿಂದ ಕೆಲಸಗಾರರು ಕ್ಲೈವನನ್ನು ದೂಷಿಸಹತ್ತಿದರು ಹಲವರು ಕೆಲಸಗಳನ್ನು ಬಿಟ್ಟುಗೊಟ್ಟರು. ಸೈನ್ಯದೊಳಗಿನ ಯುರೋಪಿಯನರು ದಂಗೆ ಯೆಬ್ಬಿಸಿದರು. ಆದರೆ ಕ್ಲೈವನು ಹಿಂಜರಿಯದೆ ದೇಶೀಯ ಸೈನಿಕರ ಸಹಾಯದಿಂದ ದಂಗೆಯನ್ನು ಅಡಗಿಸಿದನು. ಕಡೆಗೆ ಕೆಲಸಗಾರರ ಸಂಬಳವನ್ನು ಹೆಚ್ಚಿಸಿ ಸುಧಾರಣೆಗಳನ್ನು ಸ್ಥಿರಪಡಿಸಿದನು.

೬. **ಕ್ಲೈವನ ನ್ಯಾಯವಿಚಾರಣೆ ಮತ್ತು ಕೊನೆ:**— ಬಳಿಕ ಕ್ಲೈವನು ಕ್ರಿ. ಶ. ೧೭೬೭ ರಲ್ಲಿ ಸ್ವದೇಶಕ್ಕೆ ಹೋದನು ಅವನು ಕಂಪನಿಯ ಹಿತವನ್ನು

ಸಾಧಿಸುವದಕ್ಕಾಗಿ ಹಲವು ಅನ್ಯಾಯಗಳನ್ನು ಮಾಡಿದ್ದನು. ಅವನ್ನೇ ಮುಂದು ಮಾಡಿ, ಅವನ ವಿರೋಧಿಗಳು ಅವನನ್ನು ಪಾರ್ಲಿಮೆಂಟಿನ ನ್ಯಾಯವಿಚಾರಣೆಗೆ ಗುರಿಮಾಡಿದರು. ವಿಚಾರಣೆಯ ಕಾಲಕ್ಕೆ ಆ ವಿರೋಧಿಗಳು, ಕ್ಲೈವನು ಸುಳ್ಳು ಸಹಿ ಮಾಡಿಸಿದ್ದು, ಉಮಿಚಂದನನ್ನು ಮೋಸಗೊಳಿಸಿದ್ದು, ನವಾಬರಿಂದ ಕಾಣಿಕೆಗಳನ್ನು ತಕ್ಕೊಂಡದ್ದು ಮುಂತಾದ ಅಪರಾಧಗಳನ್ನು ಮುಂದಿಟ್ಟು ಇವನು ಇಂಗ್ಲಿಷರ ಕೀರ್ತಿಗೆ ಕುಂದುತಂದನೆಂದು ಹೇಳಿದರು. ಮತ್ತೆ ಕೆಲವರು ಇವನು ಇಕ್ಕಟ್ಟಿನ ಪ್ರಸಂಗದಲ್ಲಿ ಮುಂದಾಗಿ ಕಂಪನಿಯ ಅಧಿಕಾರವನ್ನು ಉಳಿಸುವದಕ್ಕೂ ಬೆಳೆಸುವದಕ್ಕೂ ಕ್ಲೈವನೇ ಕಾರಣನಾದ್ದರಿಂದ ಇವನು ನಿರ್ದೋಷಿಯೆಂದು ಸಾಧಿಸಿದರು. ಕೊನೆಗೆ ಅವನ ಹೊಗಳಿಕೆಯ ಗೊತ್ತುವಳಿಯೇ ಪಾರ್ಲಮೆಂಟಿನಲ್ಲಿ ಪಾಸಾಯಿತು! ಆದರೂ ಜನರು ಅವನನ್ನು ಆಡಿಕೊಳ್ಳುವದು ತಪ್ಪಲಿಲ್ಲ. ಆದದರಿಂದ ಅವನು ಜೀವಕ್ಕೆ ಬೇಸರಗೊಂಡು ಕಡೆಗೆ ಆತ್ಮಹತ್ಯ ಮಾಡಿಕೊಂಡನು ಕ್ರಿ. ಶ. ೧೭೭೪.

---

# ೨ನೆಯ ಪಾಠ

## ಕ್ಲೈವನ ತರುವಾಯದ ಕಂಪನಿಯ ಕಾರಭಾರ

### ( ಕ್ರಿ. ಶ. ೧೭೬೭-೧೭೭೨ )

೧. **ಇಬ್ಬಗೆಯ ಆಳಿಕೆಯ ಪರಿಣಾಮ** :– ಬಂಗಾಲದಲ್ಲಿಯ ದಿವಾಣಿ ಅಧಿಕಾರವು ತಮ್ಮ ಕೈಸೇರಿದ ಬಳಿಕ, ಕಂಪನಿಯವರು ಜನರ ಸ್ಥಿತಿಗತಿಯನ್ನು ಲಕ್ಷಿಸದೆ ಕಂದಾಯದ ಹಣವನ್ನು ಎತ್ತತೊಡಗಿದರು. ಇದರಿಂದ ಜನರ ಮೇಲೆ ಅನ್ಯಾಯವಾಗಹತ್ತಿತು ಈ ಅನ್ಯಾಯಗಳನ್ನು ಜನರು ನವಾಬನ ನ್ಯಾಯಾಸನದ ಮುಂದೆ ದೂರಿಕೊಂಡರೂ ಉಪಯೋಗವಾಗುತ್ತಿರಲಿಲ್ಲ. ಏಕಂದರೆ ಕಂಪನಿಯವರ ನೆರವಿನಿಂದ ನವಾಬನಾದವನು ಅವರ ವಿರುದ್ಧವಾಗಿ ತೀರ್ಪು ಕೊಡುವದೂ ಆ ತೀರ್ಪಿನಂತೆ ಅವರನ್ನು ನಡೆಯಹಚ್ಚುವದೂ ಶಕ್ಯವಿರಲಿಲ್ಲ ಹೀಗೆ ಅನ್ಯಾಯಗಳಿಗೆ ತಡೆಯಿಲ್ಲದಂತಾದದರಿಂದ ಕಂಪನಿಯ ಅಧಿಕಾರಿಗಳು ತಕರಾರಿ ಜನರಿಂದ ಒತ್ತಾಯದಿಂದ ಹಣವೆತ್ತಹತ್ತಿದರು.

ಕಂಪನಿಯವರು ನವಾಬನಿಗೆ ಕೊಡತಕ್ಕ ಹಣವನ್ನು ಬರಬರುತ್ತ ಕಡಿಮೆ ಮಾಡಹತ್ತಿದರು. ಕ್ರಿ. ಶ. ೧೭೬೯ರಲ್ಲಿ ಅದು ೩೨ ಲಕ್ಷ ಆಯಿತು. ಇದರಿಂದ ನವಾಬನೂ ಅವನ ಕೈಕೆಳಗಿನವರೂ ತಮ್ಮ ಅಧಿಕಾರವು ಎಲ್ಲಿ ಕೈಬಿಡುವದೋ

ಎಂದು ಹೆದರಿ, ಸಾಧಿಸಿದಷ್ಟು ಹಣವನ್ನು ಜನರಿಂದ ಸೆಳಕೊಳಹಳ್ಳಹತ್ತಿದರು. ಈ ಪ್ರಕಾರ ಇಬ್ಬಗೆಯ ಆಳಿಕೆಯಲ್ಲಿ ರೈತರ ಸ್ಥಿತಿಯು ತೀರ ಕೀಳಾಯಿತು.

೨. **ಬಂಗಾಲದಲ್ಲಿ ಉಂಟಾದ ಹಾಹಾಕಾರ**:— ಕ್ರಿ. ಶ ೧೭೬೯ರಲ್ಲಿ ಮಳೆಯಾಗದ್ದರಿಂದ ಅಲ್ಲಿ ಭಯಂಕರವಾದ ಬರಬಿದ್ದಿತು ಆಗ ಅಲ್ಲಿ ಒಂದು ಮೂರನೆಯಂಶ ಜನಸಂಖ್ಯೆಯು ಲಯ ಹೊಂದಿತು! ಬರಬಿದ್ದ ವರ್ಷ ಕಂಪನಿ ಯವರು ೧೦೦ಕ್ಕೆ ೫ರಂತೆ ಬಿಡುವು ಕೊಟ್ಟು ಮರುವರ್ಷ ೧೦೦ಕ್ಕೆ ೧೦ರಂತೆ ಹೆಚ್ಚು ಹಣವನ್ನೆತ್ತಿ ತಮ್ಮ ಲಾಭವನ್ನೇ ಸಾಧಿಸಿಕೊಂಡರು ಇಲ್ಲಿಂದ ರೇಶಿಮೆ ಯನ್ನು ಇಂಗ್ಲಂಡಕ್ಕೆ ಒಯ್ದು ಅಲ್ಲಿಂದ ಸಿದ್ಧವಾದ ಬಟ್ಟೆಗಳನ್ನು ಇಲ್ಲಿ ತರಿಸಿ ಮಾರಹತ್ತಿದ್ದರಿಂದ ಬಂಗಾಲಲ್ಲಿ ಡಾಕಾ ಮುಂತಾದ ಸ್ಥಳಗಳಲ್ಲಿ ನೆಯಕಾರಿಕೆಗೆ ಬಲವಾದ ತಡೆಯುಂಟಾಯಿತು

೩. **ಹೈದರನ ಉದಯ**:— ಹೈದರನು ಕ್ರಿ. ಶ. ೧೭೨೦ ರಲ್ಲಿ **ಬೂದಿಕೋಟೆ**ಯಲ್ಲಿ ಹುಟ್ಟಿದನು. ಇವನ ತಂದೆಯಾದ **ಫತ್ತೆಮುಹಮ್ಮದ**ನು ಕೋಲಾರದ ಫೌಜದಾರನಿದ್ದನು. ಬೂದಿಕೋಟೆಯು ಅವನಿಗೆ ಉಂಬಳಿ ಯಾಗಿತ್ತು ಹೈದರನು ೮ ವರ್ಷದವನಿರುವಾಗ ಇವನ ತಂದೆಯು ತೀರಿದನು ಮುಂದೆ ಹೈದರನು ವಯಸ್ಸಿಗೆ ಬಂದ ಬಳಿಕ ಬೆಂಗಳೂರಿಗೆ ಹೋಗಿ ಮೈಸೂರ ದಂಡಿನಲ್ಲಿ ಸೇರಿದನು.


ಹೈದರ ಅಲಿ

ಕ್ರಿ. ಶ. ೧೭೦೪ರಿಂದ ಮೈಸೂರಿನ ಒಡೆಯರು ಹೆಸರಿಗೆ ಅರಸರಾಗಿ ಕಾರಭಾರವನ್ನೆಲ್ಲ ದಳವಾಯಿಗಳೂ ಸರ್ವಾಧಿಕಾರಿಗಳೂ ಸಾಗಿಸುತ್ತ ಬಂದಿದ್ದರು. **ನಂಜರಾಜಯ್ಯ**ನು ಸರ್ವಾಧಿಕಾರಿಯಾಗುವಾಗ, ಅವನು ಹೈದರನ ಶೌರ್ಯಕ್ಕೆ ಮೆಚ್ಚಿ ಇವನಿಗೆ ದಿಂಡಿಗಲ್ಲಿನ ಫೌಜದಾರಿಕೆಯನ್ನು ಕೊಟ್ಟನು. ಕ್ರಿ. ಶ. ೧೭೫೫ರ ಸುಮಾರಿಗೆ ಮರಾಠರಿಗೂ ಮೈಸೂರಿನವರಿಗೂ ನಡೆದ ಯುದ್ಧದಲ್ಲಿ ಹೈದರನು ಹೆಚ್ಚಿನ ಸಾಹಸವನ್ನು ತೋರಿಸಿದ್ದರಿಂದ ಇವನಿಗೆ **೧೩ ಗಡಿಗಳೂ ಬಹದ್ದೂರ** ಎಂಬ ಬಿರುದೂ ದೊರೆತವು ಅಂದಿನಿಂದ ಹೈದರನು ಹೆಚ್ಚು ಹೆಚ್ಚು ಪ್ರಬಲನಾಗಹತ್ತಿದನು. ಇವನು ಕ್ರಿ. ಶ ೧೭೬೦ರಲ್ಲಿ **ಖಂಡೇರಾಯ**ನೆಂಬ ಸರದಾರನ ಸಹಾಯ

ದಿಂದ ನಂಜರಾಜಯ್ಯನನ್ನು ತಳ್ಳಿ ತಾನು ಸರ್ವಾಧಿಕಾರಿಯಾದನು. ಕಡೆಗೆ **ಖಂಡೇರಾಯನನ್ನೂ** ಸೆರೆಯಿಟ್ಟು, ಅರಸನ ವೆಚ್ಚಕ್ಕೆ ೩ ಲಕ್ಷ ವರಹಗಳ ಸೀಮೆಯನ್ನು ಕಾದಿಟ್ಟು ರಾಜ್ಯದ ಅಧಿಕಾರವನ್ನು ತಾನೇ ನಾಗಿಸಹತ್ತಿದನು.

ಆಬಳಿಕ ಹೈದರನು ನಿಜಾಮನೊಡನೆ ಸ್ನೇಹ ಬೆಳಿಸಿದನು ಮರಾಠರನ್ನು ಮಾತಾಡಿಸಹೋಗಲು, ಆಗಿನ ಪೇಶವೆಯಾದ **ಮಾಧವರಾಯನು** ಇವನ ಮಾತಿಗೆ ಕಿವಿಗೊಡಲಿಲ್ಲ ಆಗ ಹೈದರನು ತುಂಗಭದ್ರೆಯನ್ನು ದಾಟಿ ಧಾರವಾಡದ ವರೆಗಿನ ಸೀಮೆಯನ್ನು ಗೆದ್ದುಕೊಂಡನು ಆದರೆ ಮಾಧವರಾಯ ದೊಡ್ಡ ದಂಡಿನೊಡನೆ ಮೈಸೂರ ರಾಜ್ಯವನ್ನು ಸೇರಿ **ಬಿದನೂರ** ಕೋಟೆಗೆ ಕೈಹಾಕಲು, ಹೈದರನು ಕೃಷ್ಣಾ ತುಂಗಭದ್ರೆಯ ನಡುಸೀಮೆಯನ್ನೂ ೨೨ ಲಕ್ಷ ರೂಪಾಯಿಗಳನ್ನೂ ಕೊಟ್ಟು ಅವನೊಡನೆ ಒಪ್ಪಂದ ಮಾಡಿಕೊಂಡನು ಕ್ರಿ ಶ. ೧೭೬೫,

ಇಷ್ಟರಲ್ಲಿ ಮೈಸೂರ ಅರಸನಾದ **ಇಮ್ಮಡಿ ಕೃಷ್ಣರಾಜನು** ಮರಣ ಹೊಂದಲು, ಹೈದರನು ಅವನ ಹಿರಿಯ ಮಗನಾದ **ನಂಜರಾಜನನ್ನು** ಪಟ್ಟಗಟ್ಟಿದನು ಆದರೆ ಮರುವರ್ಷ ಅರಸನ ಕಡೆಗಿದ್ದ ೩ ಲಕ್ಷದ ಸೀಮೆಯನ್ನು ತನ್ನ ವಶಕ್ಕೆ ತೆಗೆದುಕೊಂಡದ್ದಲ್ಲದೆ, ಅರಮನೆಯೊಳಗಿನ ಬೆಲೆಯುಳ್ಳ ಒಡವೆಗಳನ್ನೆಲ್ಲ ಕಸಿದುಕೊಂಡನು. ಮತ್ತು ಅರಮನೆಯ ಕೆಲಸಕ್ಕೆ ತನ್ನ ಕಡೆಯ ಜನರನ್ನು ನಿಯಮಿಸಿದನು.

೪. **ಮೈಸೂರ ಮೊದಲನೆಯ ಯುದ್ಧ**:— ಕ್ರಿ. ಶ ೧೭೬೭-೧೭೬೯ ಹೈದರನ ಏಳಿಗೆಯನ್ನು ಕಂಡು ಇಂಗ್ಲಿಷರು, ಪೇಶವೆ, ನಿಜಾಮ ಈ ಮೂವರು ಕೂಡಿ ಇವನನ್ನು ಹಣಿಯಬೇಕೆಂದು ಹಂಚಿಕೆ ಹಾಕಿದರು. ಮುಂದೆ ಪೇಶವೆ ಮಾಧವರಾಯನು ಬಂದು **ಸೀರಾ** ಪಟ್ಟಣವನ್ನು ಗೆದ್ದುಕೊಳ್ಳಲು; ಹೈದರನು ೩೫ ಲಕ್ಷ ರೂಪಾಯಿಗಳನ್ನು ಕೊಟ್ಟು ಅವನನ್ನು ಹಿಂದಕ್ಕೆ ಕಳುಹಿದನು. ಅತ್ತ ನಿಜಾಮನು ಇಂಗ್ಲಿಷರೊಡನೆ **ಕೋಲಾರದ** ವರೆಗೆ ಬಂದಿರಲು, ಅವನನ್ನೂ ಹಂಚಿಕೆಯಿಂದ ತನ್ನ ಕಡೆಗೆ ಮಾಡಿಕೊಂಡು ಇಬ್ಬರೂ ಕೂಡಿ ಇಂಗ್ಲಿಷರ ಮೇಲೆ ಸಾಗಿದರು ಕರ್ನಲ್ **ಸ್ಮಿಥ**ನಿಗೂ ಹೈದರನಿಗೂ **ಚಂಗಮ, ತ್ರಿನೋಮಲಿ** ಇವುಗಳ ಬಳಿಯಲ್ಲಿ ಯುದ್ಧಗಳಾದವು. ಮೊದಲನೆಯದರಲ್ಲಿ ಸ್ಮಿಥನೂ ಎರಡನೆಯದರಲ್ಲಿ ಹೈದರನೂ ಹಿಮ್ಮೆಟ್ಟಿದರು. ಇದೇ ಸಮಯಕ್ಕೆ

ಬಂಗಾಲದ ಇಂಗ್ಲಿಷರ ದಂಡು ನಿಜಾಮನ ರಾಜ್ಯದಮೇಲೆ ಸಾಗಿಬಂದದರಿಂದ, ಅವನು ಹೆದರಿ ಹೈದರನನ್ನು ಬಿಟ್ಟು ಇಂಗ್ಲಿಷರ ಕೂಡ ಒಪ್ಪಂದ ಮಾಡಿದನು. ಕ್ರಿ. ಶ. **೧೭೬೮.** ಇತ್ತ ಹೈದರನು ತನ್ನ ಮಗನಾದ ಟೀಪುವಿನ ಸೈನ್ಯವನ್ನು ಕೂಡಿಕೊಂಡು **ಅಂಬೂರಿಗೆ** ಮುತ್ತಿಗೆ ಹಾಕಿದನು. ಆದರೆ ಇವನ ಆಟವು ಸಾಗಲಿಲ್ಲ. ಆದದರಿಂದ ಅಲ್ಲಿಂದ ಹಿಂದಿರುಗಿ ಪಶ್ಚಿಮಕ್ಕೆ ಸಾಗಿ **ಮಂಗಳೂರ, ಹೊನ್ನಾವರ**ಗಳನ್ನು ಆಕ್ರಮಿಸಿದ್ದ ಮುಂಬಯಿಯ ಇಂಗ್ಲಿಷರ ದಂಡನ್ನು ಇವನು ಚದುರಿಸಿದನು. ಆಮೇಲೆ ಮದ್ರಾಸದಿಂದ ಬರುತ್ತಲಿದ್ದ ಕರ್ನಲ್ ಫ್ರುಡ್ ಎಂಬವನ ಕೈಕೆಳಗಿನ ಸೈನ್ಯವನ್ನು ಎರಡು ಕದೆಗಳಲ್ಲಿ ಸೋಲಿಸಿ ತ್ರಿಚನಾಪಳ್ಳಿ, ಮಧುರೆ, ತಿನೆವೆಲ್ಲಿ ಈ ಪ್ರದೇಶಗಳನ್ನು ಹಾಳುಗೆಡವುತ್ತ ಆಕಸ್ಮಿಕವಾಗಿ ಮದ್ರಾಸಕ್ಕೆ ಬಂದನು. ಆಗ ಮದ್ರಾಸದ ಗವ್ಹರ್ನರನು ಹೈದರನೊಡನೆ ಒಪ್ಪಂದ ಮಾಡಿಕೊಂಡನು. ಕ್ರಿ. ಶ. **೧೭೬೯.** ಈ ಮದ್ರಾಸ ಒಪ್ಪಂದದ ಕಲಮುಗಳು:— ೧. ಯುದ್ಧದಲ್ಲಿ ಗೆದ್ದುಕೊಂಡ ಸೀಮೆಗಳನ್ನು ಇಬ್ಬರೂ ಬಿಟ್ಟುಕೊಡಬೇಕು ೨. ಬೇರೆಯವರು ಏರಿಬಂದಾಗ ಒಬ್ಬರಿಗೊಬ್ಬರು ನೆರವಾಗಬೇಕು. ೩. ಯುದ್ಧದ ವೆಚ್ಚವನ್ನು ಇಂಗ್ಲಿಷರು ವಹಿಸಬೇಕು

**೫. ಕಂಪನಿಯ ಪರಿಸ್ಥಿತಿ:**— ಬಂಗಾಲದ ಪರಿಸ್ಥಿತಿಯ ಪರಿಣಾಮವು ಕಂಪನಿಯ ಮೇಲೆ ಆಗದೆ ಇರಲಿಲ್ಲ. ಅದರ ವ್ಯಾಪಾರವು ತೀರ ಕಡಿಮೆಯಾಯಿತು. ಕಂದಾಯವು ಕಟ್ಟಾಯಿತು. ಮೈಸೂರ ಯುದ್ಧದಲ್ಲಿ ನಿರರ್ಥಕವಾಗಿ ಬಹಳ ಹಣವು ವೆಚ್ಚವಾಯಿತು ಇಂಗ್ಲಂಡದ ಸರಕಾರಕ್ಕೆ ಪ್ರತಿವರ್ಷ ಕೊಡತಕ್ಕ ೪೦ ಸಾವಿರ ಪೌಂಡುಗಳನ್ನು ಕೊಡುವದಾಗಲಿಲ್ಲ. ಕಂಪನಿಯ ಕಠೋರವಾದ ಆಳಿಕೆಯೇ ಈ ದುಸ್ಥಿತಿಗೆ ಕಾರಣವೆಂದು ಬೊಬ್ಬಾಟವಾಯಿತು. ಆದದರಿಂದ ಡಾಯರೆಕ್ಟರರು ಕಂಪನಿಯ ಸ್ಥಿತಿಯನ್ನು ಸುಧಾರಿಸುವದಕ್ಕಾಗಿ **ವಾರನ್ ಹೆಸ್ಟಿಂಗ್ಸ** ಎಂಬವನನ್ನು ಕಲಕತ್ತೆಯ ಗವ್ಹರ್ನರನನ್ನಾಗಿ ಮಾಡಿದರು. ಕ್ರಿ. ಶ. ೧೭೭೨.

**೬. ಹೆಸ್ಟಿಂಗ್ಸನ ಹಣಕೂಡಿಸುವ ಹಂಚಿಕೆಗಳು :**— ಹೆಸ್ಟಿಂಗ್ಸನು ಜಾಣನೂ ಸಾಹಸಿಯೂ ಕ್ಲೈವನ ಕೈಯಲ್ಲಿ ಆಡಿದವನೂ ಆಗಿದ್ದನು. ಇವನು ಹದಿನೆಂಟು ವರ್ಷದವನಿರುವಾಗ ಕಂಪನಿಯ ಕಾರಕೂನನಾಗಿ ಮುಂದೆ

ಏರುತ್ತೇರುತ್ತ ಆಲೋಚನಾಸಭೆಯ ಸಭಿಕನಾಗಿದ್ದನು. ಇವನು ಗವ್ಹರ್ನರ ನಾದಕೂಡಲೆ ಹಲವು ಹಂಚಿಕೆಗಳಿಂದ ಹಣ ಕೂಡಿಸಿದನು; ಅಲ್ಲದೆ ಕಾರಭಾರ ದಲ್ಲಿ ಹಲವು ಸುಧಾರಣೆಗಳನ್ನು ಮಾಡಿ ಕಂಪನಿಯ ಅಧಿಕಾರವನ್ನು ಬಲಿಸಿದನು. ನವಾಬನ ಅಧಿಕಾರವನ್ನು ಕಡಿಮೆಮಾಡಿ ಅದನ್ನು ಮೀರಜಾಫರನ ಹೆಂಡತಿ ಯಾದ **ಮಣಿಬೇಗಮಳ** ಕಡೆಗೆ ಕೊಟ್ಟನು. ಮತ್ತು ನವಾಬನಿಗೆ ೩೨ ಲಕ್ಷಕ್ಕೆ ಬದಲಾಗಿ ೧೬ ಲಕ್ಷ ರೂಪಾಯಿಗಳನ್ನು ಕೊಡತಕ್ಕದ್ದೆಂದು ಗೊತ್ತುಮಾಡಿದನು. ಡೆಪ್ಯೂಟಿ ನವಾಬನನ್ನು ತೆಗೆದುಹಾಕಿ, **ಕಲೆಕ್ಟರ**ರೆಂಬ ಇಂಗ್ಲಿಷ ಅಧಿಕಾರಿ ಗಳನ್ನು ಹಣವೆತ್ತುವ ಕೆಲಸಕ್ಕೆ ನಿಯಮಿಸಿ, ಅವರಿಗೆ **ದಿವಾಣಿ** ಮತ್ತು **ಫೌಜದಾರಿ** ಅಧಿಕಾರಗಳನ್ನು ಕೊಟ್ಟನು. ರಾಜಧಾನಿಯನ್ನು ಮುರ್ಶಿದಾಬಾದ ದಿಂದ ಕಲಕತ್ತೆಗೆ ತಂದು ಅಲ್ಲಿ ಅಪೀಲ ಕೋರ್ಟುಗಳನ್ನು ಸ್ಥಾಪಿಸಿದನು. ಕಂದಾಯವನ್ನು ಹೆಚ್ಚಿಸುವದಕ್ಕಾಗಿ ಐದೈದು ವರ್ಷದ ಕರಾರಿನಿಂದ ಭೂಮಿ ಗಳನ್ನು ಗುತ್ತಿಗೆ ಕೊಟ್ಟನು.

ಇದೇ ಹೊತ್ತಿಗೆ ಮರಾಠರು ಮತ್ತೆ ದಿಲ್ಲಿಯಲ್ಲಿ ತಮ್ಮ ವರ್ಚಸ್ಸನ್ನು ನೆಲಿ ಸಿದರು. ಆಗ ಷಾಹ ಆಲಮನು ಅಲಹಾಬಾದದಿಂದ ದಿಲ್ಲಿಗೆ ಹೋಗಿ ಮರಾ ಠರ ಆಶ್ರಯವನ್ನು ಬಯಿಸಿದನು. ಈ ಕಾರಣವನ್ನು ತೋರಿಸಿ, ಹೇಸ್ಟಿಂಗ್ಸನು ಅವನಿಗೆ ಸಲ್ಲುತ್ತಿದ್ದ ೨೬ ಲಕ್ಷರೂ. ಗಳ ಕಾಣಿಕೆಯನ್ನು ನಿಲ್ಲಿಸಿದ್ದಲ್ಲದೆ, ಕೋರಾ ಅಲಹಾಬಾದಗಳನ್ನು ಕಸಿದುಕೊಂಡು ಅವನ್ನು ೫೦ ಲಕ್ಷ ರೂ. ಗಳಿಗೆ ಅಯೋ ಧ್ಯೆಯ ವಜೀರನಿಗೆ ಮಾರಿದನು.

ದಿಲ್ಲಿಯಲ್ಲಿ ನೆಟ್ಟಾದ ಬಳಿಕ, ಮರಾಠರು ರೋಹಿಲಖಂಡವನ್ನು ಹೊಕ್ಕು ಕೆಲವು ಕೋಟೆಗಳನ್ನು ವಶಮಾಡಿಕೊಂಡರು ಆಗ ರೋಹಿಲರು ವಜೀರನಿಗೆ ೪೦ ಲಕ್ಷ ರೂಪಾಯಿಗಳನ್ನು ಕೊಡಲೊಪ್ಪಿ ಅವನನ್ನು ನೆರವಿಗೆ ಕರೆದು ಕೊಂಡರು. ಅಷ್ಟರಲ್ಲಿ ಪೇಶವೆಯಾದ ಮಾಧವರಾಯನು ಮರಣಹೊಂದಿದ ಸುದ್ದಿಯು ಬಂದದರಿಂದ ಮರಾಠರ ಸೈನ್ಯವು ರೋಹಿಲಖಂಡವನ್ನು ಬಿಟ್ಟು ಹೋಯಿತು. ಅನಾಯಾಸವಾಗಿ ಮರಾಠರ ದಾಳಿಯು ತಪ್ಪಿದ್ದರಿಂದ ವಜೀರನ ನೆರವಿನ ಅವಶ್ಯವಿರಲಿಲ್ಲ. ಆದರೂ ಗೊತ್ತಾದ ಹಣವನ್ನು ಅವನು ಬೇಡಹತ್ತಿ ದನು. ರೋಹಿಲರು ಆ ಮಾತಿಗೆ ಒಪ್ಪದಿರಲು ಅವರನ್ನು ನಾಶಗೊಳಿಸಿ

ರೋಹಿಲಖಂಡವನ್ನೇ ವಶಮಾಡಿಕೆವಳ್ಳಬೇಕೆಂದು ವಜೀರನು ಹಟತೊಟ್ಟನು. ಮತ್ತು ೪೦ ಲಕ್ಷ ರೂಪಾಯಿಗಳನ್ನು ಕೊಡುವೆನೆಂದು ಹೇಳಿ, ಹೆಸ್ಟಿಂಗ್ಸನನ್ನು ನೆರವಿಗೆ ಕರೆದನು. ಆಗ ಹೆಸ್ಟಿಂಗ್ಸನು. 'ಈ ಹಣವಲ್ಲದೆ ರೋಹಿಲಖಂಡವು ವಜೀರನದಾದರೆ, ಕಂಪನಿಯ ವ್ಯಾಪಾರಕ್ಕೆ ಅದೊಂದು ಹೊಸ ಸೀಮೆಯು ಸಿಗುವದು;' ಎಂದು ನೆನೆದು ಆನಂದದಿಂದ ನೆರವಾಗಲೊಪ್ಪಿದನು. ಬಳಿಕ ಕಂಪನಿಯ ಸೈನ್ಯವು ರೋಹಿಲರನ್ನು ಸೋಲಿಸಿ ಓಡಿಸಲು ರೋಹಿಲಖಂಡವು ವಜೀರನ ವಶವಾಯಿತು.

---

# ೩ನೆಯ ಪಾಠ

## ೪ನೆಯ ಪೇಶವೆ

### ಮಾಧವರಾಯ ( ಕ್ರಿ. ಶ ೧೭೬೧-೭೨ )

೧. **ಮಾಧವರಾಯನು ಪೇಶವೆಯಾದ ಕಾಲದ ಸ್ಥಿತಿ:—** ೩ ನೆಯ ಪೇಶವೆಯಾದ ಬಾಳಾಜಿ ಬಾಜೀರಾಯನು ಪಾನಿಪತದ ಅಪಜಯದ ದುರ್ವಾರ್ತೆಯನ್ನು ಕೇಳಿಮಡಿದ ಸಂಗತಿಯು ಹಿಂದೆ ಮಧ್ಯಭಾಗದ ೧೨ನೇ ಪಾಠದಲ್ಲಿ ಹೇಳಿದೆ. ಆ ಬಳಿಕ ಅವನ ೨ನೆಯಮಗನಾದ **ಮಾಧವರಾಯನು** ಪೇಶವೆಯಾದನು ಆಗಅವನು ೧೬ವರ್ಷದವನಿದ್ದದರಿಂದ ಕಾರಭಾರವನ್ನು ರಘುನಾಥರಾಯನು ಸಾಗಿಸಹತ್ತಿದನು. ರಘುನಾಥರಾಯನು ಒಳ್ಳೆಯ ಶೂರನು; ಆದರೆ ರಾಜಕಾರಣ ಧುರೀಣನಲ್ಲ. ದುರಭಿಮಾನ, ಚಂಚಲತೆ ಈ ಅವಗುಣಗಳು ಅವನಲ್ಲಿ ಅಡಕವಾಗಿದ್ದವು. ಆದದರಿಂದ ಅವನು ಕಾರಭಾರವನ್ನು ಸಾಗಿಸುವದು, ಹಲವು ಮುತ್ಸದ್ದಿಗಳ ಮನಸ್ಸಿಗೆ ಬರಲಿಲ್ಲ.



**ಪೇಶವೆ ಮಾಧವರಾಯ**

ಪಾನಿಪತದ ಅಪಜಯದ ನಂತರ ಮರಾಠರ ಶತ್ರುಗಳು ಪೇಶವೆಯರನ್ನು ಮೀರಿ ನಡೆಯಹತ್ತಿದರು. ನಿಜಾಮನು ಉದಯಗಿರದ ಕಾಳಗವಾದ ಬಳಿಕ ಕೊಡಲೊಪ್ಪಿದ ಸೀಮೆಯನ್ನು ಕೊಡದಾದನು. ಮಾಳವದ ಆಚೆಗೆ ಪೇಶವೆಯರ ಅಧಿಕಾರವು ನಡೆಯದಾಯಿತು. ಅಲ್ಲಿ ರೋಹಿಲರು, ಜಾಟರು ಮೊದಲಾದವರು ಪ್ರಬಲರಾದರು. ಜಾನೋಜಿ ಭೋಸಲೆಯು ನಿಜಾಮನನ್ನು ಕೂಡಿಕೊಂಡು ಸಾತಾರೆಯ ಪಟ್ಟವನ್ನು ಹಿಡಿದುಕೊಳ್ಳುವ ಸಾಹಸಕ್ಕೆ ಕೈಹಾಕಿದನು.

೨. **ಮನೆ ಜಗಳದ ಆರಂಭ** :— ಇದೇ ಹೊತ್ತಿಗೆ ಪೇಶವೆಯರ ಮನೆಯಲ್ಲಿಯೆ ಜಗಳ ಹುಟ್ಟಿತು. ರಘುನಾಥರಾಯನ ಹೆಂಡತಿಯಾದ **ಆನಂದೀಬಾಯಿಗೂ** ಮಾಧವರಾಯನ ತಾಯಿಯಾದ **ಗೋಪಿಕಾಬಾಯಿಗೂ** ಕೂಡಿ ನಡೆಯದಂತಾಯಿತು ಆನಂದೀಬಾಯಿಗೆ ರಾಜ್ಯದಾಶೆ ಹುಟ್ಟಿದ್ದರಿಂದ ಆಗ ಮಾಧವರಾಯನ ವಿಷಯವಾಗಿ ರಘುನಾಥರಾಯನು ಮನಸ್ಸನ್ನು ಕೆಡಿಸಿದಳು. ಆಗ ರಘುನಾಥರಾಯನು **ಸಖಾರಾಮಬಾಪು** ಮೊದಲಾದ ಸರದಾರರ ನೆರವಿನಿಂದ ಮಾಧವರಾಯನನ್ನು ಕಾವಲಿನಲ್ಲಿಟ್ಟನು. ಮಾಧವರಾಯನ ಪಕ್ಷದ ತ್ರ್ಯಂಬಕರಾಯ, ಹರಿಪಂತ, ನಾನಾಫಡಣವೀಸ ಮೊದಲಾದ ಮುತ್ಸದ್ದಿಗಳು ರಘುನಾಥರಾಯರನ್ನೇ ಅಧಿಕಾರದಿಂದ ತೆಗೆದುಹಾಕಬೇಕೆಂದು ಪ್ರಯತ್ನಿಸಹತ್ತಿದರು.

೩. **ರಾಕ್ಷಸಭುವನದ ಕಾಳಗ** :— ಕ್ರಿ. ಶ. ೧೭೬೩. ನಿಜಾಮನು ತನ್ನ ಬಲವನ್ನು ಹೆಚ್ಚಿಸಿಕೊಂಡು ಮರಾಠರನ್ನು ಮುರಿಯುವ ಹವಣಿಕೆಯಲ್ಲಿರಲು ಪೇಶವೆಯು ಹೋಳಕರನಿಗೆ ೧೦ ಲಕ್ಷದ ಹೊಸ ಜಹಗೀರನ್ನು ಕೊಟ್ಟು ಅವನನ್ನು ತನ್ನ ನೆರವಿಗೆ ಕರೆದುಕೊಂಡನು. ಬಳಿಕ ಅವನು ನಿಜಾಮ-ಭೋಸಲೆ ಇವರ ಸೀಮೆಯಲ್ಲಿಯೂ, ಭೋಸಲೆಯು ಪುಣೆ ಪ್ರಾಂತದಲ್ಲಿಯೂ ಕೊಳ್ಳೆ-ಸುಲಿಗೆಗಳನ್ನು ಮಾಡಹತ್ತಿದರು. ಕಡೆಗೆ ಭೋಸಲೆಯು 'ನಿಜಾಮನ ಕಡೆಗಾದದರಿಂದ ಉಪಯೋಗವಾಗದು' ಎಂದು ತಿಳಿದು ೩೨ ಲಕ್ಷದ ಸೀಮೆಯನ್ನು ತೆಗೆದುಕೊಂಡು ಮರಾಠರ ಕಡೆಗಾದನು. ಆಗ ನಿಜಾಮನ ಬಲವು ಕುಂದಿತು. ಮುಂದೆ ರಘುನಾಥರಾಯನು ನಿಜಾಮನ ಮೇಲೆ ಸಾಗಿಹೋದನು. **ರಾಕ್ಷಸಭುವನ** ಎಂಬಲ್ಲಿ ಭಯಂಕರವಾದ ಕಾಳಗವಾಗಿ ನಿಜಾಮನು ಪೂರ್ಣವಾಗಿ ಸೋತು ೮೨ ಲಕ್ಷದ ಸೀಮೆಯನ್ನು ಕೊಟ್ಟು ಮರಾಠರೊಡನೆ ಒಪ್ಪಂದ

ಮಾಡಿಕೊಂಡನು. ಆಯುತ ವೇಳೆಯಲ್ಲಿ ಮಾಧವರಾಯನು ಮುಂದಾಗಿ ಪರಾಕ್ರಮದಿಂದ ಕಾದಿ ಜಯವನ್ನು ಸಂಪಾದಿಸಿದನು. ಆದದರಿಂದ ರಘುನಾಥರಾಯನ ಮನಸ್ಸು ತಿರುಗಿತು. ಅವನು ಕಾರಭಾರವನ್ನು ಮಾಧವರಾಯನಿಗೊಪ್ಪಿಸಿ ತಾನು ನಾಶಿಕದಲ್ಲಿರಹತ್ತಿದನು.

೪. **ಮಾಧವರಾಯನ ರಾಜ್ಯವಿಸ್ತಾರ** :— ಮೈಸೂರ ಅಧಿಕಾರವನ್ನು ಕೈಕೊಂಡ ಬಳಿಕ ಹೈದರನು ಪ್ರಬಲನಾಗಿ ತುಂಗಭದ್ರೆಯನ್ನು ದಾಟಿ ಧಾರವಾಡದ ವರೆಗಿನ ಮರಾಠರ ಸೀಮೆಯನ್ನು ಹಿಡಿದುಕೊಂಡನು. ಕ್ರಿ. ಶ. ೧೭೬೪ ರಲ್ಲಿ ಮಾಧವರಾಯನು ಅವನನ್ನು ಎದುರಿಸಿ ಸೋಲಿಸಿದನು. ಆಗ ಹೈದರನು ಕೃಷ್ಣಾ-ತುಂಗಭದ್ರೆಗಳ ನಡುವಿನ ಸೀಮೆಯನ್ನೂ ೩೩ ಲಕ್ಷ ರೂಪಾಯಿ ಕಪ್ಪವನ್ನೂ ಕೊಟ್ಟು ಒಡಂಬಡಿಕೆ ಮಾಡಿಕೊಂಡನು.

**ರಘುನಾಥರಾಯನನ್ನು ಸೆರೆಹಿಡಿದದ್ದು** :— ರಾಜ್ಯದಲ್ಲಿ ಪಾಲು ಕೊಡಲಿಲ್ಲೆಂಬ ಸಿಟ್ಟಿನಿಂದ ರಘುನಾಥರಾಯನು ಸಿಟ್ಟಾಗಿ ನಾಶಿಕದ ಬಳಿಯ ಆನಂದವಲ್ಲಿ ಎಂಬಲ್ಲಿ ನಿಂತು ಸೈನ್ಯವನ್ನು ಕೂಡಿಸಹತ್ತಿದನು. ಅಲ್ಲದೆ ಭೋಸಲೆ-ಗಾಯಕವಾಡರನ್ನು ನೆರವಿಗೆ ಕರೆದನು. ಅವರೂ ಬರಲು ಒಪ್ಪಿದರು. ಈ ಸುದ್ದಿಯು ಹತ್ತಿದ ಕೂಡಲೆ ಮಾಧವರಾಯನು ರಘುನಾಥರಾಯನನ್ನು ಮುತ್ತಿ ಸೆರೆಹಿಡಿದು ಪುಣೆಯ ಅರಮನೆಯಲ್ಲಿ ಕಟ್ಟಿನಲ್ಲಿಟ್ಟನು. ಬಳಿಕ ಭೋಸಲೆ ಗಾಯಕವಾಡರನ್ನು ಹಣ್ಣುಮಾಡಿ ಅವರನ್ನು ತನ್ನ ಹೇಳಿಕೆಯಂತೆ ನಡೆಯ ಹಚ್ಚಿದನು.

**ಮರಾಠರು ಶ್ರೀರಂಗ ಪಟ್ಟಣಕ್ಕೆ ಮುತ್ತಿಗೆ ಹಾಕಿದ್ದು** :— ಈ ರೀತಿ ೩-೪ ವರ್ಷಗಳ ಕಾಲವು ಮನೆ ಜಗಳದಲ್ಲಿ ಕಳೆದುಹೋಗುತ್ತಿರಲು ಅತ್ತ ಹೈದರನು ಮರಾಠರನ್ನು ತಡೆಯಬೇಕೆಂದು ಸಿದ್ಧತೆಯನ್ನು ನಡೆಸಿದ್ದನು. ಇಷ್ಟರಲ್ಲಿ ಮಾಧವರಾಯನೇ ಹೈದರನ ಮೇಲೆ ಸಾಗಿ ಒಂದೊಂದು ಸೀಮೆಯನ್ನು ವಶಮಾಡಿಕೊಳ್ಳುತ್ತ ಶ್ರೀರಂಗ ಪಟ್ಟಣದ ಕಡೆಗೆ ಸಾಗಿದನು. ಹೀಗಿರುವಾಗ ಕ್ರಿ. ಶ. ೧೭೭೦ರಲ್ಲಿ ಮಾಧವರಾಯನಿಗೆ ಜಡ್ಡಾಯಿತು ಆದದರಿಂದ ಅವನು ಯುದ್ಧದ ಕೆಲಸವನ್ನು ತ್ರ್ಯಂಬಕರಾಯನಿಗೆ ಒಪ್ಪಿಸಿ ತನ್ನ ರಾಜಧಾನಿಗೆ ಬಂದನು. ಮುಂದೆ ಮರಾಠರಿಗೂ ಹೈದರನಿಗೂ ಯುದ್ಧವಾಯಿತು. ಆದರೂ

ಹೈದರನು ಮಣಿಯಲಿಲ್ಲ. ಆದದರಿಂದ ಮರಾಠರು ಶ್ರೀರಂಗ ಪಟ್ಟಣಕ್ಕೆ ಮುತ್ತಿಗೆ ಹಾಕಿದರು. ಇಷ್ಟರಲ್ಲಿ ಮಾಧವರಾಯನಿಂದ 'ನಾನು ಈ ಬೇನೆಯಿಂದ ಪಾರಾಗುವ ಲಕ್ಷಣವಿಲ್ಲ' ಎಂದು ಪತ್ರ ಬಂದಿತು. ಅದಕ್ಕಾಗಿ ತ್ರ್ಯಂಬಕ ರಾಯನು ಹೈದರನೊಡನೆ ಒಪ್ಪಂದ ಮಾಡಿಕೊಂಡು ಸೈನ್ಯದೊಂದಿಗೆ ಹಿಂದಿರು ಗಿದನು. ಈ ಒಪ್ಪಂದದಿಂದ ಹೈದರನು ಮರಾಠರವೆಂದೆನಿಸಿದ್ದ ಸೀಮೆಗಳನ್ನೂ ಯುದ್ಧದ ವೆಚ್ಚವೆಂದು ೫೦ ಲಕ್ಷರೂಪಾಯಿಗಳನ್ನೂ ಕೊಟ್ಟನಲ್ಲದೆ ಪ್ರತಿವರ್ಷ ೧೪ ಲಕ್ಷ ರೂ. ಕಪ್ಪವನ್ನು ಕೊಡಲೊಪ್ಪಿದನು ಕ್ರಿ ಶ. ೧೭೭೨.

ಮಾಧವರಾಯನು ದಕ್ಷಿಣಕ್ಕೆ ಹೊರಡುವಾಗ ಉತ್ತರದ ದಿಗ್ವಿಜಯಕ್ಕಾಗಿ ಒಳ್ಳೆಯ ಸಜ್ಜಾದ ಸೈನ್ಯವನ್ನು ಕಳುಹಿದ್ದನು. **ರಾಮಚಂದ್ರಪಂತ, ವಿಸಾಜಿ ಪಂತ** ಎಂಬವರು ಅದರ ಸೇನಾಪತಿಗಳಾಗಿದ್ದರು. ಅವರು ಮಹಾದಾಜಿ ಸಿಂಧೆ, ತುಕೋಜಿ ಹೋಳಕರ ಈ ಸರದಾರರನ್ನು ಕೂಡಿಕೊಂಡು ರಜಪುತರಿಂದಲೂ ಜಾಟರಿಂದಲೂ ಕಪ್ಪವನ್ನು ತೆಗೆದುಕೊಂಡು ಬಳಿಕ ಆಗ್ರಾ ಪ್ರಾಂತವನ್ನು ವಶ ಮಾಡಿಕೊಂಡರು. ಈ ಸುದ್ದಿಯನ್ನು ಕೇಳಿ ನಜೀಬಖಾನನು ಗಾಬರಿಯಾಗಿ ಇನ್ನು ಮರಾಠರು ಪಾನಿಪತದ ಸೇಡನ್ನು ತೀರಿಸದೆ ಬಿಡರೆಂದು ತಿಳಿದು ಒಡಂಬಡಿಕೆಗೆ ಸಿದ್ಧನಾದನು. ಮರಾಠರು ಒಡಂಬಡಿಕೆ ಮಾಡಿಕೊಂಡು ಅವನ ನೆರವಿನಿಂದ ಅಂತರ್ವೇದಿಯ ಪಠಾಣರನ್ನು ಬಗ್ಗುಬಡಿದರು ಆಮೇಲೆ ಅಲಹಾಬಾದದಲ್ಲಿ ವಜೀರನ ರಕ್ಷಣೆಗೆ ಒಳಗಾಗಿದ್ದ ಷಾಹೆಆಲಮ ಬಾದಷಾಹನನ್ನು ದಿಲ್ಲಿಗೆ ಕರೆ ದೊಯ್ದು ಪಟ್ಟಕ್ಕೆ ಕುಳ್ಳಿರಿಸಿದರು. ಕ್ರಿ. ಶ. ೧೭೭೧. ಅಂದಿನಿಂದ ದಿಲ್ಲಿಯ ಸೂತ್ರಗಳೆಲ್ಲ ಮತ್ತೆ ಮರಾಠರ ಕೈಸೇರಿದವು. ಮಹಾದಾಜಿಯ ಕರ್ತೃತ್ವವು ಈ ಪ್ರಸಂಗದಲ್ಲಿ ಚೆನ್ನಾಗಿ ವ್ಯಕ್ತವಾಯಿತು. ಮುಂದೆ ಮರಾಠರು ರೋಹಿಲ ಖಂಡವನ್ನು ಸೇರಿ ನಜೀಬಖಾನನ ಮಗನಾದ ಜಬೇತಖಾನನನ್ನು ಸೋಲಿಸಿ ದರು. ಮತ್ತು ರೋಹಿಲರು ಪಾನಿಪತದಲ್ಲಿ ಸುಲಿದು ತಂದಿದ್ದ ಮರಾಠರ ಸಂಪ ತ್ತನ್ನು ಮರಳಿ ಕಸಿದುಕೊಂಡರು. ಇಷ್ಟರಲ್ಲಿ ಮಾಧವರಾಯನು ಮರಣ ಹೊಂದಿದ ಸುದ್ದಿಯು ಬಂದದರಿಂದ ಮರಾಠ ಸೈನ್ಯವೆಲ್ಲ ದಕ್ಷಿಣಕ್ಕೆ ಬಂದು ಬಿಟ್ಟಿತು.

**೫. ಮಾಧವರಾಯನ ಮರಣವೂ ಯೋಗ್ಯತೆಯೂ :—** ದಕ್ಷಿಣ ದಿಂದ ಬಂದಬಳಿಕ ಮಾಧರಾಯನ ಪ್ರಕೃತಿಯು ದಿನದಿನಕ್ಕೆ ಆಶಕ್ತವಾಗ

ಹತ್ತಿತು. ಕಡೆಗೆ ಅವನು ಕ್ರಿ. ಶ. ೧೭೭೨ರಲ್ಲಿ **ಥೆವೂರ** ಎಂಬಲ್ಲಿ ಮರಣ ಹೊಂದಿದನು. ಸಾಯುವ ಮೊದಲು ಇವನು ರಘುನಾಥರಾಯನನ್ನು ಬಿಡುಗಡೆಮಾಡಿದನು. ಮತ್ತು ತನ್ನ ತರುವಾಯ ನಾರಾಯಣರಾಯನನ್ನು ಪೇಶವೆಯನ್ನು ಮಾಡಿ "ನೀವು ನಾನಾಫಡಣವೀಸ, ಸಖಾರಾಮ ಬಾಪು ಈ ಮುತ್ಸದ್ದಿಗಳ ನೆರವಿನಿಂದ ಕಾರಭಾರವನ್ನು ಸಾಗಿಸಬೇಕು" ಎಂದು ರಘುನಾಥರಾಯನಿಗೆ ಹೇಳಿದನು. ಆಗ ಅವನು ಈ ಮಾತಿಗೆ ಒಪ್ಪಿಕೊಂಡು ನಾರಾಯಣರಾಯನಿಗೆ ಅಭಯವನ್ನಿತ್ತನು.

ಮಾಧವರಾಯನು ಶೂರನೂ ಚತುರನೂ ಸದಾಚರಣಿಯೂ ಆಗಿದ್ದನು. ಚಿಕ್ಕವಯಸ್ಸಿನಲ್ಲಿಯೇ ಇವನು ನೆರವೇರಿಸಿದ ಕಾರ್ಯಗಳನ್ನು ನೋಡಿದರೆ ಇವನ ಎದೆಗಾರಿಕೆಯ ಕಲ್ಪನೆಯು ಚೆನ್ನಾಗಿ ಆಗುವಂತಿದೆ ಜನರ ಯೋಗ್ಯತೆಯನ್ನು ಕಂಡುಹಿಡಿಯುವಲ್ಲಿ ಇವನು ಒಳ್ಳೆಯ ಹೆಸರಾಗಿದ್ದನು. ಮನೆಜಗಳಗಳನ್ನು ಯುಕ್ತಿಯಿಂದ ಮುರಿದು ರಾಜ್ಯವನ್ನು ಸಂರಕ್ಷಿಸಿದನು. ಪಾನಿಪತದ ಯುದ್ಧದ ನಂತರ ಹಿಮ್ಮೆಟ್ಟುತ್ತಲಿದ್ದ ಮರಾಠರ ಸಾಮ್ರಾಜ್ಯವನ್ನು ಇವನು ಮತ್ತೆ ಊರ್ಜಿತಸ್ಥಿತಿಗೆ ತಂದನು. ನ್ಯಾಯನೀತಿವಿಶಾರದನೂ ನಿಸ್ಪೃಹನೂ ಆದ **ರಾಮಶಾಸ್ತ್ರಿಯೂ** ಹೆಸರಾದ ಮುತ್ಸದ್ದಿಯೆನಿಸಿದ **ನಾನಾಫಡಣವೀಸನೂ** ಕರ್ತೃತ್ವಶಾಲಿಯಾದ **ಮಹಾದಾಜಿಯೂ** ಪ್ರಸಿದ್ಧ ಸೇನಾಪತಿಗಳಾದ **ತ್ರ್ಯಂಬಕರಾಯ, ಹರಿಪಂತ, ವಿಸಾಜಿ ಪಂತ, ರಾಮಚಂದ್ರಪಂತ,** ಮೊದಲಾದ ಸರದಾರರೂ ಈ ಮಾಧವರಾಯನ ಕಾಲದಲ್ಲಿ ಹೆಸರಿಗೆ ಬಂದರು



**ನಾನಾಫಡಣವೀಸ**

# ೪ನೆಯ ಪಾಠ

## ೫ನೆಯ ಪೇಶವೆ ನಾರಾಯಣರಾಯ

(ಕ್ರಿ. ಶ. ೧೭೭೨-೧೭೭೩)

**೧. ನಾರಾಯಣರಾಯನು ಪೇಶ್ವೆಯಾದದ್ದು:—** ಮಾಧವರಾಯನಿಗೆ ಮಕ್ಕಳಿಲ್ಲ. ಆದದರಿಂದ ಅವನ ತರುವಾಯ ಅವನ ತಮ್ಮನಾದ **ನಾರಾಯಣರಾಯ**ನಿಗೆ ಪೇಶವೆಪದವು ದೊರೆಯಿತು. ನಾರಾಯಣರಾಯನಾದರೂ ಚಿಕ್ಕವನಿದ್ದವರಿಂದ ರಘುನಾಥರಾಯನೇ ಕಾರಭಾರವನ್ನು ಸಾಗಿಸಹತ್ತಿದನು. ಕೆಲದಿನ ಕಕ್ಕ-ಮಕ್ಕಳು ಪ್ರೇಮದಿಂದ ನಡೆದುಕೊಂಡರು

ಆದರೆ ನಾರಾಯಣರಾಯನು ಪೇಶವೆಯಾದದ್ದು ಆನಂದೀಬಾಯಿಗೆ ಸಹನವಾಗಲಿಲ್ಲ. ಆಕೆಯ ದುರಾಗ್ರಹಕ್ಕೆ ಬಲಿಬಿದ್ದು ರಘುನಾಥರಾಯನು ತಾನು ಪೇಶವೆಯಾಗಬೇಕೆಂದು ಪುನಃ ಪ್ರಯತ್ನಿಸಹತ್ತಿದನು. ಇದಕ್ಕಾಗಿ ಅವನು ಹೈದರ-ನಿಜಾಮರೊಡನೆ ಒಳಸಂಚು ನಡೆಸಿದನು. ಈ ಸುದ್ದಿಯು ನಾರಾಯಣರಾಯನಿಗೆ ತಿಳಿಯಲು ಅವನು ಸಿಟ್ಟಾಗಿ ರಘುನಾಥರಾಯನನ್ನು ಬಿಗಿಯಾಗಿ ಸೆರೆಯಲ್ಲಿಟ್ಟನು.

ನಾರಾಯಣರಾಯನಲ್ಲಿ ಕರ್ತೃತ್ವವಾಗಲಿ, ಸಮಾಧಾನದಿಂದಲೂ ಯುಕ್ತಿಯಿಂದಲೂ ಕೆಲಸ ಮಾಡಿಕೊಳ್ಳುವ ಗುಣವಾಗಲಿ ಇರಲಿಲ್ಲ. ಅಲ್ಲದೆ ಇವನು ದುರಾಗ್ರಹಿಯೂ ಸಿಟ್ಟಿನವನೂ ಆಗಿದ್ದನು. ಆದದರಿಂದ ಅಧಿಕಾರಿಗಳ ಮೇಲೆ ಇವನ ವರ್ಚಸ್ಸು ನೆಲೆಗೊಳ್ಳಲಿಲ್ಲ.

**೨. ನಾರಾಯಣರಾಯನನ್ನು ತಳ್ಳುವ ಒಳಸಂಚು :—** **ಸಖಾರಾಮಬಾಪು** ಮೊದಲಾದ ಸರದಾರರು ರಘುನಾಥರಾಯನನ್ನು ಸೌಮ್ಯತನದಿಂದ ನಡೆಯಿಸಿಕೊಳ್ಳಬೇಕೆಂದು ನಾರಾಯಣರಾಯನಿಗೆ ತಿಳಿಸಿದರೂ ಅವನು ಕೇಳಲಿಲ್ಲ. ಆಗ ಸಖಾರಾಮಬಾಪು, ಚಿಂತೋ ವಿಠಲ, ಆನಂದೀಬಾಯಿ ಮೊದಲಾದವರು ರಘುನಾಥರಾಯನನ್ನು ಬಿಡಿಸಿಕೊಂಡು ನಾರಾಯಣರಾಯನನ್ನೇ ಸೆರೆಹಿಡಿಯುವ ಒಳಸಂಚನ್ನು ಹೂಡಿದರು. ಇದಕ್ಕಾಗಿ ಅವರು ಗಾರ್ದಿಗಳಲ್ಲಿ ಮುಖ್ಯಸ್ಥರಾದ **ಸುಮೇರಸಿಂಗ** ಮೊದಲಾದವರನ್ನು ತಮ್ಮ ಕಡೆಗೆ ಮಾಡಿಕೊಂಡು, ಪೇಶವೆಯನ್ನು ಸೆರೆಹಿಡಿಯುವ ಕೆಲಸವನ್ನು

ಕಡೆಗಾಣಿಸಿದರೆ ೫ ಲಕ್ಷ ರೂಪಾಯಿಗಳನ್ನು ಅವರಿಗೆ ಕೊಡತಕ್ಕದ್ದೆಂದು ಗೊತ್ತುಮಾಡಿದರು. ಬಳಿಕ ಈ ಸಂಚುಗಾರರು ನಾರಾಯಣರಾಯನನ್ನು ಹಿಡಿಯಬೇಕೆನ್ನುವ ಹಾಗೆ ರಘುನಾಥರಾಯನಿಂದ ಹುಕುಮನ್ನು ಸಹ ಬರೆಯಿಸಿಕೊಂಡರು.

೩. **ನಾರಾಯಣರಾಯನ ಕೊಲೆ**:- ನಾರಾಯಣರಾಯನನ್ನು ಹಿಡಿಯಬೇಕು ಎಂದು ಬರೆದ ಹುಕುಮು ಗಾರ್ದಿಗಳ ಕೈಗೆ ಇನ್ನೂ ಬಿದ್ದಿರಲಿಲ್ಲ. ಆನಂದಿಬಾಯಿಯು ಹೊತ್ತುಸಾಧಿಸಿ ಆಹುಕುಮಿನೊಳಗಿದ್ದ **ಧರಾವೆ** (ಹಿಡಿಯಬೇಕು) ಎಂಬವರಲ್ಲಿಯ **ಧ**ಕಾರವನ್ನು ತೆಗೆದು ಅಲ್ಲಿ **ಮಾ**(ಮಾರಾವೆ = ಕೊಲ್ಲಬೇಕು) ಕಾರವನ್ನು ಬರೆದು ಅದನ್ನು ಗಾರ್ದಿಗಳಿಗೆ ಕೊಟ್ಟು, ಇದರಂತೆ ನೀವು ಕೆಲಸ ಪಾರುಗಾಣಿಸಿರಿ; ನಿಮಗೆ ೫ ಲಕ್ಷ ರೂಪಾಯಿಗಳ ಜೊತೆಗೆ ಸಾಷ್ಟಿ, ಪುರಂದರ, ಅಹಮ್ಮದನಗರ ಈಮೂರು ಕೋಟೆಗಳನ್ನು ಕೊಡುವೆನು; ಎಂದು ಹೇಳಿದಳು. ಗಾರ್ದಿಗಳು ನಾರಾಯಣರಾಯನನ್ನು ಕೊಲ್ಲುವ ನಿಶ್ಚಯ ಮಾಡಿದರು. ಒಂದುದಿನ ಮಧ್ಯಾಹ್ನದಲ್ಲಿ ಅವರು ಅಕಸ್ಮಾತ್ತಾಗಿ ಅರಮನೆಯ ಕಾವಲುಗಾರರ ಮೇಲೆ ಬಿದ್ದು, ಅವರನ್ನು ಕೊಂದು ಅರಮನೆಯನ್ನು ಹೊಕ್ಕು, ನೆಟ್ಟಗೆ ನಾರಾಯಣರಾಯನಿದ್ದೆಡೆಗೆ ಹೋಗಿ, ಅವನನ್ನು ಹಿಡಿದೆಳೆದು ಕಡಿದು ಹಾಕಿದರು! ಸ್ವಾಮಿನಿಷ್ಠ ಸೇವಕನಾದ **ಚಾಫಾಜಿಯು** ನಡುವೆ ಬರಲು ಅವನ ಗತಿಯೂ ನಾರಾಯಣರಾಯನಂತೆಯೇ ಆಯಿತು!!

೪. **ಬಾರಾಭಾಯಿಗಳ ಆಳಿಕೆ**:— ನಾರಾಯಣರಾಯನ ನಂತರ ಪೇಶವೆಪದವು ರಘುನಾಥರಾಯನಿಗೆ ಸಿಕ್ಕಿತು ಆದರೂ ಜನರು † 'ಕೊಲೆಗಡಕ ಪೇಶವೆ' ಎಂದು ಧಿಕ್ಕರಿಸುತ್ತಿರುವಾಗ ಅಲ್ಲಿ ಮೋರೆಯೆತ್ತಿಕೊಂಡು ಇರುವದು ಅವನಿಗೆ ಅಸಾಧ್ಯವಾಯಿತು. ಆದದರಿಂದ ಅವನು ಕೆಲವು ದಿನಗಳ ವರೆಗಾದರೂ ಪುಣೆಯಲ್ಲಿರಬಾರದೆಂದು ಹವಣಿಸಹತ್ತಿದನು. ಪೇಶವೆಯರ ಮನೆ ಜಗಳದ ಹೊತ್ತನ್ನು ಸಾಧಿಸಿ ನಿಜಾಮನೂ ಹೈದರನೂ

† ಮಾಧವರಾಯನ ಕಾಲದಿಂದ ನ್ಯಾಯಾಧೀಶನಾಗಿದ್ದ ರಾಮಶಾಸ್ತ್ರಿಯು ಪಂಚರನ್ನು ಕರೆಯಿಸಿ, ನಾರಾಯಣರಾಯನ ಕೊಲೆಯ ವಿಚಾರಣೆಯನ್ನು ಮಾಡಿ, ರಘುನಾಥರಾಯನಿಗೆ ಮರಣದ ಶಿಕ್ಷೆಯೇ ತಕ್ಕದ್ದಾಗಿದೆ" ಎಂದು ನಿರ್ಣಯವನ್ನು ಹೇಳಿದನು.

ಮರಾಠರ ಸೀಮೆಗಳನ್ನು ಆಕ್ರಮಿಸಹತ್ತಿದರು. ಅವರನ್ನು ಹಿಮ್ಮೆಟ್ಟಿಸುವ ನೆವದಿಂದ ರಘುನಾಥರಾಯನು ಪುಣೆಯಿಂದ ಹೊರಬಿದ್ದನು. ನಾರಾಯಣರಾಯನ ಕೊಲೆಯಾದಂದಿನಿಂದ ಅವನ ಪಕ್ಷದ ನಾನಾಫಡಣವೀಸ ಮೊದಲಾದವರು ಹಗಲಿರುಳು ಕಾದಿರುತ್ತಿದ್ದರು. ಸಖಾರಾಮಬಾಪುವು ಸಹ ರಘುನಾಥರಾಯನ ಪಕ್ಷವನ್ನು ಬಿಟ್ಟುಕೊಟ್ಟು ಅವನ ಪೇಶವೆಪದವನ್ನು ಕಸಿದುಕೊಳ್ಳುವ ಕಾರಸ್ಥಾನವನ್ನು ನಡೆಸಿದನು. ಆಗ ನಾನಾ ಫಡಣವೀಸನು ಸಖಾ-ರಾಮ ಬಾಪುವಿನ ಕಡೆಗೆ ಹಿರಿತನವನ್ನೊಪ್ಪಿಸಿದನು. ಬಳಿಕ ಈ ಹನ್ನೆರಡು ಜನ ಮುತ್ಸದ್ದಿಗಳು ಕೂಡಿಕೊಂಡು ರಘುನಾಥರಾಯನ ಅಧಿಕಾರವನ್ನು ಕಿತ್ತಿ ಹಾಕಿದರು. ಮತ್ತು ಛತ್ರಪತಿಯ ಒಪ್ಪಿಗೆಯನ್ನು ಪಡೆದು, ನಾರಾಯಣರಾಯನ ಹೆಂಡತಿಯಾದ + ಗಂಗಾಬಾಯಿಯ ಹೆಸರಿನಿಂದ ಕಾರಭಾರವನನ್ನು ಸಾಗಿಸಹತ್ತಿದರು

ಪುಣೆಯಲ್ಲಿ ತನ್ನ ವಿರುದ್ಧವಾಗಿ ನಡೆದ ಕಾರಸ್ಥಾನದ ಸುದ್ದಿಯು ರಘು-ನಾಥರಾಯನಿಗೆ ತಿಳಿದಕೂಡಲೆ ಅವನು ಹೈದರನೊಡನೆ ಸ್ನೇಹದ ಒಪ್ಪಂದವನ್ನು ಮಾಡಿಕೊಂಡು ಹಿಂದಿರುಗಿದನು. ಅವನಿಗೂ ಬಾರಾಭಾಯಿಗಳ ಸೈನ್ಯಕ್ಕೂ **ಪಂಢರಪುರದ** ನೆರೆಯಲ್ಲಿ ಯುದ್ಧವಾಯಿತು. ಅವರಲ್ಲಿ ತ್ರ್ಯಂಬಕರಾಯನು ಸತ್ತನು. ಆದರೂ ರಘುನಾಥರಾಯನು ಪುಣೆಯಕಡೆಗೆ ಬರುವದು ಅಶಕ್ಯವಾಯಿತು. ಆದದರಿಂದ ಅವನು ಸಿಂಧೆ-ಹೋಳಕರರ ನೆರವಿನ ಆಶೆಯಿಂದ ಉತ್ತರಕ್ಕೆಹೋದನು. ಬಳವಂತರಾಯನು ಅವನ ಬೆನ್ನುಬಿಟ್ಟಿರಲಿಲ್ಲ. ರಘುನಾಥರಾಯನು ಸಿಂಧೆ-ಹೋಳಕರರ ನೆರವು ಸಿಗದೆಯಿದ್ದದರಿಂದ ಗುಜರಾಥದಲ್ಲಿ ಅತ್ತಿತ್ತ ಅಲೆದಾಡುತ್ತಿದ್ದನು. ಮಹೀನದಿಯ ತೀರದಲ್ಲಿ ಬಳವಂತರಾಯನು ರಘುನಾಥರಾಯನನ್ನು ಪೂರ್ಣವಾಗಿ ಸೋಲಿಸಿದನು. ಆಮೇಲೆ ರಘುನಾಥರಾಯನು ಇಂಗ್ಲಿಷರ ಸಹಾಯವನ್ನು ಪಡೆಯುವ ಆಶೆಯಿಂದ ಸುರತಕ್ಕೆ ಹೋದನು.

ಇತ್ತ ಬಾರಾಭಾಯಿಗಳು ಗಂಗಾಬಾಯಿಯ ಹೆಸರಿನಿಂದ ನಡೆಯುತ್ತಿದ್ದ ಕಾರಭಾರವನ್ನು ಬಾಲ ಪೇಶವೆಯಾದ **ಸವಾಯಿ ಮಾಧವರಾಯನ** ಹೆಸರಿನಿಂದ ಅವನು ಹುಟ್ಟಿದ ೪೦ನೇ ದಿವಸದಿಂದ ಸಾಗಿಸಹತ್ತಿದರು. ಈ ಸವಾಯಿ ಮಾಧವರಾಯನೇ ಆರನೆಯ ಪೇಶವೆಯು.

---

+ ನಾರಾಯಣರಾವ ಸಾಯುವಾಗ ಅವನ ಹೆಂಡತಿ ಗಂಗಾಬಾಯಿ ಬಸರಿದ್ದಳು. ಸುದೈವದಿಂದ ಆಕೆಗೆ ಗಂಡು ಕೂಸು ಹುಟ್ಟಿತು. ಆ ಕೂಸಿಗೆ ಸವಾಯಿ ಮಾಧವರಾಯ ಎಂದು ಹೆಸರಿಟ್ಟರು.

# ೫ನೆಯ ಪಾಠ

## ಮೊದಲನೆಯ ಗವ್ಹರ್ನರ ಜನರಲ್ ವಾರನ್ ಹೆಸ್ಟಿಂಗ್ಸ

( ಕ್ರಿ. ಶ. ೧೭೭೪-೧೭೮೫ )

೧. **ರೆಗ್ಯೂಲೇಟಿಂಗ ಆಕ್ಟ**:— ಕ್ರಿ. ಶ. ೧೭೭೨ ಹೆಸ್ಟಿಂಗ್ಸನು ಈ ಪರಿಯ ಸಾಹಸಗಳನ್ನು ಮಾಡಿ ಹಣ ಕೂಡಿಸಿದರೂ ಕಂಪನಿಯ ಸ್ಥಿತಿಯು ಸುಧಾರಿಸಲಿಲ್ಲ. ಆವದರಿಂದ ಡಾಯರೆಕ್ಟರರು ಇಂಗ್ಲಂಡದ ಸರಕಾರದಲ್ಲಿ ಸಾಲ ಬೇಡಬೇಕಾಯಿತು ಆಗ ಅವರು ಕಂಪನಿಯ ಕಾರಭಾರದ ವಿಚಾರಣೆಯನ್ನು ಮಾಡಿಸಿ, ಅದರ ನಿಜಸ್ಥಿತಿಯನ್ನು ಅರಿತುಕೊಂಡರು. ಮತ್ತು ಪಾರ್ಲಿಮೆಂಟಿನಲ್ಲಿ ಪಾಸಾದ **ರೆಗ್ಯೂಲೇಟಿಂಗ ಆಕ್ಟ** ಎಂಬ ಕಾಯದೆಯಂತೆ ಕಂಪನಿಯ ಮೇಲ್ವಿಚಾರಣೆಯ ಅಧಿಕಾರವನ್ನು ತಮ್ಮಕಡೆಗೆ ಇಟ್ಟುಕೊಂಡು ೧ ಕೋಟಿ ರೂಪಾಯಿ ಸಾಲಕೊಟ್ಟರು. ಈ ರೆಗ್ಯೂ-ಆಕ್ಟಿನ ಕಲಮುಗಳು:- ೧ ಬಂಗಾಲದ ಗವ್ಹರ್ನರನೇ **ಗವ್ಹರ್ನರ ಜನರಲ್** ಎಂಬ ಹೆಸರಿನಿಂದ ಮುಂಬಯಿ, ಮದ್ರಾಸ ಇವುಗಳ ಗವ್ಹರ್ನರರ ಮೇಲಧಿಕಾರಿಯಾಗಿರಬೇಕು ೨. ಗವ್ಹರ್ನರ ಜನರಲ್ ಮತ್ತು ಬೇರೆ ನಾಲ್ವರು ಸಭಾಸದರು, ಈ ಐದು ಜನರಿಂದ ಕೂಡಿದ **ಆಲೋಚನಾ ಸಭೆಯಲ್ಲಿ** ಬಹುಮತದಿಂದ ನಿರ್ಣಯವಾದಂತೆ ಗವ್ಹರ್ನರ ಜನರಲನು ಕಾರಭಾರವನ್ನು ಸಾಗಿಸಬೇಕು ೩ ಕಲಕತ್ತೆಯ ಒಂದು **ವರಿಷ್ಠ ನ್ಯಾಯಾಸನವು** ( ಸುಪ್ರೀಮ ಕೋರ್ಟ ) ಸ್ಥಾಪಿಸಲ್ಪಡಬೇಕು. ಕಂಪನಿಯ ಕೆಲಸಗಾರರ ವಿರುದ್ಧ ಬಂದ ತಕರಾರುಗಳ ವಿಚಾರಣೆಯ ಅಧಿಕಾರವೂ ಇದಕ್ಕೆ ಇರಬೇಕು. ೪. ಗವ್ಹರ್ನರ ಜನರಲ್, ಆಲೋಚನಾ ಸಭೆಯ ಸಭಿಕರು, ನ್ಯಾಯಾಧೀಶರು ಇವರನ್ನೆಲ್ಲ ಇಂಗ್ಲಂಡಿನ ಸರಕಾರದವರೇ ನಿಯಮಿಸಬೇಕು ೫ ಕಂಪನಿಯ ಕೆಲಸಗಾರರು ಕಾಣಿಕೆ, ಲಂಚ ಮುಂತಾದವುಗಳನ್ನು ತೆಗೆದುಕೊಳ್ಳಲಾಗದು ೬. ಕಂಪನಿಯು ಡಾಯರೆಕ್ಟರರನ್ನು ಆಗಾಗ್ಗೆ ಬದಲಿಸಬೇಕು; ಕಂಪನಿಯ ಯಾವ ಸಭಾಸದನಿಗೂ ನಾಲ್ಕಕ್ಕಿಂತ ಹೆಚ್ಚು ಮತಗಳು ಇರಕೂಡದು ಹಿಂದುಸ್ತಾನದಿಂದ ಬಂದ ಪ್ರಕರ್ಣಗಳನ್ನು ಸರಕಾರಕ್ಕೆ ತೋರಿಸಬೇಕು. ೭. ಇಪ್ಪತ್ತು ವರ್ಷಕ್ಕೊಮ್ಮೆ ಕಂಪನಿಯ ಸನದಿನ ಪುನರ್ವಿಚಾರಣೆಯಾಗತಕ್ಕದ್ದು.

**೨. ಹೆಸ್ಟಿಂಗ್ಸನ ತೊಂದರೆಗಳು :—** ರೆಗ್ಯೂಲೇಟಿಂಗ ಆಕ್ಟಿನಂತೆ ವಾರನ್ ಹೆಸ್ಟಿಂಗ್ಸನು ಗವ್ಹರ್ನರ ಜನರಲನಾದನು, ಫ್ರಾನ್ಸಿಸ್, ಕ್ಲ್ಯಾವ್ಹರಿಂಗ, ಮಾನ್ಸನ್, ಬಾರ್ವೆಲ್ ಎಂಬವರು ಆಲೋಚನಾ ಸಭೆಯ ಸಭಾಸದರಾಗಿಯೂ ಇಂಪೇ ಎಂಬವನು ಮುಖ್ಯ ನ್ಯಾಯಾಧೀಶನಾಗಿಯೂ ನಿಯಮಿಸಲ್ಪಟ್ಟರು ಮೊದಲಿನ ಮೂವರು ಸಭಾಸದರಿಗೆ ಹೆಸ್ಟಿಂಗ್ಸನ ಆಳಿಕೆಯ



**ವಾರನ್ ಹೆಸ್ಟಿಂಗ್ಸ**

ಧೋರಣವು ಒಪ್ಪಿರಲಿಲ್ಲ. ಅವರಲ್ಲಿಯ ಫ್ರ್ಯಾನ್ಸಿಸನು ಮುಂದಾಗಿ ಬಹುಮತವನ್ನು ತನ್ನ ಕಡೆಗೆ ಮಾಡಿಕೊಂಡದ್ದರಿಂದ ಹೆಸ್ಟಿಂಗ್ಸನು ತನ್ನ ಇಚ್ಛೆಯಂತೆ ಕಾರಭಾರ ಸಾಗಿಸುವದು ಕಠಿಣವಾಯಿತು ಆದರೆ ಮುಂದೆ ಕ್ರಿ. ಶ ೧೭೭೬ರಲ್ಲಿ ಮಾನ್ಸನನೂ ಮರುವರುಷ ಕ್ಲ್ಯಾವ್ಹರಿಂಗನೂ ಸಾಯಲು ಹೆಸ್ಟಿಂಗ್ಸನ ಕಡೆಗೆ ಬಹುಮತವಾಗಿ ಅವನಿಗಾಗುತ್ತಿದ್ದ ತೊಂದರೆಯು ಇಲ್ಲದಾಯಿತು ಫ್ರ್ಯಾನ್ಸಿಸನ ವಿರೋಧವು ಮಾತ್ರ ಒಪ್ಪಲಿಲ್ಲ.

೩. **ನಂದಕುಮಾರ** :— ಹೆಸ್ಟಿಂಗ್ಸನಿಗೂ ಸಭಾಸದರಿಗೂ ಸೆಟ್ಟ-ಗಿಲ್ಲೆಂಬುದನ್ನು ತಿಳಿದು ಹಲವರು ಅವನ ತಪ್ಪುಗಳನ್ನು ಆರಿಸಹತ್ತಿದರು. **ರಾಜಾ ನಂದಕುಮಾರ** ಎಂಬ ಶ್ರೀಮಂತ ಗೃಹಸ್ಥನು ಡೆಪ್ಯೂಟಿ ನವಾಬರನ್ನು ತೆಗೆದುಹಾಕುವ ಕೆಲಸದಲ್ಲಿ ಹೆಸ್ಟಿಂಗ್ಸನಿಗೆ ನೆರವಾಗಿದ್ದನು. ಆ ಅಧಿಕಾರವು ತನಗೆ ಸಿಗಬೇಕೆಂದು ನಂದಕುಮಾರನ ಅಪೇಕ್ಷೆಯಿತ್ತು. ಆದರೆ ಹೆಸ್ಟಿಂಗ್ಸನು ಡೆಪ್ಯೂಟಿ ನವಾಬರ ಬದಲು ಇಂಗ್ಲಿಷ ಕಲೆಕ್ಟರರನ್ನು ನಿಯಮಿಸಿ ವಸೂಲಿಯ ಕೆಲಸವನ್ನು ಸಾಗಿಸಿದ್ದನು. ಅಂದಿನಿಂದ ನಂದಕುಮಾರನು ಹೆಸ್ಟಿಂಗ್ಸನನ್ನು ದ್ವೇಷಿಸಹತ್ತಿದನು. ಈಗ ಅವನು, ಹೆಸ್ಟಿಂಗ್ಸನು ಮೀರಜಾಫರನ ಹೆಂಡತಿಯಿಂದ ಲಂಚ ತೆಗೆದುಕೊಂಡನೆಂದು ದೂರಿಕೊಂಡನು. ಫ್ರಾನ್ಸಿಸ್ ಮೊದಲಾದವರು ಹೆಸ್ಟಿಂಗ್ಸನು ತಿಂದ ಹಣವನ್ನು ಮರಳಿ ತುಂಬಬೇಕೆಂದು ನಿರ್ಣಯಿಸಿದರೂ ಅವನು ಸೊಪ್ಪುಹಾಕಲಿಲ್ಲ. ಆದದರಿಂದ ಈ ಪ್ರಕರಣವು ಡಾಯರೆಕ್ಟರರ ಕಡೆಗೆ ಹೋಯಿತು. ಇತ್ತ ನಂದಕುಮಾರನ ಮೇಲೆ ಸುಳ್ಳು ಕಾಗದ ಮಾಡಿದ ಒಂದು ಆರೋಪವು ಹೊರಿಸಲ್ಪಟ್ಟಿತು. ಮುಖ್ಯ ನ್ಯಾಯಾ-ಧೀಶನಾದ ಇಂಪೆಯು ಈ ವಿಷಯವಾಗಿ ನಂದಕುಮಾರನ ವಿಚಾರಣೆಯನ್ನು ಸಾಗಿಸಿ ಅವನಿಗೆ ಮರಣದ ಶಿಕ್ಷೆಯನ್ನು ಹೇಳಿದನು. ಕೂಡಲೆ ನಂದಕುಮಾರನು ಗಲ್ಲಿಗೇರಿಸಲ್ಪಟ್ಟನು. ಕ್ರಿ. ಶ. ೧೭೭೮

೪. **ಚೇತಸಿಂಗನನ್ನು ಮುರಿದದ್ದು** :— ಕ್ರಿ. ಶ. ೧೭೭೫ರಲ್ಲಿ ಕಾಶಿಯ ಅರಸನಾದ **ಚೇತಸಿಂಗನು** ಇಂಗ್ಲಿಷರ ಮಾಂಡಲಿಕನಾಗಿ ಅವರಿಗೆ ವರ್ಷಕ್ಕೆ ೨೨॥ ಲಕ್ಷ ರೂ. ಕಪ್ಪ ಕೊಡಹತ್ತಿದ್ದನು. ಕ್ರಿ. ಶ ೧೭೭೮ರಲ್ಲಿ ಕಪ್ಪವಲ್ಲದೆ ೫ ಲಕ್ಷ ರೂಗಳನ್ನು ಹೆಸ್ಟಿಂಗ್ಸನು ಹೆಚ್ಚಿಗೆ ತೆಗೆದುಕೊಂಡನು. ಮತ್ತು ಮರುವರ್ಷ ಅಷ್ಟು ಹಣವನ್ನು ಹೆಚ್ಚಿಗೆ ಬೇಡಿದ್ದಲ್ಲದೆ ಸ್ವಂತದ ವೆಚ್ಚದಿಂದ ಎರಡು ಸಾವಿರ ಕುದುರೆಯ ಸವಾರರನ್ನು ಇಂಗ್ಲಿಷರಿಗೆ ಪೂರೈಸಬೇಕೆಂದು ತಿಳಿಸಿದನು. ಇಷ್ಟು ಸಹಾಯ ಮಾಡುವದು ಚೇತಸಿಂಗನಿಗೆ ಸಾಧ್ಯವಾಗಲಿಲ್ಲ. ಆಗ ಹೆಸ್ಟಿಂಗ್ಸನು ಅವನಿಗೆ ೫೦ ಲಕ್ಷ ರೂ. ದಂಡಕಟ್ಟಿ ಅದನ್ನು ಎತ್ತುವದಕ್ಕಾಗಿ ಕಾಶಿಗೆ ಬಂದು ಚೇತಸಿಂಗನನ್ನು ಸೆರೆಹಿಡಿಯಬೇಕೆಂದು ಅಪ್ಪಣೆಕೊಟ್ಟನು. ಆಗ ಚೇತಸಿಂಗನ ಕಡೆಯವರು ಅವನನ್ನು ಉಳಿಸಿಕೊಂಡು ಹೆಸ್ಟಿಂಗ್ಸನ ಮೇಲೆ ಏರಿಹೋದರು. ಆಗ ಅವನು ಪಾರಾಗಿ ಹೋಗಿ ಹೊಸ ಸೈನ್ಯವನ್ನು ಕರೆಯಿಸಿ

ಕೊಂಡು ಚೇತಸಿಂಗನನ್ನು ತಳ್ಳಿ ಅವನ ರಾಜ್ಯವನ್ನು ಅವನ ತಮ್ಮನ ಮಗನಿಗೆ ಕೊಟ್ಟು ಅವನಿಂದ ೪೦ ಲಕ್ಷ ರೂಪಾಯಿ ಕಪ್ಪವನ್ನು ಸೆಳೆದುಕೊಂಡನು.

೫. **ಬೇಗಮರ ಸುಲಿಗೆ** :— ಸುಜಾಉದ್ದೌಲನ ತರುವಾಯ ಕ್ರಿ. ಶ. **೧೭೭೫**ರಲ್ಲಿ ಅವನ ಮಗನಾದ **ಅಸಫಉದ್ದೌಲನು** ಅಯೋಧ್ಯೆಯ ವಜೀರನಾದನು. ಅವನು ದುರ್ಬಲನಿದ್ದದರಿಂದ ತನ್ನ ರಕ್ಷಣೆಗಾಗಿ ಇಂಗ್ಲಿಷ ಸೈನ್ಯವನ್ನು ಇಟ್ಟುಕೊಂಡನು. ಆ ಸೈನ್ಯದ ವೆಚ್ಚದ ಹಣವನ್ನು ಹೊತ್ತುಹೊತ್ತಿಗೆ ಕೊಡುವದು ಸಹ ಅವನಿಂದ ಆಗುತ್ತಿದ್ದಿಲ್ಲ. ಆದದರಿಂದ ಅವನು + ಬೇಗಮರಾದ ತನ್ನ ತಾಯಿ-ತಮ್ಮಂದಿರಲ್ಲಿ ಹಣ ಬೇಡಹತ್ತಿದನು. ಅವರು ವಜೀರನಿಗೆ ಒಮ್ಮೆ ೨೬ ಲಕ್ಷ ರೂಪಾಯಿಗಳನ್ನೂ, ಇನ್ನು ಹಣ ಬೇಡುವದಿಲ್ಲೆಂದು ಒಪ್ಪಿಕೊಂಡಿದ್ದರಿಂದ ಮತ್ತೊಮ್ಮೆ ೩೦ ಲಕ್ಷ ರೂಪಾಯಿಗಳನ್ನೂ ಕೊಟ್ಟರು. ಆದರೂ ಅವನ ತೊಂದರೆಯು ತಪ್ಪಲಿಲ್ಲ ವಜೀರನು ೧ ಕೋಟಿ ರೂಪಾಯಿಗಳನ್ನು ಹೆಸ್ಟಿಂಗ್ಸನಿಗೆ ಕೊಡಬೇಕಾಯಿತು ಆಗ ಅವನು ಬೇಗಮರ ಹಣವನ್ನು ಒತ್ತಾಯದಿಂದ ಸೆಳೆದುಕೊಳ್ಳುವದಕ್ಕಾಗಿ ಹೆಸ್ಟಿಂಗ್ಸನ ಒಪ್ಪಿಗೆಯಿಂದ ಇಂಗ್ಲಿಷ ಸೈನಿಕರನ್ನು ನೆರವಿಗೆ ಕರೆಯಿಸಿಕೊಂಡನು ಬಳಿಕ ಆ ಸೈನಿಕರು ಬೇಗಮರನ್ನೂ ಅವರ ಪರಿವಾರವನ್ನೂ ಪರಿಪರಿಯಿಂದ ಕಾಡಿ ಅವರಿಂದ **೭೫** ಲಕ್ಷ ರೂ. ಗಳನ್ನು ಸೆಳೆದುಕೊಂಡರು. ಈ ಪ್ರಸಂಗದಲ್ಲಿ ಬೇಗಮರ ದುಃಸ್ಥಿತಿಯನ್ನು ಕಂಡು ವಜೀರನಿಗೆ ಕಳವಳವೆನಿಸಿದರೂ ಆ ಕಷ್ಟವನ್ನು ತಪ್ಪಿಸುವದು ಅವನಿಗೂ ಅಸಾಧ್ಯವಾಯಿತು. ಬೇಗಮರಿಂದ ಸೆಳೆದುಕೊಂಡ ಹಣವು ವಜೀರನದಾಗಿ ಹೆಸ್ಟಿಂಗ್ಸನ ಕೈಸೇರಿತು.

---

+ ಬೇಗಮರು ತಮ್ಮ ಸಂಪತ್ತನ್ನು ಕಾದುಕೊಂಡು ಫೈಜಾಬಾದಲ್ಲಿ ಇರಹತ್ತಿದರು.

# ೬ ನೆಯ ಪಾಠ

## ವಾರನ್ ಹೆಸ್ಟಿಂಗ್ಸ ( ಮುಂದೆ ಸಾಗಿದ್ದು )

೧. **ಮರಾಠರ ಮೊದಲನೆಯ ಯುದ್ಧ:**— ಕ್ರಿ. ಶ. **೧೭೭೫–೧೭೮೨** ರಘುನಾಥರಾಯನು + ಸುರತಕ್ಕೆ ಬಂದು ಇಂಗ್ಲಿಷರೊಡನೆ ಒಪ್ಪಂದಮಾಡಿಕೊಂಡನು. ರೆಗ್ಯೂಲೇಟಿಂಗ ಆಕ್ಟಿನಿಂದ, ಮುಂಬಯಿಯ ಗವ್ಹರ್ನರನು ಕಲಕತ್ತೆಯ ಗವ್ಹರ್ನರಜನರಲನಿಗೆ ಅಂಕಿತನಾಗಿ ನಡೆಯಬೇಕೆಂದು ಗೊತ್ತಾಗಿತ್ತು ಎಂದರೆ ಸುರತದ ಒಪ್ಪಂದವನ್ನಾಗಲಿ ಮರಾಠರೊಡನೆ ಯುದ್ಧವನ್ನಾಗಲಿ ಅವನು ಗವ್ಹ. ಜನರಲ್ಲನ ಒಪ್ಪಿಗೆಯಿಂದಲೇ ಮಾಡಬೇಕಿತ್ತು. ಆದರೆ ಅವನು ಹಾಗೆ ಮಾಡಲಿಲ್ಲ; ಆದ್ದರಿಂದ ಗವ್ಹ. ಜನರಲ್ಲನಾದ ವಾರನ್ ಹೆಸ್ಟಿಂಗ್ಸನು 'ರಘುನಾಥರಾಯನ ಪಕ್ಷವನ್ನು ಬಿಡಬೇಕು' ಎಂದು ಮುಂಬಯಿಯ ಗವ್ಹರ್ನರನಿಗೆ ತಿಳಿಸಿ **ಅಪ್ಟನ್** ಎಂಬವನನ್ನು ಪುರಂದರಕ್ಕೆ ಕಳುಹಿ, ಪುಣೆಯ ದರಬಾರಿನವರೊಡನೆ ಒಪ್ಪಂದ ಮಾಡಿಕೊಂಡನು. ಕ್ರಿ. ಶ **೧೭೭೬ ಪುರಂದರದ ಒಪ್ಪಂದ**ದಿಂದ ೧. ಇಂಗ್ಲಿಷರು ರಘುನಾಥರಾಯನ ಪಕ್ಷವನ್ನು ಬಿಡಬೇಕು. ೨. ಸಾಷ್ಟಿ ಪ್ರಾಂತವನ್ನೂ ೧೨ ಲಕ್ಷ ರೂ. ಗಳನ್ನೂ ದರಬಾರಿನವರು ಇಂಗ್ಲಿಷರಿಗೆ ಕೊಡಬೇಕು; ಎಂದು ಗೊತ್ತಾಯಿತು.

ಆದರೆ **ಪುರಂದರದಒಪ್ಪಂದ**ದಂತೆ ಮುಂಬಯಿಯ ಗವ್ಹರ್ನರನು ರಘುನಾಥರಾಯನ ಪಕ್ಷವನ್ನು ಬಿಡಲಿಲ್ಲ. ಅವನು **ಸುರತದ ಒಪ್ಪಂದಕ್ಕೆ** ಇಂಗ್ಲಂಡ ಸರಕಾರದ ಸಮ್ಮತಿಯನ್ನು ಪಡೆದು ಯುದ್ಧವನ್ನು ಸಾಗುಮಾಡಿದನು **ಸ್ಟುಅರ್ಟ** ಎಂಬವನು ಬೋರಘಟ್ಟದ ಮಾರ್ಗವಾಗಿ ಪುಣೆಯ ಕಡೆಗೆ ಸಾಗಿಬಂದನು. **ಕಾರ್ಲೆಯ** ಹತ್ತರ ಮರಾಠರೊಡನೆ ಆದ ಯುದ್ಧದಲ್ಲಿ ಸ್ಟುಅರ್ಟನು ಕೊಲ್ಲಲ್ಪಟ್ಟನು. ಆಮೇಲೆಯೂ ಅವನ ಸೈನ್ಯವು ತಳೆಗಾವದವರೆಗೆ ಮುಂದರಿದು ಬಂದಿತು. ಆದರೆ ಅಲ್ಲಿ ಮರಾಠ ಸೈನ್ಯವು ಅದನ್ನು ಸುತ್ತುಗಟ್ಟಿದ್ದರಿಂದ ಮುಂದು ಗಾಣದೆ ಇಂಗ್ಲಿಷರು **ವಡಗಾವದ** ಒಪ್ಪಂದ ಮಾಡಿಕೊಂಡರು. ಈ ಒಪ್ಪಂದದ

---

+ ಇಂಗ್ಲಿಷರು ರಘುನಾಥರಾಯನಿಗೆ ಪೇಶವೆ ಪದವನ್ನು ಕೊಡಿಸಬೇಕು. ರಘುನಾಥರಾಯನು ಪ್ರತಿತಿಂಗಳಿಗೆ ಸೈನ್ಯದ ವೆಚ್ಚಕ್ಕಾಗಿ ೧॥ ಲಕ್ಷ ರೂಪಾಯಿಗಳನ್ನು ಕೊಡಬೇಕಲ್ಲದೆ ಸಾಷ್ಟಿವಸಯಿಗಳನ್ನೂ, ಭಡೋಚ ಮುಂತಾದ ೧೯ ಲಕ್ಷದ ಸೀಮೆಯನ್ನೂ ಇಂಗ್ಲಿಷರಿಗೆ ಕೊಡತಕ್ಕದ್ದು.

ಕರಾರುಗಳು- ೧. ಇಂಗ್ಲಿಷರು ರಘುನಾಥರಾಯನನ್ನು ಪೇಶವೆಯ ಕಡೆಗೆ ಒಪ್ಪಿಸಬೇಕು. ೨. ಸಾಷ್ಟಿ ಮೊದಲಾದ ಎಲ್ಲಸ್ಥಾನಗಳನ್ನು ಬಿಟ್ಟುಕೊಡಬೇಕು ೩. ಕಲಕತ್ತೆಯಿಂದ ಬರುತ್ತಿದ್ದ ಇಂಗ್ಲಿಷ ಸೈನ್ಯವನ್ನು ಮರಳಿ ಕಳಿಸಬೇಕು. ಈ ಕರಾರುಗಳು ಪೂರ್ಣವಾಗುವ ವರೆಗೆ ಇಬ್ಬರು ಇಂಗ್ಲಿಷ ಅಧಿಕಾರಿಗಳನ್ನು ಮರಾಠರ ವಶಕ್ಕೆ ಕೊಡಬೇಕು.

ಈ ಒಪ್ಪಂದದಂತೆಯೂ ಇಂಗ್ಲಿಷರು ನಡೆಯಲಿಲ್ಲ. ಆದದರಿಂದ ನಾನಾ ಫಡಣವೀಸನು ಹೈದರ-ನಿಜಾಮರೊಡನೆ ಒಕ್ಕಟ್ಟು ಮಾಡಿಕೊಂಡು ಇಂಗ್ಲಿಷರಿಗೆ ಚೆನ್ನಾಗಿ ಕೈತೋರಿಸಬೇಕೆಂದು ನಿಶ್ಚಯಿಸಿದನು ಹೈದರ-ನಿಜಾಮರು ಮದ್ರಾಸದಮೇಲೆ, ಸಿಂಧೆ ಭೋಸಲೆಯರು ಬಂಗಾಲದಮೇಲೆ, ಪೇಶವೆಯರು ಮುಂಬಯಿಯ ಮೇಲೆ ಸಾಗತಕ್ಕದ್ದೆಂದು ಗೊತ್ತಾಯಿತು. ಆದರೆ ಇಂಗ್ಲಿಷರು ಗುಂಟೂರ ಪ್ರಾಂತವನ್ನು ಮರಳಿ ಕೊಟ್ಟದ್ದರಿಂದ ನಿಜಾಮನೂ ೧೬ ಲಕ್ಷ ರೂಪಾಯಿಗಳನ್ನು ಕೊಟ್ಟದ್ದರಿಂದ ಭೋಸಲೆಯೂ ಈ ಕಟ್ಟಿನಿಂದ ಜಾರಿ ಸುಮ್ಮನಾದರು.

ಉತ್ತರದಲ್ಲಿ **ಪೋಫ್ಯಾಮನು** ಗ್ವಾಲ್ಹೇರ ಕೋಟೆಯನ್ನು ಹಿಡಿದು ಕೊಂಡು ಮಾಳವದಮೇಲೆ ಸಾಗಿ ಬಂದನು. ಆಗ ಸಿಂಧೆಯು ಅತ್ತ ಸಾಗಿ ಅವನನ್ನು ಹಿಮ್ಮೆಟ್ಟಿಸಿದನು. ಗಾಡರ್ಡನು ಗುಜರಾಥದಿಂದ ದಕ್ಷಿಣಕ್ಕೆ ಬಂದು ಮುಂಬಯಿಯ ಸೈನ್ಯವನ್ನು ಕೂಡಿಕೊಂಡು ಪುಣೆಯ ಕಡೆಗೆ ಬರಹತ್ತಿದನು ಅವನು ಖಂಡಾಳೆಯ ಬಳಿಯಲ್ಲಿರುವಾಗ ಹಿಂದುಗಡೆಯಿಂದ ಹೋಳಕರ-ಪಟವರ್ಧನರೂ ಮುಂದುಗಡೆಯಿಂದ ಹರಿಪಂತನೂ ಅವನ ಸೈನ್ಯವನ್ನು ಧುಮುಕಿದರು. ಮುಂಬಯಿಯಿಂದ ಇಂಗ್ಲಿಷ ಸೈನ್ಯಕ್ಕೆ ಸಿಗುವ ನೆರವು ಕಟ್ಟಾಯಿತು ಹೀಗೆ ಇಕ್ಕಟ್ಟಿನಲ್ಲಿ ಸಿಕ್ಕದ್ದರಿಂದ ಗಾಡರ್ಡನು ಹಿಂದಿರುಗಿ ಹಂಚಿಕೆಯಿಂದ ಪಾರಾಗಿ ಸೈನ್ಯದೊಂದಿಗೆ ಮುಂಬಯಿಗೆ ನಿಲುಕಿದನು.

ಹಲವು ಸರತಿ ಪ್ರಯತ್ನಿಸಿದರೂ ಮರಾಠರನ್ನು ಮುರಿಯಲು ಆಗಲಿಲ್ಲ. ಅಲ್ಲದೆ ಇದೇ ಹೊತ್ತಿಗೆ ಹೈದರನು ಮದ್ರಾಸದಮೇಲೆ ಸಾಗಿ ಬರಹತ್ತಿದನು. ಆದದರಿಂದ ವಾರನ್ ಹೇಸ್ಟಿಂಗ್ಸನು ಮಹದಾಜಿಯ ದಿಲ್ಲಿಯ ವರ್ಚಸ್ಸಿಗೆ ಒಪ್ಪಿ, ಅವನನ್ನು ಸಮಾಧಾನಗೊಳಿಸಿ, ಅವನ ಸಹಾಯದಿಂದ ಪೇಶ್ವೆಯೊಡನೆ

**ಸಾಲಬಾಯಿ** ಎಂಬಲ್ಲಿ † ಒಪ್ಪಂದ ಮಾಡಿಕೊಂಡನು. ಕ್ರಿ. ಶ. ೧೭೮೨. ಈ ಒಪ್ಪಂದದ ಕರಾರುಗಳು- ೧ ಇಂಗ್ಲಿಷರು ರಘುನಾಥರಾಯನ ಪಕ್ಷವನ್ನು ಬಿಡಬೇಕು. ಅವನು ವರ್ಷಕ್ಕೆ ೩೦ಲಕ್ಷ ರೂಪಾಯಿ ವೇತನಹೊಂದಿ ಕೋಪರಗಾವದಲ್ಲಿ ಸ್ವಸ್ಥವಾಗಿ ಇರಬೇಕು ೦. ಸಾಷ್ಟಿಯೊಂದನ್ನು ಮಾತ್ರ ಇಂಗ್ಲಿಷರು ಇಟ್ಟುಕೊಂಡು ಉಳಿದ ಸೀಮೆಗಳನ್ನು ಬಿಟ್ಟು ಬಿಡಬೇಕು. ೩. ಗಾಯಕವಾಡನು ಪೇಶವೆಯರಿಗೆ ಕಪ್ಪವನ್ನು ಕೊಟ್ಟು ತನ್ನ ಸೀಮೆಯ ಕಾರಭಾರವನ್ನು ಸಾಗಿಸಬೇಕು ೪. ಒಬ್ಬರ ಶತ್ರುಗಳಿಗೆ ಇನ್ನೊಬ್ಬರು ನೆರವಾಗಕೂಡದು.

**೨. ಮೈಸೂರಿನ ಎರಡನೆಯ ಯುದ್ಧ:**- ಕ್ರಿ ಶ. **೧೭೮೦ ೧೭೮೪**

**ಕಾರಣ**- ಮಾಧವರಾಯನು ಹಲವು ಸಾರೆ ಸಾಗಿ ಬಂದರೂ ಮದ್ರಾಸದ ಒಪ್ಪಂದದಂತೆ ಇಂಗ್ಲಿಷರು ಹೈದರನಿಗೆ ನೆರವಾಗಲಿಲ್ಲ. ಇದರಿಂದ ಹೈದರನು ಅವರಮೇಲೆ ಸಿಟ್ಟಾಗಿದ್ದನು. ಯುರೋಪದಲ್ಲಿ ಇಂಗ್ಲಿಷ-ಫ್ರೇಂಚರಲ್ಲಿ ಯುದ್ಧವು ಆರಂಭವಾಗಲು ಇಂಗ್ಲಿಷರು ಹೈದರನ ಒಪ್ಪಿಗೆಯಿಲ್ಲದೆ ಅವನ ರಾಜ್ಯದೊಳಗಿನ ಫ್ರೇಂಚರ **ಮಾಹಿ** ಬಂದರವನ್ನು ವಶಮಾಡಿಕೊಂಡರು. ಹೈದರನಿಗೆ ಈ ಮಾಹಿ ಬಂದರದಿಂದ ಯುದ್ಧ ಸಾಮುಗ್ರಿಯು ದೊರೆಯುತ್ತಿತು. ಮರಾಠರೂ ನಿಜಾಮನೂ ಇಂಗ್ಲಿಷರ ಮೇಲೆ ಸಾಗಲು ಒಪ್ಪಿದ್ದರಿಂದ ಹೈದರನು ಹುರುಪುಗೊಂಡು ಇಂಗ್ಲಿಷರ ಕೂಡ ಯುದ್ಧಮಾಡಲು ಅನುವಾದನು.

**ಯುದ್ಧಗಳು :**— ಹೈದರನು ಮದ್ರಾಸದ ಕಡೆಗೆ ಸಾಗುತ್ತಿರಲು ದಾರಿಯಲ್ಲಿ ಎದುರಾದ **ಬೇಲಿ** ಎಂಬವನ ಸೈನ್ಯವನ್ನು ನಾಶಗೊಳಿಸಿ ಅವನನ್ನು ಸೆರೆ ಹಿಡಿದನು. ಬಳಿಕ ಹೈದರನು ಆರ್ಕಾಟ, ವೆಲೂರಗಳನ್ನು ವಶಮಾಡಿಕೊಂಡು **ಪಾಂಡಿಚೇರಿ**ಯನ್ನು ಮುತ್ತಿದನು.

ಈ ರೀತಿ ಹೈದರನು ಪ್ರಬಲನಾಗುವದನ್ನು ಕಂಡು ವಾರನ್ ಹೆಸ್ಟಿಂಗ್ಸನು ಮರಾಠರ ಸಂಗಡ ನಡೆದ ಯುದ್ಧವನ್ನು ನಿಲ್ಲಿಸಿ **ಸರ್ ಆಯರ ಕೂಟ**ನನ್ನು ಮದ್ರಾಸಿಗೆ ಕಳುಹಿದನು. ಕೂಟನು ಶೌರ್ಯದಿಂದ ಕಾದಿ ಹೈದರನನ್ನು

---

† ಹೈದರನಿಗೆ ತಿಳಿಸದೆ ಒಪ್ಪಂದದ ಕಾಗದಕ್ಕೆ ಸಹಿಹಾಕಬಾರದೆಂದು ನಾನಾಫಡಣವೀಸನ ಮನಸ್ಸಿನಲ್ಲಿತ್ತು. ಆದಕ್ಕಾಗಿ ಅವನು ಸಹಿಮಾಡುವದನ್ನು ಬಿಟ್ಟಿದ್ದನು. ಆದರೆ ಅಷ್ಟರಲ್ಲಿ ಹೈದರನು ಮರಣ ಹೊಂದಿದ ಸುದ್ದಿಯು ತಿಳಿಯಿತು. ಆಮೇಲೆಯೇ ಒಪ್ಪಂದಕ್ಕೆ ಸಹಿಹಾಕಿದನು.

**ಪೋರ್ಟೋನೋವ, ಪೋಲಿಲೂರ, ಸೋಲಿನುಗಡ** ಇವುಗಳ ಬಳಿಯಲ್ಲಿ ಸೋಲಿಸಿದನು. ಆದರೂ ಹೈದರನು ಎದೆಗುಂದಲಿಲ್ಲ. ಅಷ್ಟರಲ್ಲಿ ಅವನಿಗೆ ಫ್ರೆಂಚರ ನೆರವೂ ಸಿಕ್ಕಿತು. ಆಗ ಅವನು ಅವರ ನೆರವಿನಿಂದ ಕಡಲೂರನ್ನು ವಶಮಾಡಿಕೊಂಡನು. ಟೀಪು ತಂಜಾವರದಲ್ಲಿದ್ದ **ಬ್ರೇಥವೇಟನ** ಸೈನ್ಯವನ್ನು ನುಗ್ಗು ಮಾಡಿದನು.

ಹೀಗಿರಲು ಕ್ರಿ. ಶ. **೧೭೮೨**ನೆಯ ವರುಷದ ಕಡೆಯ ಸುಮಾರಕ್ಕೆ ಹೈದರನು ಆಕಸ್ಮಿಕವಾಗಿ ಮರಣಹೊಂದಿದನು. ಇದೇಸಮಯಕ್ಕೆ ಶೂರನಾದ ಸರ್ ಆಯರ್ ಕೂಟನೂ ಮಡಿದನು. ನಾಲ್ಬಾಯಿ ಒಪ್ಪಂದವಾದಬಳಿಕ ಮುಂಬಯಿಯ ಇಂಗ್ಲಿಷ ಸೈನ್ಯವು ಮಲಬಾರ ದಂಡೆಗೆ ಬಂದು ಟೀಪುವಿನ ರಾಜ್ಯವನ್ನು ಸೇರಿತು. ಆಗ ಟೀಪುವು ಭರದಿಂದ ಪಶ್ಚಿಮಕ್ಕೆ ಸಾಗಿ ಆ ಸೈನ್ಯವನ್ನು ಎದುರಿಸುತ್ತ ಮಂಗಳೂರನ್ನು ಹಿಡಿದುಕೊಂಡನು. ಇತ್ತ ಮದ್ರಾಸದ ಸೈನ್ಯವು ಶ್ರೀರಂಗ ಪಟ್ಟಣದ ವರೆಗೆ ಸಾಗಿ ಬಂದಿತು. ಆದರೆ ಈ ಹೊತ್ತಿಗೆ ಎರಡೂ ಪಕ್ಷದವರಿಗೆ ಯುದ್ಧವು ಬೇಸರವೆನಿಸಿತ್ತು. ಆದದರಿಂದ ಮಂಗಳೂರಲ್ಲಿ ಒಪ್ಪಂದವಾಗಿ, ಹಿಡಿದುಕೊಂಡ ಸೀಮೆಗಳನ್ನೂ ಸೆರೆಯಾಳು ಗಳನ್ನೂ ಇಬ್ಬರೂ ಬಿಟ್ಟು ಬಿಡಬೇಕೆಂದು ಗೊತ್ತಾಯಿತು. ಕ್ರಿ. ಶ. **೧೭೮೪.**

**೩. ಹೈದರನ ಯೋಗ್ಯತೆ** :— ಇವನು ಹೆಸರಾದ ವೀರನೂ ಕರ್ತೃತ್ವಶಾಲಿಯೂ ಆಗಿದ್ದನು. ಸ್ವಪರಾಕ್ರಮದಿಂದಲೇ ರಾಜ್ಯಾಧಿಕಾರವನ್ನು ಪಡೆದನು. ಪೂರ್ವ ವಯಸ್ಸಿನಲ್ಲಿ ಬಡತನ-ಕಷ್ಟಗಳನ್ನು ಅನುಭವಿಸಿದ್ದರಿಂದ ಅನುಭವಿಕನೂ ಎದೆಗಾರನೂ ಆಗಿದ್ದನು. ಮುತ್ಸದ್ದಿಯೆನಿಸಿ ಚಾತುರ್ಯದಿಂದ ಕಾರಭಾರವನ್ನು ಸಾಗಿಸಿದನು. ಓದು-ಬರೆಹಗಳನ್ನು ಕಲಿತವನಲ್ಲದಿದ್ದರೂ ಕನ್ನಡ, ತೆಲಗು, ತಮಿಳು, ಮರಾಠಿ, ಹಿಂದಿ ಈ ಭಾಷೆಗಳನ್ನು ಅರಿತಿದ್ದನು. ಸುಧಾರಿಸಿದ ಯುದ್ಧ ಪದ್ಧತಿ ಮತ್ತು ಯುದ್ಧ ಸಾಧನ ಇವುಗಳಿಂದ ತನ್ನ ಸೈನ್ಯಕ್ಕೆ ಹೊಸ ರೂಪವನ್ನು ಕೊಟ್ಟ ಮೊದಲನೇ ಹಿಂದೀ ವೀರನು ಇವನೇ.

**೪. ಪಿಟ್ಟನ ಇಂಡಿಯಾ ಬಿಲ್ಲು** :— ಹೆಸ್ಟಿಂಗ್ಸನು ಅನ್ಯಾಯ ಒತ್ತಾಯಗಳನ್ನು ಬಹಳವಾಗಿ ನಡೆಸಿರುವನೆಂಬ ಬೊಬ್ಬಾಟವು ಇಂಗ್ಲಂಡ ದಲ್ಲಿಯೂ ಆಯಿತು. ಅದೇ ಸಮಯಕ್ಕೆ ಎಂದರೆ ಕ್ರಿ. ಶ. **೧೭೮೩** ರಲ್ಲಿ

ಅಮೇರಿಕೆಯು ಇಂಗ್ಲಂಡದ ಮೇಲಧಿಕಾರವನ್ನು ಬಿಸುಟಿ ಸ್ವತಂತ್ರವಾಯಿತು. ಆದದರಿಂದ ಪಾರ್ಲಮೆಂಟಿನ ಲಕ್ಷ್ಯವು ಹಿಂದುಸ್ತಾನದ ಕಡೆಗೆ ಎಳೆಯಿತು. ಆ ಕಾಲದ ಮುಖ್ಯ ಮಂತ್ರಿಯಾದ **ಪಿಟ್** ಎಂಬವನು ಹಿಂದುಸ್ತಾನದ ಸಂಬಂಧದ ಒಂದು ಮಸೂದೆಯನ್ನು ಪಾರ್ಲಿಮೆಂಟದಲ್ಲಿ ಪಾಸು ಮಾಡಿಸಿ ಕೊಂಡನು. ಇದೇ **ಪಿಟ್ಟನ ಇಂಡಿಯಾ ಬಿಲ್** ಎಂಬ ಕಾಯದೆಯು. **ಇದರ ಕಲಮುಗಳು:**— ೧. ಕಂಪನಿಯವರು ಎಂದಿನಂತೆ ವ್ಯಾಪಾರವನ್ನು ತಾವೇ ಸಾಗಿಸಬೇಕು. ೨ ರಾಜ್ಯ ಕಾರಭಾರವನ್ನಾದರೂ ಅವರೇ ಸಾಗಿಸ ಬೇಕು. ಆದರೆ ಆದರ ಮೇಲ್ವಿಚಾರಣೆಯ ಅಧಿಕಾರವು ಪಾರ್ಲಿಮೆಂಟಿನಿಂದ ಗೊತ್ತು ಮಾಡಲ್ಪಟ್ಟ ೬ ಜನರುಳ್ಳ **ಬೋರ್ಡ ಆಫ್ ಕಂಟ್ರೋಲ** ಎಂಬ ಮಂಡಲದ ಕಡೆಗೆ ಇರಬೇಕು. ಈ ಮಂಡಲದ ಒಪ್ಪಿಗೆಯಿಲ್ಲದೆ ಕಂಪನಿ ಯವರು ಯುದ್ಧವನ್ನಾಗಲಿ ಒಪ್ಪಂದವನ್ನಾಗಲಿ ಮಾಡಕೂಡದು ೩. ಗವ್ಹರ್ನರಜನರಲ್ ಮತ್ತು ಸೇನಾಪತಿ ಇವರನ್ನು ಪಾರ್ಲಿಮೆಂಟಿನವರೇ ನಿಯಮಿಸಬೇಕು. ೪. ಗವ್ಹರ್ನರ ಜನರಲ್‌ನು ಸಾಧ್ಯವಿರುವ ವರೆಗೆ ದೇಶೀಯ ಅರಸರ ಜಗಳದಲ್ಲಿ ಕೈಹಾಕಬಾರದು.

**೫. ಹೆಸ್ಟಿಂಗ್ಸನ ವಿಚಾರಣೆ:**— ಹೊಸಕಾಯದೆಯು ಹೆಸ್ಟಿಂಗ್ಸನಿಗೆ ಸರಿಬರಲಿಲ್ಲ. ಕಾಯಿದೆಯು ಪಾಸಾಯಿತೆಂದು ತಿಳಿದ ಕೂಡಲೆ ಅವನು ಕೌನ್ಸಿಲ್ ಸಭಿಕನಾದ **ಮ್ಯಾಕ್ ಫರಸನ್**ನಿಗೆ ಕೆಲಸವನ್ನೊಪ್ಪಿಸಿ ಇಂಗ್ಲಂಡಕ್ಕೆ ಹೊರಟುಹೋದನು. ಅಲ್ಲಿ ಅವನ ಮೇಲಿನ ಆರೋಪಗಳ ವಿಚಾರಣೆಯು ನಡೆಯಿತು. ಫ್ರಾನ್ಸಿಸನು, ಹೆಸ್ಟಿಂಗ್ಸನು ತಪ್ಪುಗಾರನೆಂಬದನ್ನು ಸಿದ್ಧಮಾಡಿದನು. ಬರ್ಕ ಮೊದಲಾದ ಮುತ್ಸದ್ದಿಗಳು ಹೆಸ್ಟಿಂಗ್ಸನ ಕೃತಿಗಳನ್ನು ಕಣ್ಣು ಮುಂದೆ ಕಟ್ಟುವಂತೆ ವರ್ಣಿಸಲು ಅದನ್ನು ಕೇಳಿ ಜನರು ದಿಗಿಲುಗೊಂಡರು ಈ ವಿಚಾರಣೆಯು ಕ್ರಿ. ಶ. **೧೭೮೮** ರಿಂದ ಏಳುವರ್ಷ ನಾಗಿತು. ಆದರೂ ಕಡೆಗೆ ಹೆಸ್ಟಿಂಗ್ಸನು ಎಲ್ಲ ಆರೋಪಗಳಿಂದ ಮುಕ್ತನಾದನು ! ಈ ಕೆಲಸವಲ್ಲಿ ೧೦ ಲಕ್ಷ ರೂಪಾಯಿಗಳು ಅವನ ಕೈಬಿಟ್ಟವು. ಮುಂದೆ ತೀರ ಬಡತನದಲ್ಲಿ ಕಾಲಕಳೆಯುತ್ತಿರಲು ಅವನು ಕ್ರಿ. ಶ. ೧೮೧೮ ರಲ್ಲಿ ಮರಣಹೊಂದಿದನು

**೬. ಹೆಸ್ಟಿಂಗ್ಸನ ಯೋಗ್ಯತೆ:**— ಕ್ಲೈವನ ಕೈಯಲ್ಲಿ ನುರಿತ ಇವನು ಕ್ಲೈವನಂತೆಯೆ ಮಹತ್ವಾಕಾಂಕ್ಷೆಯನ್ನು ತಾಳಿ ಆನನು ಹಾಕಿದ ತಳಹದಿಯ

ಮೇಲೆ **ಕಂಪನಿಯರಾಜ್ಯವೆಂಬ** ಕಟ್ಟಡವನ್ನು ಕಟ್ಟಲಾರಂಭಿಸಿದನು. ತನ್ನ ಆಕಾಂಕ್ಷೆಯನ್ನು ಕಡೆಗಾಣಿಸುವಾಗ ಕ್ಲೈವನಂತೆ ಇವನೂ ಎಂಥ ಕಠಿಣವಾದ ಉಪಾಯವನ್ನಾದರೂ ಅವಲಂಬಿಸಲು ಹಿಂಜರಿಯಲಿಲ್ಲ. ಇಬ್ಬಗೆಯ ಆಳಿಕೆಯಿಂದ ಉಂಟಾದ ಅವ್ಯವಸ್ಥೆಯನ್ನು ಕಳೆದು, ಕಾರಭಾರವನ್ನು ಸುಸೂತ್ರ-ವಾಗಿ ಸಾಗಿಸುವ ಬಿಗಿಯಾದ ಕೆಲಸವನ್ನು ಇವನು ನೆರವೇರಿಸಿದನು. ಇವನು ಇಂಗ್ಲಿಷರ ರಾಜ್ಯವನ್ನು ದೃಢೀಕರಿಸುವ ಮಹತ್ವದ ಕೆಲಸವನ್ನು ಮಾಡಿದನೆಂಬದನ್ನು ನೆನೆದುಕೊಂಡು ಇವನ ಆಳಿಕೆಯಲ್ಲಾದ ಉಳಿದ ತಪ್ಪುಗಳನ್ನು ಕಣ್ಮರೆಮಾಡಿ ಇಂಗ್ಲಿಷ ಜನಾಂಗದವರು ಇವನನ್ನು ನಿರ್ದೋಷಿಯೆಂದು ಬಿಟ್ಟುಬಿಟ್ಟರು.

---

## ೭ನೆಯ ಪಾಠ

**ಲಾರ್ಡ ಕಾರ್ನವಾಲೀಸ.** (ಕ್ರಿ. ಶ. ೧೭೮೬-೧೭೯೩) **ಸರ್ ಜಾನ್ ಶೋಅರ.** (ಕ್ರಿ. ಶ. ೧೭೯೩–೧೭೯೮)

**೧. ಕಾರ್ನವಾಲೀಸನು ಗ. ಜ. ಆದ ಕಾಲದ ಪರಿಸ್ಥಿತಿ :—** ವಾರನ್ ಹೆಸ್ಟಿಂಗ್ಸನು ಕೆಲಸವನ್ನು ಬಿಟ್ಟುಹೋದ ಬಳಿಕ, ಪಾರ್ಲಿಮೆಂಟಿನವರು **ಲಾರ್ಡ ಕಾರ್ನವಾಲೀಸ** ಎಂಬವನನ್ನು ಗ. ಜನರಲನ ಕೆಲಸಕ್ಕೆ ಆರಿಸಿದರು. ಆಗ ಆವನು, "ಪ್ರಸಂಗದಲ್ಲಿ ಕೌನ್ಸಿಲಿನ ಒಪ್ಪಿಗೆಯಿಲ್ಲದೆ ಗ. ಜನರಲನು ತನ್ನ ಅಪೇಕ್ಷೆಯಂತೆ ನಡೆಯಲು ಶಕ್ಯವಾದರೆ ಮಾತ್ರ ನಾನು ಕೆಲಸಮಾಡಲು ಒಪ್ಪುವೆನು" ಎಂದು ಸ್ಪಷ್ಟವಾಗಿ ತಿಳಿಸಿದನು. ಆಗ **ಅಮೆಂಡಿಂಗ ಆಕ್ಟ** ಎಂಬ ಕಾಯಿದೆಯು ಪಾಸಾಗಿ ಕಾರ್ನವಾಲೀಸನ ಬೇಡಿಕೆಯು ಪೂರೈಸಲ್ಪಟ್ಟಿತು. ಅಲ್ಲದೆ, ಇವನು ಅಮೇರಿಕೆಯ ಯುದ್ಧದಲ್ಲಿ ಮಹತ್ವದ ಕೆಲಸಗಳನ್ನು ನೆರವೇರಿಸಿದ್ದನಾದುದರಿಂದ ಸೇನಾಪತಿಯ ಅಧಿಕಾರವು ಸಹ ಇವನಿಗೆ ಕೊಡ-ಲ್ಪಟ್ಟಿತು. ಆ ಬಳಿಕ ಇವನು ಗ ಜ. ಆಗಿ ಹಿಂದುಸ್ಥಾನಕ್ಕೆ ಬಂದನು.

ಆಗ ಈ ದೇಶದಲ್ಲಿ ಮರಾಠರೂ ಟೀಪುವೂ ಬಹಳ ಪ್ರಬಲರಾಗಿದ್ದರು. ಅವರು ಕವಾಯಿತು ಕಲಿತ ಸೈನ್ಯವನ್ನೂ ತೋಪುಗಳನ್ನೂ ಇಟ್ಟುಕೊಂಡು

ತಮ್ಮ ತಮ್ಮ ರಾಜ್ಯಗಳನ್ನು ಹಬ್ಬಿಸುವ ಹಂಬಲದಲ್ಲಿದ್ದರು. ನಿಜಾಮ, ಭೋಸಲೆ, ಅಯೋಧ್ಯೆಯ ವಜೀರ ಇವರು ಬಲಹೀನರಾಗಿದ್ದರು.

೨. **ಕಾರ್ನವಾಲೀಸನು ಮಾಡಿದ ಸುಧಾರಣೆಗಳು** :— ರಾಜ್ಯವನ್ನು ಹಬ್ಬಿಸುವದಕ್ಕಿಂತ ಇದ್ದ ರಾಜ್ಯದಲ್ಲಿ ಸುವ್ಯವಸ್ಥೆಯನ್ನು ನೆಲೆಗೊಳಿಸುವದು ಮಹತ್ವದ ಕೆಲಸವೆಂದು ತಿಳಿದು, ಕಾರ್ನವಾಲೀಸನು ರಾಜ್ಯಕಾರಭಾರದಲ್ಲಿ ಹಲವು ಸುಧಾರಣೆಗಳನ್ನು ಮಾಡಿದನು ಅವುಗಳ ವಿವರ:- ೧. ಪ್ರತಿಯೊಂದು ಪ್ರಾಂತದಲ್ಲಿ **ಜಿಲ್ಲೆ** ಎಂಬ ಭಾಗಗಳನ್ನು ಮಾಡಿ, ಆ ಪ್ರತಿಯೊಂದು ಭಾಗಕ್ಕೆ ಒಬ್ಬೊಬ್ಬ **ಕಲೆಕ್ಟರನನ್ನು** ನಿಯಮಿಸಿದನು. ೨. ಆದರೆ ಕಲೆಕ್ಟರರ ಕಡೆಗೆ ಇದ್ದ ನ್ಯಾಯತೀರಿಸುವ ಅಧಿಕಾರವನ್ನು ಕಡಿಮೆಮಾಡಿ ಆ ಕೆಲಸಕ್ಕೆ **ಜಜ್ಜ** ರೆಂಬ ಸ್ವತಂತ್ರ ಅಧಿಕಾರಿಗಳನ್ನು ನಿಯಮಿಸಿದನು ೩. ಕಲಕತ್ತೆ ಮೊದಲಾದ ನಾಲ್ಕು ಸ್ಥಳಗಳಲ್ಲಿ **ಅಪೀಲ ಕೋರ್ಟ**ಗಳನ್ನು ಸ್ಥಾಪಿಸಿದನು ೪. ಹೆಸ್ಟಿಂಗ್ಸನ ಕಾಲದ ಫೌಜದಾರೀ ಕಾಯಿದೆಯನ್ನು ಸುಧಾರಿಸಿದನು ಇದಕ್ಕೆ '**ಕಾರ್ನವಾಲೀಸ ಕೋಡ**' ಎಂಬ ಹೆಸರುಂಟಾಯಿತು ೫. ಕೆಲಸಗಾರರು ಲಂಚ ತೆಗೆದುಕೊಳ್ಳಲಾಗದು; ಮತ್ತು ಕಂಪನಿಯ ಹಣವನ್ನು ಸ್ವಂತದ ಸಲುವಾಗಿ ಬಳಿಸಲಾಗದು ಎಂಬ ನಿಯಮವನ್ನು ಮಾಡಿ ಅವರ ಸಂಬಳವನ್ನು ಹೆಚ್ಚಿಸಿದನು. ೬. ಬಂಗಾಲದಲ್ಲಿ ಸ್ಥಿರ ಕಂದಾಯ ಪದ್ಧತಿಯನ್ನು ಆರಂಭಿಸಿದನು.

೩. **ಸ್ಥಿರ-ಕಂದಾಯ ಪದ್ಧತಿಯೂ ಅದರ ಪರಿಣಾಮವೂ** :— ವಾರನ್ ಹೆಸ್ಟಿಂಗ್ಸನ ಕಾಲದಲ್ಲಿ, ಹೆಚ್ಚು ಹಣ ಕೊಟ್ಟವರಿಗೆ ಐದೈದು ವರ್ಷದ ಕರಾರದಿಂದ ಭೂಮಿಗಳು ಕೊಡಲ್ಪಡುತ್ತಿದ್ದವು. ಐದು ವರ್ಷಗಳಾದ ಬಳಿಕ ಭೂಮಿಯು ಕೈಬಿಡುವ ಸಂಭವವಿದ್ದದರಿಂದ ಗುತ್ತಿಗೆಗಾರರು ಭೂಮಿಯ ಸಾಗುವಳಿಯನ್ನಾಗಲಿ ಸುಧಾರಣೆಯನ್ನಾಗಲಿ ಚೆನ್ನಾಗಿ ಮಾಡುತ್ತಿರಲಿಲ್ಲ. ಆದದರಿಂದ ಭೂಮಿಗಳು ಕೆಡಹತ್ತಿದವು ಅವು ಕೆಡುತ್ತ ನಡೆದ ಹಾಗೆಲ್ಲ ಗುತ್ತಿಗೆಯ ಹಣವು ಕಡಿಮೆ ಬರಹತ್ತಿತು. ಕಾರ್ನವಾಲೀಸನು ಈ ದುಸ್ಥಿತಿಯನ್ನು ಸುಧಾರಿಸುವದಕ್ಕಾಗಿ ಪಾರ್ಲಿಮೆಂಟಿನ ಒಪ್ಪಿಗೆಯನ್ನು ಪಡೆದು ಈ ಸ್ಥಿರಕಂದಾಯ ಪದ್ಧತಿಯನ್ನು ಬಳಿಕೆಯಲ್ಲಿ ತಂದನು. ಇದರಿಂದ ೧. ಭೂಮಿಗಳ ಒಡೆತನವು ಜಮೀನದಾರರದಾಗಿದೆ; ೨. ಒಮ್ಮೆ ಈಗ ಗೊತ್ತುಮಾಡಿದ ಕಂದಾಯವನ್ನು ಎಂದೂ ಹೆಚ್ಚಿಸತಕ್ಕದ್ದಲ್ಲ; ಎಂದು ಗೊತ್ತಾಯಿತು.

ಭೂಮಿಗಳ ಒಡೆತನವು ದೊರೆಯಲು ಜಮೀನದಾರರು ಆಸ್ಥೆಯಿಂದ ಭೂಮಿಗಳನ್ನು ಸುಧಾರಿಸಿ ಉತ್ಪನ್ನವನ್ನು ಹೆಚ್ಚಿಸಿಕೊಂಡರು· ಉತ್ಪನ್ನವು ಹೆಚ್ಚುತ್ತ ನಡೆದಂತೆ ಕಂದಾಯವನ್ನು ಕೊಡುವದು ಹಗುರೆನಿಸಿದ್ದರಿಂದ ಅದು ಸುಸೂತ್ರವಾಗಿ ಕಲೆಯಹತ್ತಿತು. ಶ್ರೀಮಂತರಾದ ಜಮೀನದಾರರು ಕಂಪನಿ ಸರಕಾರದ ಹಿತಚಿಂತಕರಾದದರಿಂದ ಬಂಗಾಲದ ಆಡಳಿತವು ಎಡರಿಲ್ಲದೆ ಸಾಗತೊಡಗಿತು.

**೪. ಮೈಸೂರಿನ ೩ನೆಯ ಯುದ್ಧ:**— ಕ್ರಿ. ಶ **೧೭೯೦–೧೭೯೨.** ಟೀಪುವಿನ ಮಹತ್ವಾಕಾಂಕ್ಷೆಯು ಹೆಚ್ಚಿನದಾಗಿತ್ತು. ಮಂಗಳೂರ ಒಪ್ಪಂದ ವಾದ ಬಳಿಕ ಅವನು, ನಿಜಾಮು, ಮರಾಠ ಇವರನ್ನು ಹಿಮ್ಮೆಟ್ಟಿಸಿ ತಾನು ಪ್ರಬಲನಾಗಬೇಕೆಂದು ಪ್ರಯತ್ನಿಸಹತ್ತಿದನು. ಇದಕ್ಕಾಗಿ ಅವನು ಫ್ರೇಂಚರ ನೆರವಿನಿಂದ ಸುಧಾರಿಸಿದ ಶಸ್ತ್ರಾಸ್ತ್ರಗಳಿಂದ ಕೂಡಿದ ಕವಾಯಿತು ಕಲಿತ ೧॥ ಲಕ್ಷ ಸೈನ್ಯವನ್ನು ಸಿದ್ಧಗೊಳಿಸಿದನು. ಅಲ್ಲದೆ ಕೋಟೆಕೊತ್ತಳಗಳನ್ನು ಭದ್ರಪಡಿಸಿ ಬಲವಾದ ತೋಫುಗಳನ್ನು ಒದಗಿಸಿಕೊಂಡನು. ಅತ್ತ ಕಾರ್ನವಾಲೀಸನು ಸದ್ದಿಲ್ಲದೆ ಯುದ್ಧದ ಸಿದ್ಧತೆಯನ್ನು ಮಾಡಿಕೊಂಡು ಇಂಗ್ಲಂಡದಿಂದ ಹೊಸ ಸೈನ್ಯವನ್ನು ತರಿಸಿಕೊಂಡಿದ್ದನು.



ಟೀಪು ಸುಲ್ತಾನ

ಇದೇ ಸಮಯಕ್ಕೆ **ತ್ರಾವಣಕೋರ, ಕೋಚೀನ**ಗಳ ಅರಸರಲ್ಲಿ ಜಗಳ ಹತ್ತಲು ಟೀಪುವು ಕೋಚೀನದ ಅರಸನ ಪಕ್ಷಹಿಡಿದು ತ್ರಾವಣಕೋರದ ಮೇಲೆ ಸಾಗಿಹೋದನು. ಮೊದಲು ಟೀಪುವಿನ ಮಾಂಡಲಿಕನಾಗಿದ್ದ ಈ ತ್ರಾವಣಕೋರದ ಅರಸನು ಇತ್ತೀಚಿಗೆ ಅವನನ್ನು ಬಿಟ್ಟು ಇಂಗ್ಲಿಷರ ಮಾಂಡಲಿಕನಾಗಿದ್ದನು. ಆದ್ದರಿಂದ ಕಾರ್ನವಾಲೀಸನು ತಮ್ಮ ಆಶ್ರಿತನ ರಕ್ಷಣೆಯ ನೆವದಿಂದ ಟೀಪುವಿನ ಮೇಲೆ ಶಸ್ತ್ರವನ್ನೆತ್ತಿದನು. ನಿಜಾಮು-ಮರಾಠರಿಗೆ ಕೂಡ ಟೀಪುವು ಹಣ್ಣಾಗುವದು ಬೇಕಿತ್ತು. ಕಾರಣ

ಅವರೂ ಕಾರ್ನವಾಲೀಸನನ್ನು ಕೂಡಿಕೊಂಡರು. ಮೂವರು ಕೂಡಿ ಟೀಪು ವನ್ನು ಹಣಿದು ಅವನ ಸೀಮೆಯನ್ನು ಸರಿಯಾಗಿ ಹಂಚ್ಚಿಕೊಳ್ಳಬೇಕೆಂದು ಗೊತ್ತುಮಾಡಿದರು. ಮೂವರ ಸೈನ್ಯಗಳು ಟೀಪುವಿನ ಮೇಲೆ ಸಾಗಿದವು.

ಕಾರ್ನವಾಲೀಸನು ತಾನೇ ಸೇನಾಪತಿಯಾಗಿ ಯುದ್ಧಕ್ಕೆ ಹೊರಟನು ಅವನು **ಬೆಂಗಳೂರ** ಕೋಟೆಯನ್ನು ತೆಗೆದುಕೊಂಡು **ಆರಕೇರಿಯ** ಕದನದಲ್ಲಿ ಟೀಪುವನ್ನು ಸೋಲಿಸಿದನು. ಆದರೆ ಬಳಿಯಲ್ಲಿಯ ಕಾಳು-ಕಡಿಗಳು ತೀರಿದ್ದರಿಂದ ಅವನು ಹತಾಶನಾಗಿ ಹಿಂದಿರುಗುವ ಹೊತ್ತು ಒದಗಿತು ಅಷ್ಟರಲ್ಲಿ ಟೀಪುವಿನ ಸರದಾರನಿಂದ ಧಾರವಾಡವನ್ನು ವಶಮಾಡಿಕೊಂಡು ಪರುಶರಾಮ ಪಂತನು ನೆರವಿಗೆ ಬಂದನು. ಬಳಿಕ **ಇಂಗ್ಲಿಷ-ನಿಜಾಮ-ಮರಾಠಾ** ಸೈನ್ಯಗಳು ಒಟ್ಟಾಗಿ ಶ್ರೀರಂಗಪಟ್ಟಣದ ಕೋಟೆಯನ್ನು ಮುತ್ತಿದವು ಆಗ ಟೀಪುವು ಮುಂದುಗಾಣದೆ ಒಪ್ಪಂದಕ್ಕೆ ಒಪ್ಪಿದನು. **ಶ್ರೀರಂಗಪಟ್ಟಣದ ಒಪ್ಪಂದ—** ಕ್ರಿ. ಶ. ೧೭೯೨. **೧.** ಟೀಪುವು ಅರ್ಧ ರಾಜ್ಯವನ್ನು ಬಿಟ್ಟು ಕೊಡಬೇಕು. **೨.** ಯುದ್ಧದ ವೆಚ್ಚವೆಂದು **೩** ಕೋಟಿ ರೂಪಾಯಿಗಳನ್ನು ಕೊಡಬೇಕು. **೩.** ಈ ಕರಾರುಗಳನ್ನು ಪೂರೈಸುವ ವರೆಗೆ ಇಬ್ಬರು ಮಕ್ಕಳನ್ನು ಇಂಗ್ಲಿಷರ ವಶಕ್ಕೆ ಕೊಡಬೇಕು.

ಟೀಪುವಿನಿಂದ ದೊರೆತ ರಾಜ್ಯದಲ್ಲಿ **ಕೂರ್ಗ-ದಿಂಡಿಗಲ್ಲು** ಪ್ರಾಂತಗಳನ್ನು ಇಂಗ್ಲಿಷರೂ **ಬಳ್ಳಾರಿ-ಕಡಪೆ**ಗಳನ್ನು ನಿಜಾಮನೂ ಮಲಪ್ರಭೆ ತುಂಗಭದ್ರೆ ಗಳ ನಡುಸೀಮೆಯನ್ನು ಮರಾಠರೂ ತೆಗೆದುಕೊಂಡರು.

**೫. ಸರ್ ಜಾನ್ ಶೋಅರ:— ( ಕ್ರಿ. ಶ. ೧೭೯೩-೯೮ )** ಲಾರ್ಡ ಕಾರ್ನವಾಲೀಸನ ತರುವಾಯ ಅವನ ಕೌನ್ಸಿಲಿನ ಸಭಾಸದನಾದ **ಸರ್ ಜಾನ್ ಶೋಅರ**ನು ಗ. ಜ. ನಾಗಿ ನಿಯೋಜಿತನಾದನು. ಇವನ ಆಳಿಕೆ ಯಲ್ಲಿಯ ಮಹತ್ವದ ಸಂಗತಿಗಳು :— **೧. ಕಂಪನಿಯ ಸನದಿನ ವಿಚಾರಣೆ** = ೧೭೯೩. ರೆಗ್ಯೂಲೇ. ಆಕ್ಟವಾದ ಕಾಲಕ್ಕೆ ಇಪ್ಪತ್ತು ವರ್ಷಕ್ಕೊಮ್ಮೆ ಕಂಪನಿಯ ಸನದಿನ ವಿಚಾರಣೆಯಾಗಬೇಕೆಂದು ಗೊತ್ತಾಗಿದ್ದಿತು. ಆ ಮೇರೆಗೆ ಪಾರ್ಲಿ-ಮೆಂಟಿನಲ್ಲಿ ವಿಚಾರಣೆಯಾಗಿ ಕಂಪನಿಯ ವ್ಯಾಪಾರದ ಅವಧಿಯು ಮರಳಿ ೨೦ ವರ್ಷ ಹೆಚ್ಚಿಸಲ್ಪಟ್ಟಿತು. ಹಿಂದುಸ್ಥಾನದೊಡನೆ ಈಸ್ಟ ಇಂ. ಕಂಪನಿ ಯವರು ಮಾತ್ರ ವ್ಯಾಪಾರ ಮಾಡಬೇಕೆಂದು ಇದ್ದ ಕಟ್ಟು ತಪ್ಪಿ, ಇಂಗ್ಲಂಡದ

ಉಳಿದ ವ್ಯಾಪಾರಸ್ಥರು ಹಿಂದುಸ್ತಾನದಕೂಡ ಸಣ್ಣ ಪ್ರಮಾಣದಿಂದ ವ್ಯಾಪಾರ ಮಾಡಬಹುದೆಂದು ಗೊತ್ತಾಯಿತು. **೨. ಅಯೋಧ್ಯ ಪ್ರಕರಣ**:— ಕ್ರಿ. ಶ. ೧೭೯೭ರಲ್ಲಿ ಅಸಫಉದ್ದೌಲನು ಸಾಯಲು ಅವನ ದಾಸಿಪುತ್ರನಾದ **ವಜೀರ ಅಲಿ**ಯು ಇಂಗ್ಲಿಷರ ನೆರವಿನಿಂದ ವಜೀರನಾದನು. ಆದರೆ ಅವನಿಗೆ ಜನರ ಬೆಂಬಲವೆಷ್ಟೂ ಇರಲಿಲ್ಲ. ಆದದರಿಂದ ಶೋರನು ಅಸಫಉದ್ದೌಲನ ತಮ್ಮ ನಾದ **ಸಾದತ ಅಲಿ**ಯನ್ನು ವಜೀರನನ್ನು ಮಾಡಿ, ಅವನೊಡನೆ ಒಪ್ಪಂದವನ್ನು ಮಾಡಿದನು. ಇದರಿಂದ ಅಲಿಯು ೭೬ಲಕ್ಷದ ವೆಚ್ಚದ ಸಹಾಯಕ ಸೈನ್ಯವನ್ನು ಇಟ್ಟುಕೊಳ್ಳಲು ಒಪ್ಪಿದ್ದಲ್ಲದೆ ಆ ಸೈನ್ಯದ ರಾಣ್ಯಾದ ಸಲುವಾಗಿ ಎಂದು **ಅಲಹಾಬಾದ** ಪಟ್ಟಣವನ್ನು ಇಂಗ್ಲಿಷರಿಗೆ ಕೊಟ್ಟನು. ಕ್ರಿ ಶ. ೧೭೯೮. **೩. ಬಂಗಾಲದ ಸೈನಿಕರ ಅಸಂತೋಷ**:— ದಂಡಿನ ಶಿಪಾಯಿಗಳು ತಮ್ಮ ಪಗಾರ ಹೆಚ್ಚಿಸಬೇಕೆಂದು ಬೇಡಿಕೊಂಡರು. ಅವರು ಮಾಡಿಕೊಂಡ ಅರ್ಜಿ ಗಳಲ್ಲಿ ಈ ಬೇಡಿಕೆಯನ್ನು ಪೂರೈಸದಿದ್ದಲ್ಲಿ ಬಂಡಾಯವೆಬ್ಬಿಸುವೆವು; ಎಂದು ಬರೆದುಕೊಡಿದ್ದರು ಆದರೆ ಶೋರನು ಹಂಚಿಕೆಯಿಂದ ದಂಡಿನವರನ್ನು ಆಳವಿನಲ್ಲಿ ತಂದು ಶಾಂತತೆಯನ್ನು ಕಾಯ್ದುಕೊಂಡನು.

---

## ೨ನೆಯ ಪಾಠ

### ೫ ನೆಯ ಪೇಶವೆ ಸವಾಯಿ ಮಾಧವರಾಯ.

( ಕ್ರಿ. ಶ. ೧೭೭೪–೧೭೯೫ )

**ಸವಾಯಿ ಮಾಧವರಾಯನ ಆಳಿಕೆಯ ಸ್ವರೂಪ**:- ಸಾಲ್ಬಾಯಿಯ ಒಪ್ಪಂದವಾದಬಳಿಕ ರಘುನಾಥರಾಯನ ವಿರೋಧವು ತಪ್ಪಲು ಸವಾಯಿ ಮಾಧವರಾಯನ ಆಳಿಕೆಯು ಸುಸೂತ್ರವಾಗಿ ಸಾಗಹತ್ತಿತು. ಪೇಶವೆಯು ಚಿಕ್ಕವನಿದ್ದದರಿಂದ ಕಾರಭಾರವನ್ನು **ನಾನಾಫಡಣವೀಸನೇ** ಸಾಗಿಸುತ್ತಿದ್ದನು. ನಾನಾನ ಮುತ್ಸದ್ದಿತನಕ್ಕೆ ಮಹದಾಜಿಯ ಪರಾಕ್ರಮದ ಬೆಂಬಲವು ದೊರೆತ ದರಿಂದ ಮರಾಠರ ರಾಜ್ಯವು ದಿನದಿನಕ್ಕೆ ಉತ್ಕರ್ಷವನ್ನು ಹೊಂದಹತ್ತಿತು. ಈ ಇಬ್ಬರ ಸಹಾಯದಿಂದ ಮನೆಜಗಳದ ಕಾಲದಲ್ಲಿ ಕೈಬಿಟ್ಟಿದ್ದ ಸೀಮೆಗಳೆಲ್ಲ ಮರಳಿ ಮರಾಠರ ರಾಜ್ಯಕ್ಕೆ ಸೇರಿದವು. ಸವಾಯಿ ಮಾಧವರಾಯನ ಆಳಿಕೆಯ ವರ್ಣನೆಯೆಂದರೆ ನಾನಾ-ಮಹದಾಜಿಯವರ ಕರ್ತೃತ್ವದ ವರ್ಣನೆಯೇ ಸರಿ.

೨. **ಟೀಪುವಿನೊಡನೆ ಆದ ಮೊದಲನೆಯ ಯುದ್ಧ**:— ಕ್ರಿ. ಶ. **೧೭೮೫-೮೭** ಟೀಪುವು ತನ್ನ ಸಾಮರ್ಥ್ಯವನ್ನು ಹೆಚ್ಚಿಸಿಕೊಂಡು ನಿಜಾಮ, ಮರಾಠ ಇವರ ಸೀಮೆಗಳನ್ನು ಆಕ್ರಮಿಸತೊಡಗಿದನು. ಆಗ ನಾನಾಫಡಣ ವೀಸನು ನಿಜಾಮನನ್ನು ಕೂಡಿಕೊಂಡು ಟೀಪುವನ್ನು ತಡೆಯ ಹೊರಟನು. ಟೀಪುವು ಇವರೆಲ್ಲರನ್ನು ಹಣಿಯುವಷ್ಟು ಬಲವುಳ್ಳವನಾಗಿದ್ದನು ಆದರೆ ಅಷ್ಟರಲ್ಲಿ ಇಂಗ್ಲಿಷರು ಯುದ್ಧಮಾಡಲು ಸಿದ್ಧರಿರುವರೆಂಬ ಸುದ್ದಿಯು ಬಂದದ ರಿಂದ ಅವನು ಮರಾಠರೊಡನೆ ಒಪ್ಪಂದ ಮಾಡಿಕೊಂಡನು. ಆಗ ಅವನು ಮರಾಠರ ಸೀಮೆಗಳನ್ನು ಬಿಟ್ಟುಕೊಟ್ಟದ್ದಲ್ಲದೆ ೩೨ ಲಕ್ಷ ರೂಪಾಯಿಗಳನ್ನು ಕೊಟ್ಟನು.

೩. **ಶ್ರೀರಂಗ ಪಟ್ಟಣದ ಮುತ್ತಿಗೆ: ೧೭೯೦ ೯೨.** ಪುಟ ೯೮ ನೋಡಿರಿ

**ಮಹದಾಜಿಯ ಉತ್ತರದ ದಿಗ್ವಿಜಯ**:— ಮರಾಠ - ಇಂಗ್ಲಿಷರ ಮೊದಲನೆಯ ಯುದ್ಧ ಮುಗಿದ ಬಳಿಕ ಮಹದಾಜಿ ಸಿಂಧೆಯು ಉತ್ತರದ ರಾಜ್ಯವಿಸ್ತಾರದ ಕೆಲ ಸವನ್ನು ಕೈಕೊಂಡನು. **ಡಿಬಾಯಿನ್** ಎಂಬ ಫ್ರೆಂಚ ಸೇನಾ ಪತಿಯನ್ನು ತನ್ನಲ್ಲಿಟ್ಟುಕೊಂಡು ಸೈನ್ಯವನ್ನು ಸುಧಾರಿಸಿದನು. ಹಿರಿಯ ಮಾಧವರಾಯನ ತರು ವಾಯ ದಿಲ್ಲಿಯಲ್ಲಿ ಮರಾಠರ ಅಧಿಕಾರವು ಕಡಿಮೆಯಾಗ ಹತ್ತಿತು ಆ ಕಾಲದಲ್ಲಿ **ನಜಫ ಖಾನ** ಮೊದಲಾದ ಸರದಾರರು ಆ ಅಧಿಕಾರವನ್ನು ಸೆಳೆದುಕೊಳ್ಳುವದಕ್ಕಾಗಿ ಹವಣಿಸುತ್ತಿದ್ದರು. ಕಡೆಗೆ ಮಹದಾಜಿಯು ಪುಣೆಯಿಂದ ದಂಡನ್ನು ತರಿಸಿಕೊಂಡು ಇಸ್ಮಾಯಿಲ ಬೇಗನನ್ನು ಸೋಲಿಸಿ, ದಿಲ್ಲಿಗೆಹೋಗಿ ಬಾದಷಾಹನಿಂದ ಸನದು ಪಡೆದನು.



**ಮಹದಾಜಿ ಸಿಂಧೆ**

ಬಳಿಕ, ಬಾದಷಾಹನ ಕಣ್ಣುಗಳನ್ನು ಕೀಳಿಸಿದ ಗುಲಾಮುಕಾದರನನ್ನು ಹಿಡಿಸಿ ಪರಿಪರಿಯಿಂದ ನೋಯಿಸಿ ಕೊಲ್ಲಿಸಿದನು. ಆಮೇಲೆ ರಜಪುತ, ಜಾಟ, ಸೀಖ ಮುಂತಾದವರನ್ನು ಸೋಲಿಸಿ ಅವರಿಂದ ಕಪ್ಪವನ್ನೆತ್ತಿಕೊಂಡು ಬಾದಷಾಹನ ವರ್ಚಸ್ಸನ್ನು ಸ್ಥಿರಗೊಳಿಸಿದನು. ಇದರಿಂದ ಬಾದಷಾಹನು ಸಂತುಷ್ಟನಾಗಿ ಮಹದಾಜಿಗೆ **ವಕೀಲ-ಈ-ಮುತಾಲಿಕ** ಎಂಬ ಪದವಿಯನ್ನು ಕೊಡಮಾಡಿದನು. ಆದರೆ ಅವನು ಆ ಪದವಿಯನ್ನು ಪೇಶವೆಯರಿಗಾಗಿ ತೆಗೆದುಕೊಂಡು ತಾನು ಪೇಶವೆಯರ ಪ್ರತಿನಿಧಿಯಾಗಿ ಕೆಲಸಮಾಡಹತ್ತಿದನು. ಹೀಗೆ ಉತ್ತರದಲ್ಲಿ ಶಾಂತತೆಯನ್ನು ನೆಲೆಗೊಳಿಸಿದ ಬಳಿಕ ಮಹದಾಜಿಯು ಪುಣೆಗೆ ಬಂದು, ದೊಡ್ಡ ದರಬಾರ ನಡೆದಿರುವಾಗ ಬಾದಷಾಹನಿಂದ ತಂದ ಪದವಿಯನ್ನೂ ವಸ್ತ್ರಗಳನ್ನೂ ಸ. ಮಾಧವರಾಯನಿಗೆ ಅರ್ಪಿಸಿದನು ಪೇಶವೆಯು ಸ್ವಾಮಿನಿಷ್ಟನೂ ಪರಾಕ್ರಮಿಯೂ ಆದ ಮಹದಾಜಿಯನ್ನು ಪ್ರೀತಿಯಿಂದಲೂ ಮರ್ಯಾದೆಯಿಂದಲೂ ಕಾಣುವವನಾದನು.

೫ **ಖರಡೆಯ ಕಾಳಗ:— ೧೭೯೫.** ಹೀಗೆ ಸ್ಥಿತಿಯಿರುವಾಗ ಕ್ರಿ. ಶ. ೧೭೯೪ರಲ್ಲಿ ಮಹದಾಜಿಯು ವಾನವಡಿಯಲ್ಲಿ ಜ್ವರದಿಂದ ಮರಣಹೊಂದಿದನು. ಅದೇಸಮಯಕ್ಕೆ ಶೂರ ಸೇನಾಪತಿಯಾದ ಹರಿಪಂತನೂ ತೀರಿದನು. ಇದರಿಂದ ಮಹಾರಾಷ್ಟ್ರಕ್ಕೆ ದೊಡ್ಡ ಪೆಟ್ಟು ತಗಲಿದಂತಾಯಿತು. ಮಹದಾಜಿಯು ದಿಲ್ಲಿಯಲ್ಲಿ ಪಡೆದಿದ್ದ ಹೆಚ್ಚಳವನ್ನು ನೋಡಿ ಕಸಿವಿಸಿಗೊಳ್ಳುತ್ತಿದ್ದ ನಿಜಾಮನು ಈಗ ಮರಾಠರೊಡನೆ ಇದಿರು ಹೂಡಿದನು. ಅವನು ಮರಾಠರಿಗೆ ಕೊಡತಕ್ಕ ಹಣವನ್ನು ಕೊಡಲಿಲ್ಲ.

ಆಗ ಸ. ಮಾಧವರಾಯನು ನಿಜಾಮನ ಮೇಲೆ ಸಾಗಿದನು **ಖರಡೆ** ಎಂಬಲ್ಲಿ ಘೋರ ಕಾಳಗವಾಗಿ ನಿಜಾಮನು ಒಪ್ಪಂದ ಮಾಡಿಕೊಂಡು ೩೭ ಲಕ್ಷ ಉತ್ಪನ್ನದ ಸಿಂಮೆಯನ್ನೂ **ದೌಲತಾಬಾದ** ಕೋಟೆಯನ್ನೂ ಬಿಟ್ಟುಕೊಟ್ಟನಲ್ಲದೆ ಹಿಂದಿನ ಹಣಸಹಿತ ೩ ಕೋಟಿ ರೂ ಗಳನ್ನು ಕೊಡಲೊಪ್ಪಿದನು.

೬. **ಸವಾಯಿ ಮಾಧವರಾಯನ ಮರಣ ಮತ್ತು ಮರಾಠರ ದುರ್ದೈವ:—** ಖರಡೆ ಕಾಳಗದ ವಿಜಯದ ನಂತರ ಮರಾಠರ ಸರದಾರರು ತಮ್ಮ ತಮ್ಮ ಸೀಮೆಗಳಿಗೆ ಹೋದರು ರಘುನಾಥರಾಯನು ಮರಣಹೊಂದಿದ

ಬಳಿಕ ಅವನ ಮಕ್ಕಳನ್ನು ನಾನಾಫಡಣವೀಸನು **ಜುನ್ನರಕ್ಕೆ** ತಂದು ಕಾವಲಿನಲ್ಲಿಟ್ಟಿದ್ದನು. ಮುಂದೆ ರಘುನಾಥರಾಯನ ಹಿರಿಯ ಮಗನಾದ ಬಾಜೀರಾಯನಿಗೂ ಸವಾಯಿ ಮಾಧವರಾಯನಿಗೂ ಪತ್ರವ್ಯವಹಾರವು ನಡೆದು ಇಬ್ಬರಲ್ಲಿ ಪ್ರೀತಿಯುಂಟಾಯಿತು. ಬರಬರುತ್ತ ಬಾಜೀರಾಯನು ನಾನಾಫಡಣವೀಸನ ವಿಷಯವಾಗಿ ಸ. ಮಾಧವರಾಯನ ಮನಸ್ಸನ್ನು ಕೆಡಿಸಹತ್ತಿದನು. ಇದನ್ನು ಕಂಡು ನಾನಾಫಡಣವೀಸನು ಬಾಜೀರಾಯನ ಮೇಲಿನ ಕಾವಲನ್ನು ಬಿಗಿ ಮಾಡಿದನು. ಮತ್ತು ಬಾಜೀರಾಯನ **ಸಲಿಗೆಯನ್ನು** ಮಾಡಬಾರದೆಂದು ಸ. ಮಾಧವರಾಯನನ್ನು ಉಪದೇಶಿಸಿದನು. ಆದರೆ ಇದರ ಪರಿಣಾಮವು ಮಾತ್ರ ವಿಪರೀತವಾಯಿತು! ಸ. ಮಾಧವರಾಯನು ಈ ಮಾತನ್ನು ಮನಸಿಗೆ ಹಚ್ಚಿಕೊಂಡು ಕೊರಗಹತ್ತಿದನು. ಮುಂದೆ ಒಂದು ದಿನ ವಾಯು ವಿಕಾರದ ಭರದಲ್ಲಿ ಇವನು ಅನಮಾನೆಯ ಮೇಲಂತಸ್ತಿನ ಕಿಡಿಕಿಯಿಂದ, ಕೆಳಗಿರುವ ಕಾರಂಜಿಯ ಮೇಲೆ ಹಾರಿದನು. ಇದರಿಂದ ಭಯಂಕರ ಗಾಯವಾಗಿ ಇವನು ಮರಣಹೊಂದಿದನು. ಕ್ರಿ. ಶ. ೧೭೯೫

ಮಾಧವರಾಯನ ಮರಣದೊಂದಿಗೆ ಮರಾಠರ ರಾಜ್ಯದ ದುರ್ದೈವವು ಒದಗಿದಂತೆ ತೋರುತ್ತದೆ ಕ್ರಿ. ಶ. ೧೭೯೫ರಿಂದ ನಾಲ್ಕಾರು ವರ್ಷಗಳಲ್ಲಿಯೆ **ರಾಮಶಾಸ್ತ್ರಿ, ಅಹಲ್ಯಾಬಾಯಿ, ಮಹದಾಜಿ, ಹರಿಪಂತ, ಪರಶುರಾಮಭಾವು ತುಕೋಜಿ ಹೋಳಕರ** ಇವರು ಮರಣಹೊಂದಿದರು. ರಾಜ್ಯಕ್ಕೆ ಆಧಾರವೆನಿಸಿದ ಸ್ತ್ರೀ ಪುರುಷರು ಹೀಗೆ ಪಟಪಟನೆ ಕಾಲವಶರಾಗುವದು ಆ ರಾಜ್ಯದ ದುರ್ದೈವವಲ್ಲದೆ ಮತ್ತೇನು ?

---

## ೯ ನೆಯ ಪಾಠ

### ೭ನೆಯ ಮತ್ತು ಕೊನೆಯ ಪೇಶವೆ ೨ನೇ ಬಾಜೀರಾಯ

ಅಥವಾ

### ಮಹಾರಾಷ್ಟ್ರ ರಾಜ್ಯದ ಅಳಿಗಾಲ

೧. **೨ನೆಯ ಬಾಜೀರಾಯನು ಪೇಶವೆಯಾದುದು:**— ಸವಾಯಿ ಮಾಧವರಾಯನಿಗೆ ಮಕ್ಕಳಿರಲಿಲ್ಲ. ಆದದರಿಂದ ಅವನತರುವಾಯ ಪೇಶವೆ ಪದದ ಬಾಧ್ಯತೆಯು ೨ನೆಯ ಬಾಜೀರಾಯನಿಗೆ ಉಂಟಾಯಿತು.

**೨ ೨ನೆಯ ಬಾಜೀರಾಯನ ಆಳಿಕೆ ಮತ್ತು ಸರದಾರರಲ್ಲಿಯ ಒಡಕು:—** ಬಾಜೀರಾಯನು ಪೇಶವೆಯಾದ ಕೂಡಲೆ ದೌಲತರಾಯ ಸಿಂಧೆನಿಗೆ ೨ ಕೋಟಿ ರೂಪಾಯಿಗಳನ್ನು ಕೊಡಲೊಪ್ಪಿ ಅವನಿಂದ ನಾನಾನನ್ನು ಸೆರೆಹಿಡಿಸಿ ಅಹಮ್ಮದನಗರದಲ್ಲಿ ನೆರೆಯಿಟ್ಟನು. ಮುಂದೆ ದೌಲತರಾಯ ಬಾಜೀರಾಯರಲ್ಲಿಯೂ ವೈಮನಸ್ಸುಂಟಾಯಿತು. ಆಗ ದೌಲತರಾಯನು ಬಾಜೀರಾಯನನ್ನು ದಾರಿಗೆ ತರುವದಕ್ಕಾಗಿ ನಾನಾನನ್ನು ಬಿಡುಗಡೆಮಾಡಿದನು ಬಾಜೀರಾಯನು **ಬುಡವಿಲ್ಲದ ಕೊಡದಂತೆ** ಬೇಕಾದತ್ತ ಉರುಳುವವನು. ಆವನು ತಡವಿಲ್ಲದೆ ನಾನಾನನ್ನು ಕರೆಯಿಸಿಕೊಂಡು ಅವನನ್ನೇ ಅಧಿಕಾರಿಯನ್ನು ಮಾಡಿಕೊಂಡನು. ಆದರೂ ಆ ಬಳಿಕ ನಾನಾಸಿಗೆ ಕೆಲಸದಲ್ಲಿ ಹುರುಳೆನಿಸಲಿಲ್ಲ ಹೀಗೆ ಉದಾಶೀನನಾಗಿ ಕಾಲಕಳೆಯುತ್ತಿರಲು ಅವನು ಮುಂದೆ ತುಸು ದಿವಸ ಗಳಲ್ಲಿ ಎಂದರೆ ಕ್ರಿ. ಶ. ೧೮೦೦ರಲ್ಲಿ ಮರಣಹೊಂದಿದನು. ಹಿರಿಯ ಮಾಧವ ರಾಯನ ತರುವಾಯ ಮರಾಠ ರಾಜ್ಯವನ್ನು ಹಲವು ಕುತ್ತುಗಳಿಂದ ಉಳಿಸಿ ಮರಾಠ ಸರದಾರರಲ್ಲಿ ಒಕ್ಕಟ್ಟನ್ನು ಬೆಳೆಸಿ, ತುಂಗಭದ್ರೆಯಿಂದ ದಿಲ್ಲಿಯ ವರೆಗೆ ಮರಾಠರ ಅಧಿಕಾರವನ್ನು ನೆಲೆಗೊಳಿಸಿದ ಶ್ರೇಯಸ್ಸಿನ ಬಹುಭಾಗವು ಈ ನಾನಾಫಡಣವೀಸನಿಗೆ ಸಲ್ಲುವದು. ರಾಜ್ಯಕಾರಭಾರದಲ್ಲಿಯ ಇವನ ಧೋರಣ ಅಚ್ಚುಕಟ್ಟುತನ ಪದ್ಧತಿ ಇವು ಒಳ್ಳೆಯ ಅನುಕರಣೀಯವಾಗಿದ್ದವು. ಮರಾಠ ರಾಜ್ಯವು ಉಳಿಯುವ ಆಶೆಯು ಇವನ ಸಂಗಡಲೆ ಇಲ್ಲದಂತಾಯಿತು.

ನಾನಾನು ಹೋದ ಬಳಿಕ ೨ನೆಯ ಬಾಜೀರಾಯನಿಗೆ ಮಾರ್ಗದರ್ಶಕ ರಾರೂ ಉಳಿಯಲಿಲ್ಲ. ಅನುಭವಿಕ ಸರದಾರರ ನೆರವಿನಿಂದ ರಾಜ್ಯವಾಳುವ ದನ್ನು ಬಿಟ್ಟು ಅವರೆಲ್ಲರನ್ನು ಆಗದವರೆಂದು ತಿಳಿದು ಅವರ ಮೇಲೆ ಸೇಡುತೀರಿ ಸಹತ್ತಿದನು. ದೌಲತರಾಯನು ತನಗೆ ಸಲ್ಲತಕ್ಕ ೨ ಕೋಟಿ ರೂಪಾಯಿಗಳನ್ನು ಕೇಳಲು ಬಾಜೀರಾಯನು ಅವನಿಂದ ಪುಣೆಯಲ್ಲಿಯ ಸರದಾರರನ್ನೂ ಸೆಟ್ಟಿ-ಸಾವುಕಾರರನ್ನೂ ಸುಲಿಸಿದನು. ಹೋಳಕರ **ಯಶವಂತರಾಯನ** ತಮ್ಮನಾದ **ವಿಠೂಜಿಯನ್ನು** ಆನೆಯ ಕಾಲಿಗೆ ಹಾಕಿಸಿ ಕೊಲ್ಲಿಸಿದನು.

ತಮ್ಮನ ಕೊಲೆಯ ಸುದ್ದಿಯು ಹತ್ತಲು ಹೋಳಕರನು ಸಿಂಧೆ-ಪೇಶವೆ ಯರ ಮೇಲೆ ಸಿಟ್ಟಾದನು. ಅವನು ಸಿಂಧೆಯ **ಉಜ್ಜಯನಿ** ಪಟ್ಟಣವನ್ನು

ಸುಲಿದು ಪುಣೆಯ ಮೇಲೆ ಸಾಗಿಬರಹತ್ತಿದನು. ಆಗ ಶಿಂಧೆ-ಪೇಶವೆಯರ ಸೈನ್ಯಗಳು ಅವನನ್ನು ಎದುರಿಸಿದವು. ಯುದ್ಧದಲ್ಲಿ ಹೋಳಕರನು ಜಯಹೊಂದಿ ಪುಣೆಗೆ ಬರಲು ಬಾಜೀರಾಯನು ಇಂಗ್ಲಿಷರ ನೆರವು ಪಡೆಯಲು **ವಸಯಿಯ** ದಾರಿಹಿಡಿದನು. ಆಗ ರಘುನಾಥರಾಯನ ದತ್ತಕ ಮಗನಾದ **ಅಮೃತರಾಯ**ನನ್ನು ಪಟ್ಟಗಟ್ಟಿ ಹೋಳಕರನು ತನ್ನ ಸೀಮೆಗೆ ಹೋದನು.

೩. **ವಸಯಿಯ ಒಪ್ಪಂದ** :— ಕ್ರಿ. ಶ. **೧೮೦೭** ಬಾಜೀರಾಯನು ಇಂಗ್ಲಿಷರ ಮರೆಹೊಕ್ಕು ಅವರೊಡನೆ ಒಪ್ಪಂದ ಮಾಡಿಕೊಂಡನು. ಇಂಗ್ಲಿಷರು ಬಾಜೀರಾಯನಿಗೆ ಪೇಶವೆಪದವನ್ನು ಕೊಡಿಸಬೇಕು. ಪೇಶವೆಯು ಅವರ ಸಹಾಯಕ ಸೈನ್ಯವನ್ನಿಟ್ಟುಕೊಂಡು ೨೬ ಲಕ್ಷದ ಸೀಮೆಯನ್ನು ಅವರಿಗೆ ಕೊಡಬೇಕು ಎಂದು ಗೊತ್ತಾಯಿತು. ಅಂದು ಪೇಶವೆಯ ವರ್ಚಸ್ಸು ಅಡಗಿ ಅವನು ಇಂಗ್ಲಿಷರ ಮಾಂಡಲಿಕನಾದನು. ಈ ಒಪ್ಪಂದವಾದ ಕೂಡಲೆ ಬಾಜೀರಾಯನು ಇಂಗ್ಲಿಷರ ಕಡೆಯ **ಆರ್ಥರ ವೆಲ್ಲಸ್ಲಿ** ಎಂಬ ಸೇನಾಪತಿಯೊಡನೆ ಪುಣೆಗೆ ಬಂದು ಮರಳಿ ಪೇಶವೆಯಾದನು.

೪. **ಬಾಜೀರಾಯನ ರಾಜ್ಯ ವ್ಯವಸ್ಥೆ**:— ಕ್ರಿ. ಶ. ೧೮೦೫ ರಿಂದ **೧೮೧೫**ರ ವರೆಗಿನ ಕಾಲವು ಬಾಜೀರಾಯನಿಗೆ ನಿಶ್ಚಿಂತೆಯಾಗಿದ್ದಿತು. ಏಕೆಂದರೆ ಈ ಕಾಲದಲ್ಲಿ ಇಂಗ್ಲಿಷರು ಈ ದೇಶದ ಅರಸರ ಕಾರಭಾರದಲ್ಲಿ ಕೈಹಾಕಲಿಲ್ಲ ಈ ಅನುಕೂಲವಿರುವಾಗಲೂ ಬಾಜೀರಾಯನು ಸರಿಯಾಗಿ ರಾಜ್ಯವಾಳಲಿಲ್ಲ. ಆಯೋಗ್ಯನಾದ **ಸದಾಶಿವ ಮಾಣಕೇಶ್ವರನಿಗೆ** ಮುಖ್ಯ ಅಧಿಕಾರವನ್ನು ಕೊಟ್ಟನು. ಸಹಾಯಕ ಸೈನ್ಯದ ಬಲದಿಂದ **ಪಟವರ್ಧನ, ರಾಸ್ತೆ** ಮೊದಲಾದ ಸರದಾರರನ್ನು ನೋಯಿಸಿದನು. ಕಂದಾಯವನ್ನು ಎತ್ತುವದನ್ನು ಬಿಟ್ಟು ಊರುಗಳನ್ನು ಗುತ್ತಿಗೆಯಿಂದ ಕೊಟ್ಟು ಪ್ರಜೆಗಳಿಗೆ ತೊಂದರೆಯನ್ನುಂಟು-ಮಾಡಿದನು. ಅನೀತಿಯಿಂದ ನಡೆಯುವವನೂ ಮರುಳ ಧಾರ್ಮಿಕನೂ ಆಗಿ ವಿಲಾಸ-ಭೋಜನ ಸಮಾರಂಭಗಳಲ್ಲಿ ಕಾಲಕಳೆದನು. ರಾಜ್ಯದಲ್ಲಿಯ ಅವ್ಯವಸ್ಥೆಗಂತೂ ನೆಲೆಯಿರಲಿಲ್ಲ. ತಾನಾಗಿಯೇ ಇಂಗ್ಲಿಷರ ಆಧೀನನಾದ ಇವನು ಹಿಂದಿನಿಂದ ಅವರನ್ನು ದ್ವೇಷಿಸಹತ್ತಿದನು. ಆದರೆ ತಕ್ಕಸಾಮರ್ಥ್ಯ ವಿಲ್ಲದುದರಿಂದ ಮೇಲೆ ಮೇಲೆ ಮಿತ್ರನಂತೆ ನಡೆಯುತ್ತ, ಗುಪ್ತವಾಗಿ ಯುದ್ಧದ ಸಿದ್ಧತೆ

ಯನ್ನು ನಡೆಯಿಸಿದ್ದನಲ್ಲದೆ ಹೋಳಕರ ಮೊದಲಾದ ಸರದಾರರೊಡನೆ ಒಳಸಂಚು ಮಾಡಹತ್ತಿದನು.

**೬. ಮರಾಠ ರಾಜ್ಯದ ಕೊನೆ (ಮರಾಠರ ಕಡೆಯ ಯುದ್ಧ)**:— ಬಾಜೀರಾಯನ ಮಾನವೇಣಿಕೆಯು ಇಂಗ್ಲಿಷರಿಗೆ ತಿಳಿಯದೆ ಇರಲಿಲ್ಲ. ಯುರೋಪದಲ್ಲಿ ನೆಪೋಲಿಯನನಿಗೂ ಇಂಗ್ಲಿಷರಿಗೂ ನಡೆದ ಯುದ್ಧವು ಕ್ರಿ. ಶ. ೧೮೧೫ರಲ್ಲಿ ಮುಗಿಯಲು ಅವರು ಈ ದೇಶದ ರಾಜ್ಯವಿಸ್ತಾರದ ಕೆಲಸವನ್ನು ಮತ್ತೆ ಕೈಕೊಂಡರು. ಅವರು ಬಾಜೀರಾಯನನ್ನು ದಾರೆಹಿಡಿಸುವ ಸಿದ್ಧತೆಯನ್ನು ಮಾಡಿ, ಇಂಗ್ಲಿಷ ಸೈನ್ಯವು ಪುಣೆಯ ಕಡೆಗೆ ಸಾಗಿ ಬಂದಿತು. ಶೂರನೂ ಏಕನಿಷ್ಠನೂ ಆದ **ಬಾಪು ಗೋಖಲೆ**ಯು ಮರಾಠರ ಸೇನಾಪತಿಯಾಗಿದ್ದನು. ಅವನಿಗೂ ಇಂಗ್ಲಿಷರಿಗೂ **ಖಡಕಿ, ಕೋರೆಗಾವ, ಅಷ್ಟೆ** ಎಂಬೆಡೆಗಳಲ್ಲಿ ಘೋರವಾದ ಯುದ್ಧಗಳಾದವು. ಎರಡನೆಯ ಯುದ್ಧದಲ್ಲಿ ಇಂಗ್ಲಿಷರಿಗೆ ಹೆಚ್ಚಿನ ಹಾನಿಯಾಯಿತು. ಆದರೆ ಕೊನೆಯ ಯುದ್ಧದಲ್ಲಿ ಬಾಪೂ ಗೋಖಲೆಯು ಹತನಾಗಲು ಮರಾಠರ ಸೈನ್ಯವು ಸೋತಿತು ಈ ಸುದ್ದಿಯನ್ನು ಕೇಳಿ ಬಾಜೀರಾಯನು ಸಿಂಧೆ ಹೋಳಕರರ ನೆರವು ಹೊಂದಬೇಕೆಂದು ಉತ್ತರಕ್ಕೆ ಓಡಿ ಹೋಗುತ್ತಿರಲು ಇಂಗ್ಲಿಷರ ಕೈಗೆ ಸಿಕ್ಕನು.

ಅತ್ತ ಹೋಳಕರ ಭೋಸಲೆಯರು ಬಾಜೀರಾಯನ ನೆರವಿಗೆ ಬರಲು ಸಜ್ಜಾಗಿದ್ದರು. ಆಗ ಇಂಗ್ಲಿಷರು ಹೋಳಕರನನ್ನು **ಮಹಿದಪುರ**ದ ಬಳಿಯಲ್ಲಿಯೂ ಭೋಸಲೆಯನ್ನು **ಸೀತಾಬರಡಿ**ಯ ಬಳಿಯಲ್ಲಿಯೂ ಸೋಲಿಸಲು ಇಬ್ಬರೂ ಸಹಾಯಕ ಸೈನ್ಯವನ್ನಿಟ್ಟುಕೊಳ್ಳಲು ಒಪ್ಪಿದರು.

ಬಳಿಕ ಇಂಗ್ಲಿಷರು ಬಾಜೀರಾಯನಿಗೆ ವರ್ಷಕ್ಕೆ ೮ ಲಕ್ಷ ರೂಪಾಯಿ ಉಂಬಳಿಯನ್ನು ಗೊತ್ತುಮಾಡಿ ಅವನನ್ನು **ಬಿಠೂರ** ಎಂಬಲ್ಲಿ ಇಡಿಸಿದರು. ಮತ್ತು ಸಾತಾರೆಯ ಪ್ರತಾಪಸಿಂಹನಿಗೆ ೧೩ ಲಕ್ಷದ ಜಹಗೀರನ್ನು ಉಳಿಸಿ, ಉಳಿದ ಮರಾಠರ ರಾಜ್ಯವನ್ನೆಲ್ಲ ತಮ್ಮ ರಾಜ್ಯಕ್ಕೆ ಕೂಡಿಸಿಕೊಂಡರು. ಕ್ರಿ. ಶ **೧೮೧೮.**

**೭. ಮರಾಠರ ರಾಜ್ಯದ ಅಳಿಗಾಲದ ಕಾರಣಗಳು**:— **೧.** ಶಿವಾಜಿ ಮಹಾರಾಜನಲ್ಲಿಯ ರಾಷ್ಟ್ರಾಭಿಮಾನ, ಸ್ವಾರ್ಥತ್ಯಾಗ ಈ ಗುಣಗಳು ಮುಂದಿನ ಅರಸರಲ್ಲಿ, ಪೇಶವೆಯರಲ್ಲಿ ಮತ್ತು ಸರದಾರರಲ್ಲಿ ಇರಲಿಲ್ಲ. **೨.** ಸರಂಜಾಮು

ಗಳನ್ನು ಪಡೆದ ಸರದಾರರು ತಮ್ಮ ತಮ್ಮ ಮಣ್ಣು-ಹೊನ್ನುಗಳನ್ನು ಹೆಚ್ಚಿಸುವ ಆಬ್ಬರದಲ್ಲಿ ಪ್ರಜಾಹಿತವನ್ನೂ ಮಧ್ಯವರ್ತಿ ಸರಕಾರದ ಹಿತಾಹಿತಗಳನ್ನೂ ಲಕ್ಷಿಸಲಿಲ್ಲ. **೩.** ಸ್ವಾರ್ಥ, ಮತ್ಸರ ಇವುಗಳ ಮೂಲಕ ಸರದಾರರು ತಮ್ಮ ತಮ್ಮೊಳಗೂ ಪೇಶವೆಯೊಡನೆಯೂ ಕಾದುತ್ತಿದ್ದದರಿಂದ ಒಟ್ಟಿನಮೇಲೆ ಮರಾಠ ರಾಜ್ಯದ ಕಸುವು ಕುಂದಿತು. **೪.** ಪಾನಿಪತದ ಯುದ್ಧದಲ್ಲಿ ಮಹಾ-ರಾಷ್ಟ್ರದಲ್ಲಿಯ ಲಕ್ಷಾಂತರ ವೀರರು ಗತಿಸಿದ್ದರಿಂದ ಉಂಟಾದ ಶಾರೀರಿಕ-ಬೌದ್ಧಿಕ ಸಾಮರ್ಥ್ಯಗಳ ಕೊರತೆ. **೫.** ಹಿರಿಯ ಮಾಧವರಾಯನ ತರುವಾಯ ಸರದಾರರನ್ನು ಅಂಕಿತದಲ್ಲಿಟ್ಟುಕೊಳ್ಳುವಂಥ ಸಮರ್ಥನಾದ ಪೇಶವೆಯು ಯಾವನೂ ಆಗಲಿಲ್ಲ. **೬.** ಮರಾಠ ರಾಜ್ಯವು ಸುಧಾರಿಸಿತೆನ್ನುವಷ್ಟರಲ್ಲಿ ಸ. ಮಾಧವರಾಯನೂ ರಾಜ್ಯಕ್ಕೆ ಆಧಾರವೆನಿಸಿದ ವೀರರೂ ಮುತ್ಸದ್ದಿಗಳೂ ಮರಣಹೊಂದಿದರು. **೭.** ಹಡಗುಪಡೆ, ಭೂಸೈನ್ಯ, ಶಸ್ತ್ರಾಸ್ತ್ರಗಳು ಇವುಗಳ ಸಂಬಂಧದ ಹೆಚ್ಚಿನ ಶಿಕ್ಷಣದಲ್ಲಿ ತಮ್ಮವರನ್ನು ತರಬೇತುಮಾಡದೆ, ಪೆಟ್ಟು ತಿಂದು ಎಚ್ಚರಾದ ಬಳಿಕ, ಫ್ರೆಂಚ ಮೊದಲಾದ ಪರಕೀಯ ಅಧಿಕಾರಿ ಗಳಿಂದ ಸೈನ್ಯವನ್ನು ತಿದ್ದುವ ಪ್ರಯತ್ನ ಮಾಡಿದರು. ಈ ಪರಾವಲಂಬನವು ಪ್ರಸಂಗದಲ್ಲಿ ಮುಳುವಾಯಿತು. **೮.** ಅವಿವೇಕಿಯೂ ಹೇಡಿಯೂ ಆದ ಎರಡನೆಯ ಬಾಜೀರಾಯನು ಪೇಶವೆಯಾಗಿ ಕಾಲಾಂತರದಲ್ಲಿ ಮುಳುಗ-ಬಹುದಾಗಿದ್ದ ರಾಜ್ಯವನ್ನು ಬೇಗ ಮುಳುಗಿಸಿದನು.

---

# ೧೦ನೆಯ ಪಾಠ

## ಲಾರ್ಡ ವೆಲಸ್ಲಿ (೧೭೯೮-೧೮೦೫)

**೧. ವೆಲಸ್ಲಿಯು ಬರಲು ಕಾರಣ ಮತ್ತು ಆಕಾಲದ ಹಿಂದುಸ್ತಾನದ ಸ್ಥಿತಿ:**— ೧. ಕ್ರಿ. ಶ. ೧೭೮೯ರಲ್ಲಿ **ಫ್ರಾನ್ಸದ** ರಾಜ್ಯ ಕ್ರಾಂತಿಯಾದ ನಂತರ **ನೆಪೋಲಿಯನ್‌ನು** ಆ ದೇಶದ ಒಡೆಯನಾದನು. ಅವನು ಇಂಗ್ಲಿಷರನ್ನು ಹಿಮ್ಮೆಟ್ಟಿಸಿ ಯುರೋಪದಲ್ಲಿ ಫ್ರಾನ್ಸದ ವರ್ಚಸ್ಸನ್ನು ನೆಲೆಗೊಳಿಸುವ ಮಹಾತ್ವಾಕಾಂಕ್ಷೆಯನ್ನು ತಾಳಿ, ಅವರೊಡನೆ ಯುದ್ಧವನ್ನು ಹೂಡಿದ್ದನು ಯುರೋಪದಲ್ಲಿ ಇಂಗ್ಲಿಷರ ಕಸುವು ಕುಂದಬೇಕಾದರೆ ಹಿಂದುಸ್ಥಾನದಲ್ಲಿಯು

ಅವರ ವರ್ಚಸ್ಸನ್ನು ನಾಶಗೊಳಿಸುವದು ಅವಶ್ಯವೆಂದೆನಿಸಿದ್ದರಿಂದ ಅವನು **ಇಜಿಪ್ತ-ಏಶಿಯಾಮೈನರಗಳನ್ನು** ವಶಮಾಡಿಕೊಂಡ ಬಳಿಕ ಹಿಂದುಸ್ಥಾನಕ್ಕೆ ಬರಲು ಹವಣಿಸುತ್ತಿದ್ದನು.



**ನೆಪೋಲಿಯನ್ ಬೋನಾಪಾರ್ಟೆ**

೨. ಮರಾಠರು ಖರಡೆಯ ಕಾಳಗದಲ್ಲಿ ನಿಜಾಮನನ್ನು ಸೋಲಿಸಿ ಅವನ ಅರ್ಧ ರಾಜ್ಯವನ್ನು ಕಸಿದುಕೊಂಡು ಪ್ರಬಲರಾಗಿದ್ದರು. **೩ ಸಿಂಧೆ, ಹೋಳಕರ, ಭೋಸಲೆ** ಇವರು ಫ್ರೆಂಚ ಅಧಿಕಾರಿಗಳಿಂದ ತಮ್ಮ ಸೈನ್ಯವನ್ನು ತಿದ್ದಿಕೊಂಡು ಒಗರಿನಿಂದ ನಡೆಯುವವರಾಗಿದ್ದರು. ಆದರೂ ಅವರಲ್ಲಿ ಒಳಜಗಳಗಳು ಮತ್ತೆ ಬೆಳೆಯತೊಡಗಿದ್ದವು ೪ ಇಂಗ್ಲಿಷರು ಹೊತ್ತಿಗೆ ನೆರವಾಗಲಿಲ್ಲೆಂದು ಸಿಟ್ಟಿಗೆದ್ದ **ನಿಜಾಮನು** ಫ್ರೇಂಚರಿಂದ ೧೪ ಸಾವಿರ ಸೈನ್ಯ

ವನ್ನು ಸಜ್ಜುಗೊಳಿಸಿದ್ದನು **೫. ಟೀಪುವು** ಭಾರಿಯಾದ ಸೈನ್ಯವನ್ನಿಟ್ಟುಕೊಂಡು ಕಳೆದು ಹೋದ ರಾಜ್ಯವನ್ನು ಗಳಿಸಲು ಹೊಂಚುಹಾಕಿಕೊಂಡಿದ್ದನು. ಅಯೋಧ್ಯೆಯ **ವಜೀರನು** ಮಾತ್ರ ತೀರ ದುರ್ಬಲನಾಗಿದ್ದನು. ಎಲ್ಲ ಅರಸರ ಬಳಿಯಲ್ಲಿ ಫ್ರೆಂಚರ ಸುಳಿದಾಟವೇ ಹೆಚ್ಚಾಗಿದ್ದಿತು.

ಹೀಗೆ ಪರಿಸ್ಥಿತಿಯಿರಲು ತಟಸ್ಥವೃತ್ತಿಯ ಧೋರಣೆಯಿಂದ ಕೆಲಸ ವಾಗದೆಂದು ಇಂಗ್ಲಿಷ ಮುತ್ಸದ್ದಿಗಳೂ ಡಾಯರೆಕ್ಟರರೂ ಅರಿತುಕೊಂಡರು. ಅವರು ಸರ್ ಜಾನ್ ಶೋರನನ್ನು ಕರೆಯಿಸಿಕೊಂಡು **ವೆಲಸ್ಲಿಯನ್ನು** ಗ. ಜನರಲನನ್ನಾಗಿ ಆರಿಸಿ ಕಳುಹಿದರು.

**೨. ಸಹಾಯಕ ಸೈನ್ಯ** ( ಸಬ್ ಸಿಡಿಯರಿ ) **ಪದ್ಧತಿ** :— ಹಿಂದು-ಸ್ತಾನಕ್ಕೆ ಬಂದ ಬಳಿಕ, ವೆಲಸ್ಲಿಯು ಇಲ್ಲಿಯ ಸ್ಥಿತಿಗತಿಯನ್ನು ಚೆನ್ನಾಗಿ ನೋಡಿಕೊಂಡನು ಮತ್ತು ಫ್ರೆಂಚರನ್ನು ಕುಗ್ಗಿಸಿ, ಈ ದೇಶದ ಅರಸರನ್ನು ತಮ್ಮ ಅಂಕಿತದಲ್ಲಿಟ್ಟುಕೊಳ್ಳಲು ಅನುಕೂಲವಾಗುವಂಥ ಒಂದು ಯೋಜನೆಯನ್ನು ಕಂಡುಹಿಡಿದನು. ಈ ಯೋಜನೆಗೆ **ಸಹಾಯಕ ಸೈನ್ಯ ಪದ್ಧತಿ** ಎಂಬ ಹೆಸರು. ಇದಕ್ಕೆ ಒಳಗಾದ ಅರಸರು **ಅನುಸರಿಸತಕ್ಕ ನಿಯಮಗಳು**-**೧.** ಈ ದೇಶದ ಅರಸರು ತಮ್ಮ ರಕ್ಷಣೆಗಾಗಿ ಇಂಗ್ಲಿಷರ ಸೈನ್ಯವನ್ನು ಇಟ್ಟುಕೊಳ್ಳಬೇಕು **೨.** ಆ ಸೈನ್ಯದ ವೆಚ್ಚಕ್ಕಾಗಿ ತಕ್ಕಷ್ಟು ಸೀಮೆಯನ್ನು ಹಂಚಿ ಕೊಡಬೇಕು. **೩** ಇಂಗ್ಲಿಷರ ಹೊರತಾಗಿ ಬೇರೆ ಯುರೋಪಿಯನರನ್ನು ಕೆಲಸಕ್ಕೆ ಇಟ್ಟುಕೊಳ್ಳಲಾಗದು. **೪.** ಇಂಗ್ಲಿಷ **ರೆಸಿಡೆಂಟನನ್ನು** ತಮ್ಮಲ್ಲಿ ಇಟ್ಟುಕೊಳ್ಳಬೇಕು. **೫.** ಇಂಗ್ಲಿಷರ ಒಪ್ಪಿಗೆಯನ್ನು ಪಡೆದುಕೊಳ್ಳದೆ ಬೇರೆಯವರ ಕೂಡ ಯುದ್ಧ-ಒಪ್ಪಂದಗಳನ್ನು ಮಾಡಕೂಡದು. **೬.** ತಮಗೂ ಬೇರೆ ಅರಸರಿಗೂ ಜಗಳ ಹತ್ತಿದಲ್ಲಿ ಅದನ್ನು ಇಂಗ್ಲಿಷರ ಮುಂದಿಟ್ಟು ತೀರಿಸಿಕೊಳ್ಳಬೇಕು.

**೩. ಸಹಾಯಕ ಸೈನ್ಯ ಪದ್ಧತಿಯ ಬಳಕೆ** :- ಮೊದಲು ವೆಲಸ್ಲಿಯು **ನಿಜಾಮನಿಗೆ** ಈ ಪದ್ಧತಿಗೆ ಒಳಗಾಗಬೇಕೆಂದು ತಿಳಿಸಿದನು. ಇಂಗ್ಲಿಷರ ಮೇಲೆ ಅವನು ಸಿಟ್ಟಾಗಿದ್ದರೂ ವಿರೋಧಿಸುವ ಸಾಮರ್ಥ್ಯವಿಲ್ಲದುದರಿಂದ ನಿರುಪಾಯನಾಗಿ ಸಹಾಯಕ ಸೈನ್ಯವನ್ನು ಇಟ್ಟುಕೊಂಡು ಅವರ ಮಾಂಡಲಿಕನಾದನು. **ಕ್ರಿ. ಶ. ೧೭೯೮. ಅಯೋಧ್ಯೆಯ ವಜೀರನಿಗೆ** ಸೈನ್ಯದ ನೆರವು ಕೊಟ್ಟು

ವೆಚ್ಚವನ್ನು ಅವನಿಂದ ತೆಗೆದುಕೊಳ್ಳುವ ರೀತಿಯು ಹೆಸ್ಟಿಂಗ್ಸನ ಕಾಲದಿಂದ ನಡೆದಿತ್ತು. ಶೋಅರನ ಆಳಿಕೆಯಲ್ಲಿ ವಜೀರನು ಇಂಗ್ಲಿಷರ ಸೈನ್ಯವನ್ನು ತನ್ನ ನೆರವಿಗೆ ಇಟ್ಟುಕೊಂಡಿದ್ದನು. ಈಗ ವೆಲಸ್ಲಿಯು ಅದೇ ಸೈನ್ಯವನ್ನು ಹೆಚ್ಚಿಸಿ ಆದರ ವೆಚ್ಚಕ್ಕೆಂದು **ಕೋರಾ, ಅಲಹಾಬಾದ, ರೋಹಿಲಖಂಡ** ಎಂಬ ಪ್ರಾಂತಗಳನ್ನು ವಜಿರನಾದ ಸಾದತ ಅಲಿಯಿಂದ ತೆಗೆದುಕೊಂಡನು. (೧೮೦೧) **ಗಾಯಕವಾಡದ ಆನಂದರಾಯನು** ದುರ್ಬಲನಾಗಿದ್ದುದರಿಂದ ಅವನೂ ಸ. ಸೈನ್ಯ ಪದ್ಧತಿಯನ್ನು ಒಪ್ಪಿಕೊಂಡನು. ಮುಂದೆ ತುಸು ದಿನಗಳಲ್ಲಿಯೇ **೨ನೆಯ ಬಾಜೀರಾಯ**ನು ವಸಯಿಗೆ ಓಡಿಹೋಗಿ ವೆಲಸ್ಲಿಯ ಸ. ಸೈನ್ಯ ಪದ್ಧತಿಗೆ ಒಳಗಾದನು ಕ್ರಿ ಶ ೧೮೦೨

೪. **ಮೈಸೂರಿನ ನಾಲ್ಕನೆಯ ಯುದ್ಧ**:— ಕ್ರಿ ಶ **೧೭೯೯.** ಟೀಪುವು ಕಳೆದುಕೊಂಡ ರಾಜ್ಯವನ್ನು ಗಳಿಸುವ ನಿಶ್ಚಯದಿಂದ ತನ್ನ ಸೈನ್ಯವನ್ನು ಬೆಳೆಸಿ. ತಿದ್ದಿದ್ದಲ್ಲದೆ ಫ್ರೆಂಚ ಸೈನ್ಯದ ನೆರವನ್ನೂ ಪಡೆದಿದ್ದನು ನೆರವಿಗಾಗಿ ನಿಜಾಮ – ಮರಾಠರ ಸಂಗಡ ಒಳಸಂಚು ನಡೆಸಿದ್ದನು. ಅಲ್ಲದೆ **ನೆಪೋಲಿಯನ**ನಿಗೂ ಅಫಗಾನಿಸ್ಥಾನದ **ಝಮಾನಶಾಹ**ನಿಗೂ ಹಿಂದು-ಸ್ಥಾನದ ಮೇಲೆ ಸಾಗಿ ಬರಲು ತಿಳಿಸಿದ್ದನು.

ಹೀಗಿರಲು ನಿಜಾಮನನ್ನು ವಶಮಾಡಿಕೊಂಡು ಬಳಿಕ ವೆಲಸ್ಲಿಯು ಟೀಪುವಿಗೆ ಸ ಸೈನ್ಯವನ್ನು ಇಟ್ಟುಕೊಳ್ಳಬೇಕೆಂದು ತಿಳಿಸಿದನು ಟೀಪುವು ಈ ಮಾತನ್ನು ಧಿಕ್ಕರಿಸಲು, ವೆಲಸ್ಲಿಯು ನಿಜಾಮ ಮರಾಠರನ್ನು ನೆರವಿಗೆ ಕರೆದು ಯುದ್ಧಕ್ಕೆ ಅಣಿಯಾದನು ನಿಜಾಮನು ನೆರವಾದನು ಮನೆ–ಜಗಳದ ಮೂಲಕ ಮರಾಠರ ನೆರವು ಸಿಗಲಿಲ್ಲ. ಬಳಿಕ ವೆಲಸ್ಲಿಯು ಮದ್ರಾಸಕ್ಕೆ ಬಂದು, ಜನರಲ್ **ಹ್ಯಾರಿಸ**ನ ಸೈನ್ಯವನ್ನು ಟೀಪುವಿನ ಮೇಲೆ ಬಿಟ್ಟನು ಮುಂಬಯಿಯಿಂದ ಹೊರಟ ಸ್ಟುಅರ್ಟನ ಸೈನ್ಯವು ಸಮುದ್ರ ಮಾರ್ಗವಾಗಿ ಕುರ್ಗ (ಕೊಡಗು) ಪ್ರಾಂತಕ್ಕೆ ಬಂದು ಟೀಪುವಿನ ಮೇಲೆ ಸಾಗಿತು. ಎರಡೂ ಇಂಗ್ಲಿಷ ಸೈನ್ಯಗಳು ಕೂಡುವ ಮೊದಲೇ ಟೀಪುವು ಸ್ಟುಅರ್ಟನ ಸೈನ್ಯವನ್ನು ಎರಗಿ ತಾನೇ ಸೋತನು ಬಳಿಕ ಅವನು ಹ್ಯಾರಿಸನ ಸೈನ್ಯಕ್ಕೆ ಇದಿರಾಗಿ ಮಳವಳ್ಳಿಯ ಬಳಿಯಲ್ಲಿ ಮತ್ತೆ ಸೋತು, ಹಿಮ್ಮೆಟ್ಟಿ

ಶ್ರೀರಂಗಪಟ್ಟಣದ ಕೋಟೆಯನ್ನು ಆಶ್ರಯಿಸಿದನು ಬಳಿಕ ವೆಲಸ್ಲಿಯ ತಮ್ಮನಾದ ಅರ್ಥರ ವೆಲಸ್ಲಿಯು ಮುಂದಾಗಿ ಕೋಟೆಯನ್ನು ಮುತ್ತಿದನು. ಟೀಪುವು ಧೈರ್ಯದಿಂದ ಮುತ್ತಿಗೆಯನ್ನು ತಡೆದನು. ಕಡೆಗೆ ತೋಫುಗಳ ಹೊಡೆತಕ್ಕೆ ಗೋಡೆಯು ಒಡೆಯಲು ಇಂಗ್ಲಿಷ ಸೈನ್ಯವು ಒಳನುಗ್ಗಿತು. ಅಲ್ಲಿ ಘೋರ ಕಾಳಗವಾಗಿ ಇಂಗ್ಲಿಷರಿಗೆ ಜಯ ದೊರೆಯಿತು. ಬಳಿಕ ಅರ್ಥರ ವೆಲಸ್ಲಿಯು ಟೀಪುವನ್ನು ಹುಡುಕುತ್ತ ಅರಮನೆಗೆ ಹೋದನು. ಕಡೆಗೆ ಟೀಪುವಿನ ಶವವು ಉತ್ತರದ ಅಗಸೆಯ ಬಾಗಿಲ ಬಳಿಯಲ್ಲಿ ಸಿಕ್ಕಿತು. ಅವನಿಗೆ ಗುಂಡು ತಾಗಿದ್ದಲ್ಲದೆ, ಹಲವು ಗಾಯಗಳಾಗಿದ್ದವು. ಆ ಶವವು ಮರು-ದಿನ ಮರ್ಯಾದೆಯಿಂದ ಹೈದರನ ಗೋರಿಯ ಹತ್ತರವೇ ಹುಗಿಯಲ್ಪಟ್ಟಿತು



ಅರ್ಥರ ವೆಲಸ್ಲಿ

೫. ಮೈಸೂರಿನ ರಾಜ್ಯದ ವ್ಯವಸ್ಥೆ:— ಟೀಪುವಿನ ಅರ್ಧ ರಾಜ್ಯವು ಇಂಗ್ಲಿಷರಿಗೂ ಅರ್ಧ ರಾಜ್ಯವು ನಿಜಾಮನಿಗೂ ಸಲ್ಲತಕ್ಕದ್ದು; ಆದರೆ ವೆಲಸ್ಲಿಯು ಮೈಸೂರಿನ ಮುಂಚಿನ ಅರಸರ ವಂಶಜನಾದ **ಮುಮ್ಮಡಿ ಕೃಷ್ಣರಾಜ** ಎಂಬ ೫ ವರ್ಷದ ಹುಡುಗನನ್ನು ಮೈಸೂರಿನ ಅರಸನನ್ನು ಮಾಡಿದನು ಮತ್ತು ಹೈದರ ಟೀಪು ಇವರು ಹೊಸದಾಗಿ ಆ ರಾಜ್ಯಕ್ಕೆ ಸೇರಿಸಿಕೊಂಡ ಸೀಮೆಗಳನ್ನಷ್ಟೆ ಇಂಗ್ಲಿಷ ನಿಜಾಮರಲ್ಲಿ ಹಂಚಿದನು. ಮೈಸೂರಿನ ಒಡೆಯರು ಸಸೈನ್ಯ ಪದ್ಧತಿಗೆ ಒಪ್ಪಿ ಇಂಗ್ಲಿಷರ ಅಧೀನರಾದರು. ಟೀಪುವಿನ ಮಕ್ಕಳು ವರ್ಷಾಸನವನ್ನು ಪಡೆದು ವೆಲ್ಲೂರಲ್ಲಿ ಇರಿಸಲ್ಪಟ್ಟರು.

---

# ೧೧ ನೆಯ ಪಾಠ

## ಲಾರ್ಡ ವೆಲಸ್ಲಿ (ಮುಂದೆ ಸಾಗಿದ್ದು)

೧. **ಮೈಸೂರಿನ ಯುದ್ಧದ ಪರಿಣಾಮ :—** ಟೀಪುವಿನಂಥ ಬಲವುಳ್ಳ ಹಗೆಯನ್ನು ಅಡಗಿಸಿದ್ದರಿಂದ ವೆಲಸ್ಲಿಗೆ **ಮಾರ್ಕ್ವಿಸ್** ಎಂಬ ಬಿರುದು ಸಿಕ್ಕಿತು. ಫ್ರೇಂಚರು ಹಿಂದುಸ್ಥಾನದಲ್ಲಿ ಬಲಗೊಳ್ಳುವ ಹೆದರಿಕೆಯು ತಪ್ಪಿತು. ಟೀಪುವಿನಂತೆ ವಿರೋಧಿಗಳಾಗುವವರನ್ನು ಹಣಿಯುವದು ಹಗುರಾಯಿತು.

೨. **ಟೀಪುವಿನ ಸ್ವಭಾವವೂ ಯೋಗ್ಯತೆಯೂ :—** ಇವನು ಹೆಸರಾದ ಸೇನಾಪತಿಯಾಗಿದ್ದನು. ಇವನ ವೈಕಸುವೂ ಕಲಿತನವೂ ಹೆಚ್ಚಿನವಿದ್ದವು. ಇವನನ್ನು ಒಬ್ಬರೇ ಸೋಲಿಸಲು ಯಾರೂ ಶಕ್ತರಿರಲಿಲ್ಲ. ಆದುದರಿಂದಲೆ ಇವನೊಡನೆ ಆದ ಎರಡು ಯುದ್ಧಗಳಲ್ಲಿ ಇಂಗ್ಲಿಷರು ನಿಜಾಮ-ಮರಾಠರ ನೆರವನ್ನು ಬಯಸಬೇಕಾಯಿತು. ಕೊಡಗಿನ ಬಹು ಜನರನ್ನು ಮುಸಲ್ಮಾನರನ್ನು ಮಾಡಿದ ಸಂಗತಿಯು ಇವನ ಧರ್ಮಪ್ರಸಾರದ ಹಂಬಲವನ್ನು ತೋರಿಸುವದು. ಆದರೆ ತನ್ನ ರಾಜ್ಯದಲ್ಲಿ ಇಂಥ ಕೆಲಸಗಳಿಗೆ ಕೈಹಾಕದೆ ಅಲ್ಲಿ ಇವನು ಶಾಂತತೆಯನ್ನು ಕಾದುಕೊಂಡಿದ್ದನು. ಮಹಮ್ಮದೀಯ ಸಂಸ್ಕೃತಿಯನ್ನು ಅನುಸರಿಸಿದ ಹೊಸ ತೂಕ, ಅಳತೆ. ಕಾಲುಗಣನೆ ಇವುಗಳನ್ನು ಬಳಕೆಯಲ್ಲಿ ತರಲು ಪ್ರಯತ್ನಿಸಿದನು. ಓದು-ಬರೆಹಗಳನ್ನು ಚನ್ನಾಗಿ ಅರಿತಿದ್ದನು ಇವನ ಗ್ರಂಥಸಂಗ್ರಹವನ್ನು ಇವನ ತರುವಾಯ ವೆಲಸ್ಲಿಯು ಕಲಕತ್ತೆಗೆ ಒಯ್ದನು. **'ಆಡಾಗಿ ಇನ್ನೂರು ವರ್ಷ ಬದುಕುವದಕ್ಕಿಂತ ಹುಲಿಯಾಗಿ ಎರಡು ದಿವಸ ಬಾಳುವದು ಲೇಸು;'** ಎಂಬುವದು ಇವನ ವಿಚಾರ ಅಂತೇ ಸಹಾಯಕ ಸೈನ್ಯ ಪದ್ಧತಿಯನ್ನು ಮೆಚ್ಚದೆ **'ಗೆಲ್ಲುವೆನು ಇಲ್ಲವೆ ಸಾಯುವೆನು'** ಎಂಬ ನಿಶ್ಚಯದಿಂದ ಕಾದಿದನು. ದುರಾಗ್ರಹಿಯೂ ಧೂರ್ತತನವಿಲ್ಲದವನೂ ಆದದರಿಂದ ಇವನ ಸುತ್ತಲೆಲ್ಲ ಹಗೆಗಳುಂಟಾದರು. ಈ ಹಗೆಗಳು ಒಟ್ಟಾಗಿ ಏರಿಬಂದದರಿಂದಲೂ ಫ್ರೇಂಚರ ನೆರವು ಹೊತ್ತಿಗೆ ಸಿಗದ್ದರಿಂದಲೂ ಇವನ ಪ್ರಯತ್ನಗಳೆಲ್ಲ ಹುಸಿಯಾದವು. **ಹೈದರನು** ತನ್ನ ಮಗನ ಸ್ವಭಾವದೋಷವನ್ನರಿತು, 'ಇವನು ಎಲ್ಲಿ ರಾಜ್ಯವನ್ನು ಕಳೆದುಕೊಳ್ಳುವನೋ! ಎಂದು ಸಂಶಯಗೊಂಡಿದ್ದನು. ಆ ಸಂಶಯವು ಸುಳ್ಳಾಗಲಿಲ್ಲ. ಟೀಪುವು ೧೭ ವರ್ಷ ರಾಜ್ಯವಾಳಿ ೫೦ ವರ್ಷದವನಿರಲು ಹತನಾದನು.

**೩. ವೆಲಸ್ಲಿಯು ಕಸಿದುಕೊಂಡ ರಾಜ್ಯಗಳು:— ೧. ತಂಜಾವರ.** ಕ್ರಿ ಶ **೧೭೮೭** ರಲ್ಲಿ ಅರಸನಾಗಿದ್ದ ತುಳಾಜಿಯು ಸಾಯಲು ಪಟ್ಟದ ಸಲುವಾಗಿ ಜಗಳಗಳು ನಡೆದವು ವೆಲಸ್ಲಿಯು ಪರಸೋಜಿಯ ಬಾಧ್ಯತೆಯನ್ನು ಒಪ್ಪಿ ಅವನಿಗೆ ವರ್ಷಾಶನವನ್ನು ಗೊತ್ತು ಮಾಡಿ, ಆರಾಜ್ಯವನ್ನು ಕಂಪನಿಯ ರಾಜ್ಯಕ್ಕೆ ಕೂಡಿಸಿದನು. ಕ್ರಿ. ಶ. **೧೭೯೯. ೨. ಸುರತ್**— ಸುರತದ ನವಾಬನು ಕ್ರಿ. ಶ. **೧೭೯೯** ರಲ್ಲಿ ಸಾಯಲು ಅವನ ವಾರಸದಾರರಿಗೆ ವರ್ಷಾಶನವನ್ನು ಕೊಟ್ಟು ವೆಲಸ್ಲಿಯು ಆ ರಾಜ್ಯವನ್ನು ಕಸಿದುಕೊಂಡನು **೩. ಅರ್ಕಾಟ್**— ಕ್ರಿ ಶ ೧೭೯೫ರಲ್ಲಿ ಮಹಮ್ಮದಲಿಯು ಸಾಯಲು ಅವನ ಮಗನಾದ **ಉಮದತ್-ಉಲ್-ಉಮರನು** ನವಾಬನಾದನು ಇವನೂ ಕ್ರಿ. ಶ ೧೮೦೧ ರಲ್ಲಿ ಸತ್ತನು ಇವನು ಟೀಪುವಿನೊಡನೆ ಒಳಸಂಚು ನಡೆಸಿದ್ದನೆಂಬ ನೆವದಿಂದ ವೆಲಸ್ಲಿಯು ಇವನ ರಾಜ್ಯವನ್ನು ಕಸಿದುಕೊಂಡು ಇವನ ಮಕ್ಕಳಿಗೆ ವರ್ಷಾಶನವನ್ನು ಗೊತ್ತು ಮಾಡಿದನು.

**೪. ಮರಾಠರ ಎರಡನೆಯ ಯುದ್ಧ**:— ಕ್ರಿ ಶ **೧೮೦೨—೧೮೦೫.** ೨ನೆಯ ಬಾಜೀರಾಯನು ವಸಯಿಯ ಒಪ್ಪಂದದಿಂದ ಇಂಗ್ಲಿಷರ ವಶನಾದ ಬಳಿಕ ವೆಲಸ್ಲಿಯು ಸಿಂಧೆ, ಭೋಸಲೆ, ಹೋಳಕರರಿಗೆ ನೀವೂ ಸಹಾಯಕ ಸೈನ್ಯವನ್ನು ಇಟ್ಟುಕೊಳ್ಳಬೇಕೆಂದು ತಿಳಿಸಿದನು ಸಿಂಧೆ ಭೋಸಲೆಯರು ಇದಕ್ಕೊಪ್ಪಲಿಲ್ಲ. ಆದುದರಿಂದ ಯುದ್ಧವು ಆರಂಭವಾಯಿತು. ಆರ್ಥರ ವೆಲಸ್ಲಿಯು ಸಿಂಧೆಯ ಅಹಮುದನಗರವನ್ನು ವಶಮಾಡಿಕೊಂಡು ಮುಂದೆಸಾಗಿ ಸಿಂಧೆ, ಭೋಸಲೆ ಇವರ ಒಟ್ಟು ಸೈನ್ಯಕ್ಕೆ ಇದಿರಾಗಿ ಅದನ್ನು **ಅಸಯಿ** ಎಂಬಲ್ಲಿ ಸೋಲಿಸಿದನು. ಬಳಿಕ ಭೋಸಲೆಯೊಬ್ಬನ ಸೈನ್ಯವನ್ನು **ಅಡಗಾವದ** ಬಳಿಯಲ್ಲಿ ಸೋಲಿಸಿ, **ಗಾವಿಲಗಡ**ವನ್ನು ತೆಗೆದುಕೊಂಡನು. ಆಗ ಭೋಸಲೆಯು **ದೇವಗಾವ** ಎಂಬಲ್ಲಿ ಒಪ್ಪಂದ ಮಾಡಿಕೊಂಡನು ಕ್ರಿ. ಶ. **೧೮೦೩.** ಈ ಒಪ್ಪಂದದಿಂದ ಭೋಸಲೆಯು ಸ. ಸೈನ್ಯ ಪದ್ಧತಿಗೆ ಒಳಗಾಗಿ **ಕಟಕ, ಬಾಲಾಸೋರ** ಎಂಬ ಪ್ರಾಂತಗಳನ್ನು ಇಂಗ್ಲಿಷರಿಗೆ ಕೊಟ್ಟನು ಉತ್ತರದಲ್ಲಿ ಲೇಕನು **ಆಲೀಗಡ, ಬರ್ಹಾಣಪುರ** ಇವುಗಳನ್ನು ಕೈಸೇರಿಸಿಕೊಂಡು **ಲಾಸವಾರಿಯ** ಕೊನೆಯ ಯುದ್ಧದಲ್ಲಿ ಸಿಂದೆಯನ್ನು ಸೋಲಿಸಿದನು. ಆಗಸಿಂದೆಯು **ಸುರ್ಜಿ-ಅಂಜನಗಾವ** ಎಂಬಲ್ಲಿ ಒಡಂಬಡಿಕೆ ಮಾಡಿಕೊಂಡನು.

ಕ್ರಿ.ಶ.**೧೮೦೩.** ಇದರಿಂದ ಇವನು ಸಹಾಯಕ ಸೈನ್ಯವನ್ನಿಟ್ಟುಕೊಂಡು ಗಂಗಾ ಯಮುನೆಗಳ ನಡುಸೀಮೆ ಮುಂತಾದವುಗಳನ್ನು ಇಂಗ್ಲಿಷರಿಗೆ ಕೊಟ್ಟನು. ಅಲ್ಲದೆ ಷಾಹೆಅಲಮ, ಪೇಶವೆ, ನಿಜಾಮ ಇವರ ಮೇಲೆ ತನ್ನ ವರ್ಚಸ್ಸನ್ನು ನಡೆಯಿಸುವದಿಲ್ಲೆಂದು ಒಪ್ಪಿಕೊಂಡನು.

ಇಷ್ಟಾದ ಬಳಿಕ ಹೋಳಕರನು ಇಂಗ್ಲಿಷರೊಡನೆ ಯುದ್ಧಕ್ಕೆ ನಿಂತನು. ಇವನು ಗನೀಮಿ ಪದ್ಧತಿಯಿಂದ ಯುದ್ಧ ಮಾಡುತ್ತ **ಮಾನ್ಸನನ** ಸೈನ್ಯದ ಮೇಲೆ ಬಿದ್ದು ಅದನ್ನು ಸೋಲಿಸಿದನು ಆಗ ಇಂಗ್ಲಿಷರ ಮೂವರು ಸೇನಾಪತಿಗಳು ಮೂರು ಕಡೆಗಳಿಂದ ಇವನ ಮೇಲೆ ಸಾಗಿದರು. ಮುಂದೆ ಲೇಕನು **ಡೀಗ, ಫರುಕಾಬಾದ** ಇವುಗಳ ಬಳಿಯಲ್ಲಿ ಹೋಳಕರನನ್ನು ಸೋಲಿಸಲು ಅವನು ಶೀಖರ ಕಡೆಗೆ ಪಂಜಾಬಕ್ಕೆ ಓಡಿಹೋದನು. ಹೋಳಕರನು ಮಾನ್ಸನನನ್ನು ಸೋಲಿಸಿದ್ದನ್ನು ಕೇಳಿ ಸಿಂದೆಯು ಮತ್ತೆ ಯುದ್ಧದ ಸಿದ್ಧತೆಯನ್ನು ಮಾಡಲು ವೆಲಸ್ಲಿಯು ಅವನಿಗೆ **ಗ್ವಾಲ್ಹೇರ** ಪ್ರಾಂತವನ್ನು ಮರಳಿ ಕೊಟ್ಟು ಸಮಾಧಾನಗೊಳಿಸಿದನು. ಹೋಳಕರನನ್ನು ಸೋಲಿಸಿದ ಬಳಿಕ ಲೇಕನು ಅವನ ಸಹಾಯಕನಾದ ಭರತಪುರದ ಜಾಟನ ಮೇಲೆ ಸಾಗಿ ನಾಲ್ಕು ಸರತಿ ಅಪಜಯ ಹೊಂದಿದನು.

ಮಾನ್ಸನ್, ಲೇಕ ಇವರ ಅಪಜಯದ ಸುದ್ದಿಯು ಇಂಗ್ಲಂಡಕ್ಕೆ ಮುಟ್ಟಿತು. ವೆಲಸ್ಲಿಯ ರಾಜ್ಯವಿಸ್ತಾರದ ಧೋರಣೆಯನ್ನು ತಡೆಯುವದೆ ವಿಹಿತವೆಂದು ಡಾಯರೆಕ್ಟರರು ಅವನನ್ನು ಕರೆಯಿಸಿಕೊಂಡರು. ಮತ್ತು ಕಾರ್ನವಾಲೀಸನನ್ನು ಎರಡನೆಯ ಸರತಿ ಗ ಜನರಲನ ಕೆಲಸಕ್ಕೆ ನಿಯಮಿಸಿ, ಮರಾಠರ ಯುದ್ಧವನ್ನು ಮುಗಿಸಿ ಅವರೊಡನೆ ಸ್ನೇಹದ ಒಡಂಬಡಿಕೆ ಮಾಡಿಕೊಳ್ಳುವಂತೆ ಅಪ್ಪಣೆ ಕೊಟ್ಟರು. ಆ ಮೇರೆಗೆ ಹೋಳಕರ, ಭರತಪುರದ ಅರಸು, ಸಿಂದೆ ಇವರೊಡನೆ ಒಪ್ಪಂದವಾಗಲು ಯುದ್ಧವು ಮುಗಿಯಿತು. ಕ್ರಿ. ಶ. **೧೮೦೫.**

**೫. ವೆಲಸ್ಲಿಯ ಯೋಗ್ಯತೆ**:— ಸಹಾಯಕ ಸೈನ್ಯ ಪದ್ಧತಿಯ ಯೋಜನೆಯು ವೆಲಸ್ಲಿಯ ಧೈರ್ಯ, ಮುತ್ಸದ್ದಿತನ, ನಿಶ್ಚಯ ಶಕ್ತಿಗಳ ಸಾಕ್ಷಿಯಾಗಿದೆ. ಇವನು ಕೈಕೆಳಗಿನವರ ಯೋಗ್ಯತೆಯನ್ನು ಕಂಡುಹಿಡಿದು ಅವರಿಂದ ಮಹತ್ವದ ಕೆಲಸಗಳನ್ನು ಕಡೆಗಾಣಿಸಿದನು. ತನ್ನ ಬುದ್ಧಿ-ಸಾಹಸಗಳ ಬಲ

ದಿಂದಲೂ ಸರ್ ಜಾನ್ **ಮಾಲಕಮ್, ಲೇಕ, ಅರ್ಥರ ವೆಲಸ್ಲಿ** ಮೊದಲಾದ ಸಂಗಡಿಗರ ನೆರವಿನಿಂದಲೂ ಹಿಂದುಸ್ಥಾನದಲ್ಲಿಯ ಇಂಗ್ಲಿಷರ ರಾಜ್ಯವನ್ನು ಬೆಳೆಸಿ, ಸ್ಥಿರಗೊಳಿಸಿದನು. **ಮರಾಠರು** ತಮ್ಮ ಸಾಮ್ರಾಜ್ಯವನ್ನು ಹಬ್ಬಿಸುವದಕ್ಕಾಗಿ **ಚೌಥಾಯಿ, ಸರದೇಶಮುಖಿಗಳ** ಪದ್ಧತಿಯನ್ನು ಅವಲಂಬಿಸಿದರು; ವೆಲಸ್ಲಿಯು ಅದಕ್ಕಾಗಿಯೆ **ಸ. ಸೈನ್ಯ** ಪದ್ಧತಿಯನ್ನು ಯೋಜಿಸಿದನು. ವೈರಿಗಳ ಬಲದಿಂದಲೆ ವೈರಿಗಳನ್ನು ಅಂಕಿತದಲ್ಲಿ ತರುವದು ಎರಡೂ ಪದ್ಧತಿಗಳ ಉದ್ದೇಶವಾಗಿದೆ.

---

## ೧೨ನೆಯ ಪಾಠ

### ಲಾರ್ಡ ಕಾರ್ನವಾಲೀಸ. ಸರ್ ಜಾರ್ಜ ಬಾರ್ಲೋ.

( ೨ನೆಯ ಸರತಿ ಕ್ರಿ. ಶ. ೧೮೦೫ ) ( ೧೮೦೫–೧೮೦೭ )

( **ಲಾರ್ಡ ಮಿಂಟೋ** ೧೮೦೭–೧೮೧೩ )

೧. **ಲಾರ್ಡ ಕಾರ್ನವಾಲೀಸ:**— ವೆಲಸ್ಲಿಯು ತರುವಾಯ ಕಾರ್ನವಾಲೀಸನು ಮರಳಿ ಗ. ಜ. ಆಗಿಬಂದನು. ಶಾಂತತೆಯ ಧೋರಣೆಯಿಂದ ಕಾರಭಾರವನ್ನು ಸಾಗಿಸಹತ್ತಿರಲು ತುಸು ದಿನಗಳಲ್ಲಿಯೆ ಗಾಜೀಪುರದಲ್ಲಿ ಮರಣಹೊಂದಿದನು.

೨. **ಸರ್ ಜಾರ್ಜ ಬಾರ್ಲೋ:**— ಕಾರ್ನವಾಲೀಸನ ಬಳಿಕ ಕೌನ್ಸಿಲಿನ ಸಭಾಸದನಾದ **ಬಾರ್ಲೋನು** ಗ. ಜನರಲ್ ಆದನು. ಇವನು ಡಾಯರೆಕ್ಟರರ ಅಪ್ಪಣೆಯಂತೆ ಸಿಂಧೆ, ಹೋಳಕರ, ಜಾಟ ಇವರೊಡನೆ ಮಿತ್ರತ್ವದ ಒಡಂಬಡಿಕೆಯನ್ನು ಮಾಡಿಕೊಂಡು ಯುದ್ಧವನ್ನು ನಿಲ್ಲಿಸಿದನು. (**ವೇಲೂರ ದಂಗೆ– ೧೮೦೬**) ಮದ್ರಾಸ ಇಲಾಖೆಯ **ವೇಲೂರಲ್ಲಿ** ಇಂಗ್ಲಿಷರ ದಂಡು ಇತ್ತು. ಅವರಲ್ಲಿಯ ಹಿಂದಿ ಸೈನಿಕರು, ಹಣೆಗೆ ಗಂಧವನ್ನು ಹಚ್ಚಬಾರದು; ಕೂದಲುಗಳನ್ನು ಒಂದೇ ತರಹದಿಂದ ಕತ್ತರಿಸಬೇಕು; ಇಂಗ್ಲಿಷ ಪದ್ಧತಿಯ ಟೊಪ್ಪಿಗೆಗಳನ್ನು ಹಾಕಿಕೊಳ್ಳಬೇಕು; ಎಂಬ ನಿಯಮುಗಳಾದವು. ಆಗ ಆ ಸೈನಿಕರು ತಮ್ಮ ಜಾತಿಯನ್ನು ಕೆಡಿಸಲು ಈ ನಿಯಮಗಳನ್ನು ಮಾಡಿದರೆಂದು ಸಿಟ್ಟಿಗೆದ್ದು ದಂಗೆಯನ್ನು ಹೂಡಿದರು. ಆಗ ಮದ್ರಾಸದ ಗವ್ಹರ್ನರನಾದ **ಉಯಿಲ್ಯಮ್ ಬೆಂಟಿಂಕನು** ಸೈನ್ಯವನ್ನು ಕಳುಹಿ

ದಂಗೆಯನ್ನು ಅಡಗಿಸಿದನು. ವೇಲೂರಲ್ಲಿದ್ದ ಟೀಪುವಿನ ಮಕ್ಕಳ ಬೆಂಬಲವು ಈ ದಂಗೆಗಾರರಿಗೆ ಉಂಟೆಂಬ ಸಂಶಯದಿಂದ ಅವರು ಕಲಕತ್ತೆಗೆ ಕಳುಹಲ್ಪಟ್ಟರು. ಮುಂದೆ ಈ ವಿಷಯದಲ್ಲಿ ಬಾರ್ಲೋನೂ ಬೆಂಟೆಂಕನೂ ತಪ್ಪು ಮಾಡಿದರೆಂದು ನಿರ್ಣಯವಾಗಿ, ಬಾರ್ಲೋನನ್ನು ಮದ್ರಾಸದ ಗ. ಕೆಲಸಕ್ಕೆ ಕಳುಹಿ, ಬೆಂಟೆಂಕನನ್ನು ಕೆಲಸದಿಂದ ತೆಗೆದರು. ಬಳಿಕ **ಲಾರ್ಡ ಮಿಂಟೋ** ಎಂಬವನು ಗ ಜ. ಆದನು.

೩. **ಲಾರ್ಡ ಮಿಂಟೋ**:— ಕ್ರಿ ಶ **೧೮೦೭-೧೮೧೩** ಇವನಾದರೂ ಹಿಂದುಸ್ಥಾನದ ಕಾರಭಾರದ ವಿಷಯದಲ್ಲಿ ಶಾಂತತೆಯ ಧೋರಣೆಯನ್ನೇ ಕಾದುಕೊಂಡನು ಆದದರಿಂದ ಇವನ ಆಳಿಕೆಯಲ್ಲಿ ಯುದ್ಧಗಳು ಸಂಭವಿಸಲಿಲ್ಲ. ಶಾಂತತೆ, ಸುವ್ಯವಸ್ಥೆಗಳನ್ನು ನೆಲೆಸುವದಕ್ಕಾಗಿ ಹಲಕೆಲವು ಉಪಾಯಗಳನ್ನು ಇವನು ಕೈಕೊಳ್ಳಬೇಕಾಯಿತು.

೪. **ಫ್ರೇಂಚರ ದಾಳಿಯನ್ನು ತಡೆಯುವ ಪ್ರಯತ್ನ**:— ಕ್ರಿ. ಶ. **೧೮೦೭**ರಲ್ಲಿ ನೆಪೋಲಿಯನನೂ ರಶಿಯದ **ಝಾರನೂ** ತುರ್ಕಸ್ಥಾನ, ಇರಾಣಗಳ ಷಾಹರೂ ಒಂದಾಗಿ ಇರಾಣ-ಅಫಗಾಣಿಸ್ಥಾನಗಳ ಮಾರ್ಗವಾಗಿ ಹಿಂದುಸ್ಥಾನದ ಮೇಲೆ ಸಾಗಿಬರಬೇಕೆಂದು ಗೊತ್ತುಮಾಡಿದರು. ಆಗ ಇಂಗ್ಲಂಡದ ಮಂತ್ರಿಮಂಡಲದವರು **ಇರಾಣ, ಅಫಗಾಣಿಸ್ಥಾನ, ಪಂಜಾಬ** ಈ ಅರಸರ ಕೂಡ ಸ್ನೇಹ ಬೆಳೆಸಿ ಒಪ್ಪಂದ ಮಾಡಿಕೊಳ್ಳುವಂತೆ ಮಿಂಟೋನಿಗೆ ಸೂಚಿಸಿದರು. ಆಗ ಇವನು ತನ್ನ ವಕೀಲರನ್ನು ಮೇಲೆ ಹೇಳಿದ ಅರಸರಲ್ಲಿಗೆ ಕಳುಹಿದನು. **ಇರಾಣದ ಒಪ್ಪಂದ**— ಸರ್ ಜಾನ್ ಮಾಲಕಮನು ಇರಾಣಕ್ಕೆ ಹೋಗಿ ಅಲ್ಲಿಯ ಷಾಹನೊಡನೆ ಒಪ್ಪಂದ ಮಾಡಿಕೊಂಡನು. ಆಗ ಷಾಹನು ನೆಪೋಲಿಯನನಿಗೆ ಹಿಂದುಸ್ತಾನಕ್ಕೆ ಬರಲು ದಾರಿಯನ್ನು ಕೊಡಬಾರದು. ಪ್ರಸಂಗದಲ್ಲಿ ಇಂಗ್ಲಿಷರು ಷಾಹನಿಗೆ ಧನಸಹಾಯವನ್ನು ಮಾಡಬೇಕು; ಎಂದು ಗೊತ್ತಾಯಿತು. **ಮೌಂಟಿ ಸ್ಟುಅರ್ಟಎಲ್ಫಿನ್‌ಸ್ಟನನು** ಅಫಗಾನಿಸ್ತಾನಕ್ಕೆ ಹೋದವನು ಅಲ್ಲಿ ಒಳಜಗಳು ನಡೆದದರಿಂದ ಹಾಗೆಯೆ ಮರಳಿ ಬಂದನು. **ಅಮೃತಸರದ ಒಪ್ಪಂದ**- ಕ್ರಿ. ಶ **೧೮೦೯.** ಮೊಗಲರಾಜ್ಯವು ಮುರಿದನಂತರ ಸೀಖರು ಸ್ವತಂತ್ರರಾಗಿ ಪಂಜಾಬದಲ್ಲಿ ಸಣ್ಣ ಸಣ್ಣ ರಾಜ್ಯಗಳನ್ನು ಸ್ಥಾಪಿಸಿದರು. **ರಣಜಿತಸಿಂಗನು** ಸೀಖಅರಸರಲ್ಲೆಲ್ಲ ಮುಖ್ಯನಾದನು. ಆದರೆ ಸತಲಜದಪೂರ್ವದ

ಒಬ್ಬಿಬ್ಬ ಅರಸರು ಅವನ ಹಿರಿಯತನಕ್ಕೊಪ್ಪದೆ ಅವನ ವಿರುದ್ಧವಾಗಿ ಇಂಗ್ಲಿಷರ ನೆರವು ಬಯಸಿದರು. ಮಿಂಟೋನು **ಸರ್ ಚಾರ್ಲಸ ಮೆಟ್‌ಕಾಫ್** ಎಂಬವನನ್ನು ಸೈನ್ಯದೊಂದಿಗೆ ಪಂಜಾಬಕ್ಕೆ ಕಳುಹಿದನು ಮೆಟ್‌ಕಾಫನು ರಣಜಿತಸಿಂಗನೊಡನೆ ಅಮೃತಸರದಲ್ಲಿ ಒಪ್ಪಂದ ಮಾಡಿಕೊಂಡನು. ಸತಲಜ ನದಿಯು ತನ್ನ ರಾಜ್ಯದಮೇರೆಯೆಂದೂ **ಲುಧಿಯಾನಾ**ದಲ್ಲಿ ಇಂಗ್ಲಿಷರು ತಮ್ಮ ಸೈನ್ಯವನ್ನು ಇಡಬಹುದೆಂದೂ ರಣಜಿತಸಿಂಗನು ಒಪ್ಪಿದನು. **ಫ್ರೆಂಚ-ಡಚ್ಚರ ಠಾಣ್ಯಗಳನ್ನು ಕಸಿದದ್ದು**- ಮಿಂಟೋನು ಬಲವಾದ ಹಡಗುಪಡೆಯನ್ನು ಕಳುಹಿ ಆಫ್ರಿಕದ ಪೂರ್ವಕ್ಕಿರುವ **ಮಾರಿಶಸ್ ಬುರ್ಬೋನ್** †ಎಂಬ ಫ್ರೆಂಚರ ಠಾಣ್ಯಗಳನ್ನೂ, **ಕೇಫ್ ಆಫ್ ಗುಡ್ ಹೋಪ್** ಮತ್ತು **ಜಾವಾ** ಎಂಬ ಡಚ್ಚರ ಠಾಣ್ಯಗಳನ್ನೂ ವಶಮಾಡಿಕೊಂಡನು.

೫. **ಮಿಂಟೋನ ಕಾಲದ ಬಂಡಾಯುಗಳು**:— **ಬುಂದೇಲಖಂಡ**ದಲ್ಲಿಯೂ, **ತ್ರಾವಣಕೋರ**ದಲ್ಲಿಯೂ ಬಂಡಾಯುಗಳು ಏಳಲು ಮಿಂಟೋನು ಅವುಗಳನ್ನು ಅಡಗಿಸಿದನು. ಮದ್ರಾಸದ ಯುರೋಪಿಯನ್ ದಂಡಾಳುಗಳು ಯುದ್ಧಕಾಲದ ಭತ್ತೆಯನ್ನು ಕಟ್ಟುಮಾಡಿದ್ದಕ್ಕಾಗಿ ಬಂಡು ಹೂಡಿದರು. ಮಿಂಟೋನು ಮದ್ರಾಸಕ್ಕೆ ಬರುವಷ್ಟರಲ್ಲಿಯೆ ಅದು ಅಡಗಿದ್ದಿತು.

೬ **ಕಂಪನಿಯ ಸನದಿನ ವಿಚಾರಣೆ**:— ಕ್ರಿ ಶ. **೧೮೧೩** ಕಂಪನಿಯ ಸನದಿನ ೨೦ ವರ್ಷದ ಅವಧಿಯು ಮುಗಿದದರಿಂದ ಪಾರ್ಲಮೆಂಟಿನಲ್ಲಿ ಇದರ ವಿಚಾರಣೆಯು ನಡೆಯಿತು. ಕೊನೆಗೆ ಕಂಪನಿಯುವರಂತೆ ಬೇಕಾದ ಇಂಗ್ಲಿಷರು ಹಿಂದುಸ್ಥಾನದೊಡನೆ ವ್ಯಾಪಾರ ಮಾಡಬಹುದು; ಚೀನದೊಡನೆಯ ವ್ಯಾಪಾರವನ್ನು ಮಾತ್ರ ಕಂಪನಿಯುವರೇ ಸಾಗಿಸಬೇಕು. ಎಂದು ನಿರ್ಣಯವಾಯಿತು.

೭. **ಮಿಂಟೋನ ಆಳಿಕೆಯ ಕೊನೆ**:— ಕ್ರಿ. ಶ. ೧೮೧೩ ರಲ್ಲಿ ಮಿಂಟೋನು ವಿಲಾಯತಿಗೆ ಹೋದನು. ಇವನ ಆಳಿಕೆಯಲ್ಲಿ ಮದ್ರಾಸದಲ್ಲಿ **ರಯುತವಾರಿ** ಪದ್ಧತಿಯು ಆರಂಭವಾಯಿತು. ಈ ದೇಶದ ಶಿಕ್ಷಣದ ಸಂಸ್ಥೆ

†ಕ್ರಿ. ಶ. ೧೮೧೫ರಲ್ಲಿ ಇಂಗ್ಲಿಷ-ಫ್ರೆಂಚರಲ್ಲಿ ಒಪ್ಪಂದವಾಗಿ ಬುರ್ಬೋನವು ಫ್ರೆಂಚರಿಗೂ ಜಾವಾನಡುಗಡ್ಡೆಯು ಫ್ರೆಂಚರ ಅಂಕಿತರಾಗಿದ್ದ ಡಚ್ಚರಿಗೂ ಮರಳಿ ದೊರೆತವು.

ಗಳಿಗೆ ಕಂಪನಿಯವರಿಂದ ಹಣದ ನೆರವು ಸಿಗಹತ್ತಿತು. ಕ್ರಿಶ್ಚನ್ ಧರ್ಮ ಪ್ರಸಾರಕ್ಕಾಗಿ ಕಲಕತ್ತೆಯಲ್ಲಿ ಒಂದು ಸಂಸ್ಥೆಯು ಉಂಟಾಯಿತು.

---

# ೧೩ ನೆಯ ಪಾಠ

## ಮಾರ್ಕ್ವಿಸ್ ಆಫ್ ಹೆಸ್ಟಿಂಗ್ಸ

(ಕ್ರಿ. ಶ. ೧೮೧೩–೧೮೨೩)

**೧. ಹೆಂಸ್ಟಿಂಗ್ಸನ ಆಳಿಕೆಯ ಧೋರಣೆ:**- ಮಿಂಟೋನ ತರುವಾಯ ಹೆಸ್ಟಿಂಗ್ಸನು ಗ. ಜನರಲನಾದನು. ಇವನು ಅಮೇರಿಕೆ, ಯುರೋಪಗಳಲ್ಲಾದ ಯುದ್ಧಗಳಲ್ಲಿ ಒಳ್ಳೆಯ ಅನುಭವ ಹೊಂದಿದ್ದನು. ಶಾಂತತೆಯ ಧೋರಣೆಯನ್ನು ಸಮರ್ಥಿಸುತ್ತ ವೆಲಸ್ಲಿಗೆ ಹೆಸರಿಡುವವರಲ್ಲಿ ಇವನೊಬ್ಬವನಾಗಿದ್ದನು. ಆದರೆ ಹಿಂದುಸ್ಥಾನಕ್ಕೆ ಬಂದ ಬಳಿಕ ಬಾರ್ಲೊ-ಮಿಂಟೋ ಇವರ ಶಾಂತತೆಯ ಧೋರಣೆಯೇ ಗುರ್ಖರು, ಪೆಂಡಾರಿಗಳು, ಮರಾಠರು ಬಲಗೊಳ್ಳಲು ಕಾರಣವಾಯಿತು ಎಂದು ಮನಗಂಡನು. ಆದುದರಿಂದ ಇವನು ತನ್ನ ಮೂಲ ಧೋರಣೆಯನ್ನು ಬದಿಗಿಟ್ಟು, ವೆಲಸ್ಲಿಯ ಮುಂದಡಿಯ ಧೋರಣೆಯನ್ನೇ ಕೈಕೊಂಡನು; ಮತ್ತು ವೆಲಸ್ಲಿಯ ಕಾಲದಲ್ಲಿ ಅರೆಕಳಿಯಾಗಿದ್ದ ರಾಜ್ಯವಿಸ್ತಾರದ ಕೆಲಸವನ್ನು ಕಡೆಗಾಣಿಸಿದನು. ಇವನಿರುವಾಗ ನೇಪಾಳದ ಯುದ್ಧ, ಮರಾಠರ ಕೊನೆಯ ಯುದ್ಧ ಹೀಗೆ ಮೂರು ಯುದ್ಧಗಳಾದವು.

**೨. ನೇಪಾಳದ ಗುರ್ಖರು:—** ಇವರು ಮೇಲಾದ ಕಲಿಗಳು. ಪಾಶ್ಚಾತ್ಯ ಯುದ್ಧಕಲೆಯನ್ನು ಅರಿತುಕೊಂಡಬಳಿಕ ರಾಜ್ಯವನ್ನು ಹಬ್ಬಿಸುವ ಇಚ್ಛೆಯಿಂದ ಇವರು ತಿಬೇಟ, ಭೂತಾನ, ಸಿಕಿಮ ಮುಂತಾದ ದೇಶಗಳ ಮೇಲೆ ದಾಳಿಮಾಡಹತ್ತಿದರು. ತಿಬೇಟದ **ಲ್ಹಾಸಾ**· ಪಟ್ಟಣವನ್ನು ಸುಲಿದುಕೊಳ್ಳಲು, ಚೀನದ ಬಾದಷಾಹನು ಸಿಟ್ಟಾಗಿ, ದೊಡ್ಡ ದಂಡನ್ನು ಕಳುಹಿ ಇವರನ್ನು ಸೋಲಿಸಿದನು. ಹೀಗೆ ಉತ್ತರದ ದಾರಿ ಕಟ್ಟಾಗಲು ಗುರ್ಖರು ದಕ್ಷಿಣದಲ್ಲಿ ತಮ್ಮ ರಾಜ್ಯವನ್ನು ಹಬ್ಬಿಸತೊಡಗಿದರು.

**ಯುದ್ಧದ ಕಾರಣ :– ಗೋರಖಪುರ, ಶೇವರಾಜ** ಎಂಬ ಜಿಲ್ಹೆಯೊಳಗಿನ ಕೆಲವು ಊರುಗಳ ಸಲುವಾಗಿ ಗುರ್ಖರಿಗೂ ಇಂಗ್ಲಿಷರಿಗೂ ಜಗಳ

ಹುಟ್ಟಿತು. ಬಾರ್ಲೋ-ಮಿಂಟೋ ಇವರು ಆ ಊರುಗಳನ್ನು ಬಿಟ್ಟು ಕೊಡಬೇಕೆಂದು ಕೇಳಿದರೂ ಗುರ್ಖರು ಒಪ್ಪಲಿಲ್ಲ. ಆದರೆ ಇಂಗ್ಲಿಷರ ಆಗಿನ ಶಾಂತತೆಯ ಧೋರಣೆಯ ಮೂಲಕ ಯುದ್ಧವು ಸಂಭವಿಸಲಿಲ್ಲ. ಹೇಸ್ಟಿಂಗ್ಸನು ಬಂದಕೂಡಲೆ ಯುದ್ಧಕ್ಕೆ ಆರಂಭವಾಯಿತು.

**ನೇಪಾಳದ ಯುದ್ಧ** :— ಕ್ರಿ. ಶ. **೧೮೧೪-೧೮೧೬**. ಹೆಸ್ಟಿಂಗ್ಸನು ಗುರ್ಖರ ಸೈನ್ಯಕ್ಕಿಂತ ದೊಡ್ಡದಾದ ಸೈನ್ಯವನ್ನು ಸಜ್ಜುಗೊಳಿಸಿ, ಅದನ್ನು ನಾಲ್ಕು ಭಾಗಮಾಡಿ, ನಾಲ್ವರು ಸೇನಾಪತಿಗಳ ಕಡೆಗೆ ಕೊಟ್ಟು, ಅವರನ್ನು ಬೇರೆಬೇರೆಯಾಗಿ ನೇಪಾಳದ ಮೇಲೆ ಸಾಗಿಸಿದನು. ಅವರಲ್ಲಿಯ **ಗಿಲ್ಲೆಸ್ಪಿ**ಯು ಗುರ್ಖರ **ಕಲುಂಗ** ಕೋಟೆಯ ಮೇಲೆ ಬಿದ್ದು ೫೦೦ ಜನರೊಂದಿಗೆ ಹತ-ನಾದನು. **ಮಾರ್ಡಿಡೇಲ**ನು ಜಯುಟಕವನ್ನೇರಿ ಸೋತನು. **ವೋರ್ಲೆ**ಯು ಪೂರ್ವದಿಕ್ಕಿನಿಂದ ಗುರ್ಖರನ್ನು ಎದುರಿಸಿ ತನ್ನ ದಂಡಿನ ಎರಡೂ ತಂಡಗಳನ್ನು ಕಳೆದುಕೊಂಡನು. ಇದನ್ನು ತಿಳಿದು ಹೆಸ್ಟಿಂಗ್ಸನು ಹೊಸ ಸೈನ್ಯವನ್ನು **ಮಾಲೋನ**ದ ಮೇಲೆ ಕಳುಹಿದನು. ಪಶ್ಚಿಮದಿಂದ ಸಾಗಿಬಂದ **ಆಕ್ಟರ ಲೋನಿ**ಯು ಈ ಹೊಸ ಸೈನ್ಯವನ್ನು ಕೂಡಿಕೊಂಡು ಮಾಲೋನದ ಬಳಿಯಲ್ಲಿ ಗುರ್ಖ ಸರದಾರನಾದ **ಅಮರಸಿಂಗ**ನನ್ನು ಸೋಲಿಸಿದನು. ಅಮರಸಿಂಗನು ಹಿಂಜರಿದು ರಾಜಧಾನಿಗೆ ಹೋಗಿ ಗುರ್ಖರನ್ನು ಹುರುಪುಗೊಳಿಸಿ ಮತ್ತೆ ಯುದ್ಧಕ್ಕೆ ಅಣಿಯಾದನು. ಕೂಡಲೆ ಆಕ್ಟರಲೋನಿಯು ಮುಂದಕ್ಕೆ ಸಾಗಿ **ಮಕ್ವಾನಪುರ**ದ ಯುದ್ಧದಲ್ಲಿ ಗುರ್ಖರನ್ನು ಮತ್ತೆ ಸೋಲಿಸಿದನು. ಆಗ ಗುರ್ಖರು ಒಪ್ಪಂದ ಮಾಡಿಕೊಂಡರು.

**ಸೇಗಾವುಲಿಯ ಒಪ್ಪಂದ** :— ಕ್ರಿ. ಶ. **೧೮೧೬**. ೧. **ಕುಮಾವುನ್ ಗಢವಾಲ** ಈ ಪ್ರಾಂತಗಳನ್ನೂ **ತರಾಯಿ** ಅರಣ್ಯವನ್ನೂ ಗುರ್ಖರು ಇಂಗ್ಲಿಷ-ರಿಗೆ ಕೊಡಬೇಕು. **೨**. ತರಾಯಿಯ ಬದಲಾಗಿ ಇಂಗ್ಲಿಷರು ವರ್ಷಕ್ಕೆ ಎರಡು ಲಕ್ಷ ರೂಪಾಯಿಗಳನ್ನು ಗುರ್ಖರಿಗೆ ಕೊಡಬೇಕು, **೩. ಸಿಕಿಮ**ದ ಅರಸನ ಮೇಲಿನ ಅಧಿಕಾರವನ್ನು ಗುರ್ಖರು ಬಿಡಬೇಕು. **೪**. ಕಾಟಮಾಂಡುವಿನಲ್ಲಿ ಒಬ್ಬ ಇಂಗ್ಲಿಷ ರೆಸಿಡೆಂಟನು ಇರಬೇಕು.

**೩. ಪೆಂಡಾರಿಗಳ ಯುದ್ಧ** :— ಕ್ರಿ. ಶ. **೧೮೧೭**. ಸಹಾಯಕ ಸೈನ್ಯ ಪದ್ಧತಿಗೆ ಒಳಗಾದ ಅರಸರ ಸಂರಕ್ಷಣೆಗೆ ಇಂಗ್ಲಿಷರು ಹೊಣೆಗಾರರಾಗಲು

ಆ ಅರಸರು ತಮ್ಮ ಸೈನಿಕರನ್ನು ಕೆಲಸದಿಂದ ತೆಗೆಯಹತ್ತಿದರು. ಹೀಗೆ ಸೈನ್ಯದಿಂದ ಹೊರದೂಡಲ್ಪಟ್ಟ ಜನರಿಗೆ ಕೆಲಸವಿಲ್ಲದಾಗಲು ಅವರಲ್ಲಿಯ ಬಹು ಜನರು ಒಟ್ಟಾಗಿ ದೇಶದಲ್ಲಿ ಕಳವು - ಸುಲಿಗೆಗಳನ್ನು ಮಾಡತೊಡಗಿದರು. ಕ್ರಿ. ಶ. ೧೮೧೭ರ ಸುಮಾರಿಗೆ ಇಂಥ ಜನರ ಸಂಖ್ಯೆಯು ೬೦ ಸಾವಿರಕ್ಕೆ ಸಮೀಪಿಸಿತು. ಇವರಿಗೆ **ಪೆಂಡಾರಿ**ಗಳೆಂಬ ಹೆಸರು. ಮುಸಲ್ಮಾನ, ಜಾಟ, ಮರಾಠ, ಮುಂತಾದ ಹಲವು ಬಗೆಯ ಜನರು ಈ ತಂಡದಲ್ಲಿ ಸೇರಿ ಕೊಂಡಿದ್ದರು. ಮಧ್ಯ ಹಿಂದುಸ್ತಾನದಲ್ಲಿ ಅರಾಜಕತೆಯು ಹೆಚ್ಚು ಇದ್ದದ ರಿಂದ ಅಲ್ಲಿ ಈ ಪೆಂಡಾರಿಗಳು ಮೆಟ್ಟಾಗಿದ್ದರು.

ನೇಪಾಳದ ಯುದ್ಧವು ನಡೆದಾಗ ಪೆಂಡಾರಿಗಳ ಉಪಟಳವು ಹೆಚ್ಚಾ-ಯಿತು. ಆದದರಿಂದ ಆ ಯುದ್ಧವು ಮುಗಿದೊಡನೆ ಹೆಸ್ಟಿಂಗ್ಸನು ಇವರನ್ನು ತಗ್ಗಿಸುವ ನಿಶ್ಚಯಮಾಡಿ, ಚಿಕ್ಕ ದೊಡ್ಡ ಅರಸರ ನೆರವಿನಿಂದ ಒಂದು ಲಕ್ಷ ೨೦ ಸಾವಿರ ಸೈನ್ಯವನ್ನು ಸಜ್ಜುಗೊಳಿಸಿದನು. ಈ ದೊಡ್ಡ ಸೈನ್ಯವು ಮೂರು ಭಾಗವಾಗಿ ಹೊರಟು ಪೆಂಡಾರಿಗಳನ್ನು ಮಾಳವದಲ್ಲಿ ಸುತ್ತುಗಟ್ಟಿತು. ಆಗ ಅವರು ಹಣ್ಣಾದರು. ಅವರ ಮುಂದಾಳುಗಳಲ್ಲಿ **ಕರೀಮಖಾನ, ಅಮೀರಖಾನ** ಇವರು ಶರಣು ಬಂದುದರಿಂದ, ಹೆಸ್ಟಿಂಗ್ಸನು ಇವರಿಗೆ ಜಹಗೀರು ಹಾಕಿಕೊಟ್ಟನು. ಉಳಿದ ಪೆಂಡಾರಿಗಳು ಊರುಗಳನ್ನು ಹೊಂದಿ ಕೊಂಡು ಉದ್ಯೋಗದಿಂದ ಜೀವಿಸಹತ್ತಿದರು. ಹೀಗಾಗಿ ಪೆಂಡಾರಿಗಳ ಹಾವಳಿಯು ಅಡಗಿತು.

೪. **ಮರಾಠರ ಮೂರನೆಯ ಯುದ್ಧ**:— ಕ್ರಿ. ಶ. ೧೮೧೭-೧೮೧೮. **ಕಾರಣಗಳು**:— ೧. ಕಳೆದುಕೊಂಡ ಸ್ವಾತಂತ್ರ್ಯವನ್ನು ಮರಳಿ ಗಳಿಸುವ ಇಚ್ಛೆಯು ಪೇಶವೆಗೂ ಸರದಾರರಿಗೂ ಉಂಟಾಯಿತು. ೨. ಗಾಯಕವಾಡನ ವಕೀಲನಾದ ಗಂಗಾಧರ ಶಾಸ್ತ್ರಿಯ ಕೊಲೆಯನ್ನು ಬಾಜೀರಾಯನೇ ತ್ರ್ಯಂಬ-ಕಜಿಯಿಂದ ಮಾಡಿಸಿದನೆಂದು ಇಂಗ್ಲಿಷರು ತಿಳಿದುಕೊಂಡರು. ೩- ಬಾಜೀ-ರಾಯನು ಸಿಂಧೆ, ಹೋಳಕರ, ಭೋಸಲೆ ಇವರನ್ನು ಇಂಗ್ಲಿಷರ ಕೂಡ ಕಾದಲು ಹುರಿದುಂಬಿಸುತ್ತಿದ್ದನು. **ಯುದ್ಧಗಳು**:— ಇಂಗ್ಲಿಷರ ದಂಡು ಪುಣೆಯಮೇಲೆ ಸಾಗಿಬಂದಿತು. ಖಡಕಿ, ಕೋರೆಗಾಂವ, ಅಷ್ಟೆ ಎಂಬಲ್ಲಿ ಯುದ್ಧಗಳಾದವು. ಕೊನೆಯ ಯುದ್ಧದಲ್ಲಿ ಪೇಶವೆಯ ಸೇನಾಪತಿಯಾದ

ಬಾಪು ಗೋಖಲೆಯು ಬೀಳಲು ಇಂಗ್ಲಿಷರಿಗೆ ಜಯದೊರೆಯಿತು. ಬಳಿಕ ಅವರು ಬಾಜೀರಾಯನಿಗೆ ವರ್ಷಾಶನವನ್ನು ಗೊತ್ತುಮಾಡಿ ಅವನನ್ನು ಬಿಠೂರ ದಲ್ಲಿ ಇಟ್ಟರು. ಮತ್ತು ಮರಾಠರ ರಾಜ್ಯವನ್ನು ತಮ್ಮ ರಾಜ್ಯಕ್ಕೆ ಕೂಡಿಸಿ ಕೊಂಡರು

೫. **ಹೆಸ್ಟಿಂಗ್ಸನ ಸುಧಾರಣೆಗಳೂ ಯೋಗ್ಯತೆಯೂ:**— ಹೆಸ್ಟಿಂಗ್ಸನು ಹೊಸ ರಾಜಮಾರ್ಗಗಳನ್ನೂ ಪೂಲುಗಳನ್ನೂ ಕಟ್ಟಿಸಿದನು. ಶಾಲೆ-ಕಾಲೇಜು ಗಳನ್ನು ಉಂಟುಮಾಡಿ ಶಿಕ್ಷಣಕ್ಕೆ ಅನುಕೂಲ ಮಾಡಿಕೊಟ್ಟನು. ವರ್ತಮಾನ ಪತ್ರದ ಸಂಬಂಧದ ನಿರ್ಬಂಧಗಳನ್ನು ತೆಗೆದುಹಾಕಿ, ಅವುಗಳಿಗೆ ಉತ್ತೇಜನ ಕೊಟ್ಟನು. ತಘಲಖ ಫಿರೋಜಷಾಹನು ಕಟ್ಟಿಸಿದ್ದ ಯಮುನೆಯ ಕಾಲುವೆ ಯನ್ನು ಸರಿಪಡಿಸಿ ಒಕ್ಕಲತನಕ್ಕೆ ಸಹಾಯ ಮಾಡಿದನು.

ವೆಲಸ್ಲಿಯ ಕಾಲಕ್ಕೆ ಉಳಿದಿದ್ದ ರಾಜ್ಯ ವಿಸ್ತಾರದ ಕೆಲಸವನ್ನು ಇವನು ಕೈಕೊಂಡು ಪೂರ್ಣಗೊಳಿಸಿದನು. ಇಂಗ್ಲಿಷರೇ ಈ ದೇಶದ ಸಮ್ರಾಜರೆಂಬ ಮಾತು ಇವನಆಳಿಕೆಯಲ್ಲಿ ನಿಶ್ಚಿತವಾಯಿತು. ವೆಲಸ್ಲಿಯಂತೆ ಬರಿಯ ರಾಜ್ಯ ವಿಸ್ತಾರದಿಂದ ಇವನು ಸಮಾಧಾನ ಪಡದೆ, ಹಲವು ಜನಹಿತದ ಕೆಲಸಗಳ್ನು ಮಾಡಿ, ಈ ದೇಶದ ಜನರು ಇಂಗ್ಲಿಷರ ಹಿತಚಿಂತಕರಾಗುವಂತೆ ಯತ್ನಿಸಿದನು. ಇವನ ಸಹಾಯಕರಾದ ಎಲ್ಫಿನ್ಸಟನ್, ಮಾಲಕಮ್, ಮೆಟಕಾಫ್, ಆಕ್ಟರ ಲೋನಿ ಇವರು ಶೌರ್ಯ-ಚಾತುರ್ಯಗಳಿಂದ ಕೈಕೊಂಡ ಕೆಲಸಗಳನ್ನು ನೆರ ವೇರಿಸಿದುದರಿಂದಲೇ ಇವನ ಆಳಿಕೆಯು ಹೆಸರಾಯಿತೆಂದು ಹೇಳಬಹುದು. ಕೆಲಸದ ಅವಧಿಯನ್ನು ಮುಗಿಸಿ ಇವನು ಇಂಗ್ಲಂಡಿಗೆ ಹೋದ ಬಳಿಕ **ಲಾರ್ಡ** ಎಂಬ ಪದವಿಯನ್ನು ಪಡೆದನು. ಇವನ ತರುವಾಯ **ಅಮ್ಹರ್ಸ್ಟನು** ಗ. ಜ. ನಾದನು.

---

## ೧೪ನೆಯ ಪಾಠ

**ಲಾರ್ಡ ಅಮ್ಹರ್ಸ್ಟ.** (ಕ್ರಿ. ಶ. ೧೮೨೩-೧೮೨೮) **ಲಾರ್ಡ ಉಯಿಲಿಯಮ್ ಬೆಂಟೆಂಕ.** (ಕ್ರಿ. ಶ. ೧೮೨೮-೧೮೩೫)

೧. **ಬ್ರಹ್ಮದೇಶದ ಮೊದಲನೆಯ ಯುದ್ಧ:**— ಕ್ರಿ. ಶ. ೧೮೨೪-೧೮೨೬. **ಬ್ರಹ್ಮದೇಶದ ಪೂರ್ವವೃತ್ತ**- ಬ್ರಹ್ಮದೇಶದಲ್ಲಿ ಬಹುಕಾಲದಿಂದ

ಬ್ರಹ್ಮೀಜನರ ಸಣ್ಣ ಸಣ್ಣ ರಾಜ್ಯಗಳಿದ್ದವು. ಅವುಗಳಲ್ಲಿ ಆವಾ ಮತ್ತು **ಪೇಗೂ** ಇವೆರಡು ಮುಖ್ಯವಾಗಿದ್ದವು. ಮೊದಲು ಪೇಗುಪ್ರಾಂತದವರು ಆವಾದ ಮೇಲೆ ತಮ್ಮ ವರ್ಚಸ್ಸನ್ನು ನೆಲೆಸಿದ್ದರು. ಆದರೆ ಕ್ರಿ. ಶ **೧೭೫೦**ರ ಸುಮಾರಿಗೆ **ಅಲೋಂಪ್ರಾ** ಎಂಬವನು ಪ್ರಬಲನಾಗಿ ಆವಾ ಪ್ರಾಂತಕ್ಕೆ ಸ್ವಾತಂತ್ರ್ಯವನ್ನು ಒದಗಿಸಿಕೊಟ್ಟನಲ್ಲದೆ ಪೇಗು ಸಹಿತ ಇಡೀ ಬ್ರಹ್ಮದೇಶವನ್ನು ಗೆದ್ದು ತನ್ನ ರಾಜ್ಯವನ್ನು ಬಲಿಸಿದನು ಈ ಸಮಯದಲ್ಲಿ ಇಂಗ್ಲಿಷರು ಪೇಗು ಪ್ರಾಂತದವರಿಗೆ ಮದ್ದು-ಗುಂಡುಗಳನ್ನು ಪೂರೈಸಿದ್ದಕ್ಕೆ ಇವನು ಸಿಟ್ಟಾಗಿ ಹಲವು ಜನ ಇಂಗ್ಲಿಷರನ್ನು ಕೊಲ್ಲಿಸಿದನು. ಇವನ ತರುವಾಯ ಇವನ ಮಗನ ಮತ್ತು ಮೊಮ್ಮಗನ ಕಾಲದಲ್ಲಿ ಬ್ರಹ್ಮೀಜನರು **ಅರಾಕಾನ, ಆಸಾಮು, ಮಣಿಪುರ** ಈ ಪ್ರಾಂತಗಳನ್ನು ವಶಮಾಡಿಕೊಂಡರು. ಆಗ ಅಲ್ಲಿಯ ಹಲವು ಜನರು **ಚಿತಗಾಂಗ** ಜಿಲ್ಹೆಯಲ್ಲಿದ್ದ ಇಂಗ್ಲಿಷರ ಬೆನ್ನು ಬಿದ್ದರು. ಅವರನ್ನು ಕಳುಹಿರೆಂದು ಬ್ರಹ್ಮೀಜನರು ಕೇಳಿದ್ದಕ್ಕೆ ವೆಲಸ್ಲಿಯೂ ಹೆಸ್ಟಿಂಗ್ಸನೂ ಒಪ್ಪಿರಲಿಲ್ಲ. **ಯುದ್ಧದ ಕಾರಣಗಳು**:- ಹೀಗಿರಲು ಕ್ರಿ. ಶ **೧೮೨೪**ರಲ್ಲಿ ಬ್ರಹ್ಮೀಜನರು **ಶಾಹುಪುರಿ** ಎಂಬ ನಡುಗಡ್ಡೆಯನ್ನು ಹಿಡಿದುಕೊಂಡು ಅಲ್ಲಿದ್ದ ಇಂಗ್ಲಿಷರನ್ನು ಓಡಿಸಿದರು. ಆಗ **ಅಮ್ಹರ್ಸ್ಟ**ನು ಬ್ರಹ್ಮಿಗಳೊಡನೆ ಯುದ್ಧವನ್ನು ಸಾರಿದನು **ಯುದ್ಧದ ಪ್ರಸಂಗಗಳು**:— ಇಂಗ್ಲಿಷರ ದಂಡು ಮೂರು ದಾರಿಗಳಿಂದ ಬ್ರಹ್ಮದೇಶದ ಮೇಲೆ ಸಾಗಿತು ಆಸಾಮದ ದಾರಿಯಿಂದ ಹೊರಟ ದಂಡು ಕೆಡಕು ದಾರಿ ಕೆಟ್ಟಹವೆ ಇವುಗಳ ಮೂಲಕ ಹಿಂದಿರುಗಿತು. ಅರಾಕಾನದ ಕಡೆಯಿಂದ ಹೋದ ದಂಡು ಬ್ರಹ್ಮದೇಶದ ಸೇನಾಪತಿಯಾದ **ಮಹಾಬಂದೂಲ**ನಿಂದ ಸೋಲಿಸಲ್ಪಟ್ಟಿತು ಆದರೆ ಮದ್ರಾಸದಿಂದ ಜಲಮಾರ್ಗವಾಗಿ ಸಾಗಿದ **ಆರ್ಚಿಬಾಲ್ಡ ಕ್ಯಾಂಬೇಲ**ನಿಗೆ ಮಾತ್ರ ಜಯವಾಯಿತು. ಅವನು ಇರಾವತಿಯ ಮುಖದಗುಂಟ ಉತ್ತರಕ್ಕೆ ಸಾಗಿ **ರಂಗೂನ** ಪಟ್ಟಣವನ್ನು ಹಿಡಿದುಕೊಂಡನು. ಇದನ್ನು ತಿಳಿದು ಮಹಾಬಂದೂಲನು ಕ್ಯಾಂಬೇಲನ ಮೇಲೆ ಸಾಗಿಬಂದನು. ಆದರೆ ಡೊನ್ಯಾಬು ಎಂಬಲ್ಲಿ ಯುದ್ಧವಾಗಿ ಮಹಾಬಂದೂಲನು ಗುಂಡುತಾಗಿ ಸತ್ತನು. ಕ್ರಿ. ಶ. **೧೮೨೫**. ಬಳಿಕ ಕ್ಯಾಂಬೇಲನು ಮುಂದೆಸಾಗಿ **ಪ್ರೋಮ** ಪಟ್ಟಣವನ್ನು ಹಿಡಿದುಕೊಂಡು **ಪಾಘನ** ಎಂಬಲ್ಲಿ ಬ್ರಹ್ಮೀ ಸೈನ್ಯವನ್ನು ಮತ್ತೆ ಸೋಲಿಸಲು ಬ್ರಹ್ಮೀ ಅರಸನು ಒಪ್ಪಂದ ಮಾಡಿಕೊಂಡನು. **ಎಂದಬು**

**ಒಪ್ಪಂದ**— ಕ್ರಿ ಶ. ೧೮೨೬. ೧ ಬ್ರಹ್ಮೀ ಅರಸನು ಆಸಾಮು, ಆರಾಕಾನ ತೇನಾಸರೀಮ ಎಂಬ ಪ್ರಾಂತಗಳನ್ನೂ ಒಂದು ಕೋಟಿ ರೂಪಾಯಿಗಳನ್ನೂ ಇಂಗ್ಲಿಷರಿಗೆ ಕೊಡಬೇಕು. ೨ ಇಂಗ್ಲಿಷರ ವಕೀಲನನ್ನು ತಮ್ಮಲ್ಲಿಟ್ಟುಕೊಳ್ಳ ಬೇಕು. ೩ ಕಾಚರ, ಮಣಿಪುರ ಮುಂತಾದವುಗಳ ಅರಸರಮೇಲೆ ಅಧಿಕಾರ ನಡೆಯಿಸಬಾರದು.

೨. **ಬರಾಕಪುರದ ದಂಗೆ:**— ಬ್ರಹ್ಮದೇಶದ ಯುದ್ಧವು ನಡೆದಾಗ ಕಲಕತ್ತೆಯ ಸೆರೆಯು ಬರಾಕಪುರದ ಸೈನ್ಯವನ್ನು ಸಮುದ್ರ ಮಾರ್ಗವಾಗಿ ಇರಾವತಿಯ ಮುಖದ ಕಡೆಗೆ ಕಳಿಸುವದಿದ್ದಿತು. ಆದರೆ ಆ ಸೈನ್ಯದಲ್ಲಿಯ ಹಿಂದೀ ಸೈನಿಕರಲ್ಲಿ “ಸಮುದ್ರ ಪ್ರವಾಸದಿಂದ ಧರ್ಮವು ಕೆಡುವದು” ಎಂಬ ಕಲ್ಪನೆ ಇದ್ದುದರಿಂದ ಅವರು ಹೋಗಲೊಪ್ಪದೆ ದಂಗೆಯನ್ನು ಎಬ್ಬಿಸಿದರು. ಕೂಡಲೆ ಅಧಿಕಾರಿಗಳು ಬಹು ಜನರನ್ನು ತೋಫಿನ ಬಾಯಿಗೆ ಕೊಟ್ಟು ದಂಗೆಯನ್ನು ಅಡಗಿಸಿದರು.



**ಭರತಪುರದ ಕೋಟೆ**

೩. **ಭರತಪುರದ ಮುತ್ತಿಗೆ:**— ಕ್ರಿ. ಶ. ೧೮೨೬. ಭರತಪುರದ ಅರಸರು ಜಾಟ ಎಂಬ ಕುಲದವರು. ಹದಿನೆಂಟನೆಯ ಶತಕದ ಮಧ್ಯದ

ಸುಮಾರಿಗೆ ಇಲ್ಲಿಯ ಅರಸನಾದ ಸುರಜಮಲ್ಲನೆಂಬವನು ಒಳ್ಳೇ ಶೂರನೆಂದು ಹೆಸರಾಗಿದ್ದನು. ಇವನು **ಭರತಪುರ, ಡೀಗ** ಮುಂತಾದ ಬಲವಾದ ಕೋಟಿಗಳನ್ನು ಕಟ್ಟಿಸಿದ್ದನು ಭರತಪುರವ ಕೋಟೆಯಂತು ತೋಫುಗಳ ಹೊಡೆತಕ್ಕೂ ಮಣಿಯಲಿಲ್ಲ. ಕಿ. ಶ. **೧೮೦೫**ರಲ್ಲಿ ಜನರಲ್ ಲೇಕನು ಭರತಪುರವನ್ನು ಮುತ್ತಿ ನಾಲ್ಕು ಸರತಿ ಸೋತ ಸಂಗತಿಯು ಹಿಂದೆ ಹೇಳಿವೆ. ಮುಂದೆ ಕ್ರಿ. ಶ. **೧೮೨೫**ರಲ್ಲಿ ಇಲ್ಲಿಯ ಅರಸನಾದ ರಣಜಿತಸಿಂಗನು ಸಾಯಲು ಅವನ ಮಗನಾದ ೭ ವರ್ಷದ **ಬಲವಂತಸಿಂಗ** ಎಂಬವನಿಗೆ ಪಟ್ಟವಾಯಿತು. ಆದರೆ ಇವನ ಚಿಕ್ಕಪ್ಪನ ಮಗನಾದ **ದುರ್ಜನಸಾಲ**ನು ಇವನನ್ನು ತಳ್ಳಿ ಪಟ್ಟವನ್ನು ಹಿಡಿದುಕೊಂಡನು. ಆಗ ಆಮ್ಹರ್ಸ್ಟನು ಬಲವಂತಸಿಂಗನ ಕಡೆಗಾಗಿ, ಭರತಪುರವನ್ನು ಮುತ್ತಲು ಸೇನಾಪತಿ **ಕಾಂಬರಮಿಾಅರ**ನನ್ನು ಕಳುಹಿದನು. ಈ ಸರತಿಗೂ ತೋಫುಗಳ ಉಪಯೋಗವಾಗಲಿಲ್ಲ. ಆಗ ಹದಿನೈದು ಖಂಡಗದಷ್ಟು ಮದ್ದು ತುಂಬಿ ಸುರಂಗಹಚ್ಚಲು ಗೋಡೆಯು ಒಡೆಯಿತು. ಬಳಿಕ ಇಂಗ್ಲಿಷ ಸೈನ್ಯವು ಕೋಟೆಯನ್ನು ಹೊಕ್ಕು ದುರ್ಜನಸಾಲನನ್ನು ಸೆರೆಹಿಡಿದು, ಕೋಟೆಯನ್ನು ನೆಲಸಮಮಾಡಿತು. ಬಲವಂತಸಿಂಗನು ಇಂಗ್ಲಿಷರ ಮಾಂಡಲಿಕನಾದನು.

೪. **ಬೆಂಟಿಂಕನು ಗ. ಜನರಲನಾದದ್ದು**:— ಲಾರ್ಡ ಆಮ್ಹರ್ಸ್ಟನ ತರುವಾಯ **ಲಾರ್ಡ ಉಲಿಯಮ್ ಬೆಂಟಿಂಕ**ನು ಗ. ಜನರಲನಾಗಿ ಬಂದನು ಕ್ರಿ. ಶ. **೧೮೨೮.** ಮೊದಲು ಇವನು ಮದ್ರಾಸದ ಗವ್ಹರ್ನರನಾಗಿದ್ದು ವೆಲೂರ ದಂಗೆಯ ಪ್ರಸಂಗದಲ್ಲ ಕೆಲಸದಿಂದ ತೆಗೆಯಲ್ಪಟ್ಟಿದ್ದನು. ಆದರೆ ಮುಂದೆ ನೆಪೋಲಿಯನನೊಡನೆ ಆದ ಯುದ್ಧದಲ್ಲಿ ಮಹತ್ವದ ಕೆಲಸಗಳನ್ನು ಮಾಡಿ ಹೆಸರಾದನು. ಇವನು ಬರುವಷ್ಟರಲ್ಲಿ ರಾಜ್ಯವಿಸ್ತಾರದ ಮತ್ತು ಗಡಿನಾಡುಗಳ ಭದ್ರತೆಯ ಕೆಲಸಗಳು ಮುಗಿದಿದ್ದವು. ಅಲ್ಲದೆ ಇವನು ಶಾಂತತೆಯನ್ನು ಕಾದುಕೊಂಡು ಸುಧಾರಣೆಗಳನ್ನು ಮಾಡುವಲ್ಲಿ ಹೆಚ್ಚು ಮನಸ್ಸುಳ್ಳವನಾಗಿದ್ದನು. ಆದದರಿಂದ ಇವನ ಕಾಲದಲ್ಲಿ ಯುದ್ಧಗಳು ಉಂಟಾಗಲಿಲ್ಲ.

೫. **ಬೆಂಟಿಂಕನ ರಾಜಕೀಯ ಸುಧಾರಣೆಗಳು**:— **೧. ಹಣದ ತೊಂದರೆಯನ್ನು ತಪ್ಪಿಸಿದ್ದು**— ಬ್ರಹ್ಮದೇಶದ ಯುದ್ಧಕ್ಕೆ ಸುಮಾರು ೧॥ ಕೋಟಿ ರೂಪಾಯಿಗಳು ವೆಚ್ಚವಾದುದರಿಂದ ಕಂಪನಿ ಸರಕಾರಕ್ಕೆ ಬಹಳ

ಸಾಲವಾಗಿತ್ತು. ಬೆಂಟಿಂಕನು ಸೈನ್ಯದ ಅಧಿಕಾರಿಗಳ ಭತ್ತೆಯನ್ನು ನಿಲ್ಲಿಸಿಯೂ ಮುಲಕಿ ಅಧಿಕಾರಿಗಳ ಸಂಬಳವನ್ನು ಕಡಿಮೆಮಾಡಿಯೂ ವೆಚ್ಚವನ್ನು ಉಳಿಸಿದನು. ಮತ್ತು ಆಗ್ರಾ, ಅಯೋಧ್ಯಾ ಈ ಪ್ರಾಂತಗಳ ಭೂಮಿಯನ್ನು ಅಳೆದು ತೆರಿಗೆಯನ್ನು ಗೊತ್ತುಮಾಡಿಯೂ ಸರಕಾರಕ್ಕೆ ಹಣಕೊಟ್ಟು ಗುತ್ತಿಗೆ ಹಿಡಿದವರೇ ಅಫುವಿನ ಮಾರಾಟ ಮಾಡಬೇಕೆಂಬ ಕಟ್ಟುಮಾಡಿಯೂ ಉತ್ಪನ್ನವನ್ನು ಹೆಚ್ಚಿಸಿದನು. ಇದರಿಂದ ಕಂಪನಿಯ ಸಾಲವು ತೀರಿ, ಖಜಾನೆಯಲ್ಲಿ ಶಿಲುಕು ಉಳಿಯಹತ್ತಿತು **೨. ನ್ಯಾಯಪದ್ಧತಿ**— ಬೆಂಟಿಂಕನು ಕಾರ್ನವಾಲೀಸನ ಕಾಲದ ಪ್ರಾಂತಿಕ ಅಪೀಲು ಕೋರ್ಟುಗಳನ್ನು ತೆಗೆದುಹಾಕಿ ಜಿಲ್ಲೆಯ **ಜಜ್ಜರ** ಅಧಿಕಾರಗಳನ್ನು ಹೆಚ್ಚಿಸಿದನು. ಮತ್ತು ಕಲೆಕ್ಟರರಿಗೆ **ಮ್ಯಾಜಿಸ್ಟ್ರೇಟನ** ಅಧಿಕಾರವನ್ನು ಕೊಟ್ಟನು. **೩. ಹಿಂದೀ ಜನರಿಗೆ ಅಧಿಕಾರದ ಸ್ಥಳಗಳನ್ನು ಕೊಟ್ಟಿದ್ದು—** ಯೋಗ್ಯತೆಯುಳ್ಳ ಹಿಂದೀ ಜನರಿಗೆ ಅಧಿಕಾರದ ಸ್ಥಳಗಳು ದೊರೆಯಹತ್ತಿದವು. ನ್ಯಾಯಖಾತೆಯಲ್ಲಂತು ಹಿಂದೀಯರನ್ನು ನಿಯಮಿಸಿಕೊಳ್ಳುವದು ಬೆಂಟಿಂಕನಿಗೆ ಅವಶ್ಯವೆನಿಸಿತು. **೪. ಸರಕಾರೀ ಲೆಕ್ಕಪತ್ರಗಳಲ್ಲಿ ದೇಶೀಯ ಭಾಷೆಯ ಉಪಯೋಗ**- ಮುಸಲ್ಮಾನರ ಆಳಿಕೆಯಿಂದ ಸರಕಾರಿ ಲೆಕ್ಕಪತ್ರಗಳೆಲ್ಲ **ಪಾರ್ಸೀ** ಭಾಷೆಯಲ್ಲಿಯೇ ಬರೆಯಲ್ಪಡುತ್ತಿದ್ದವು ಅದು ತಪ್ಪಿ ದೇಶೀಯ ಭಾಷೆಗಳಲ್ಲಿಯೇ ಅವುಗಳನ್ನು ಬರೆಯಲು ಆರಂಭವಾಯಿತು.

---

## ೧೫ನೆಯ ಪಾಠ

**ಲಾರ್ಡ ಉ. ಬೆಂಟಿಂಕ.** **ಸರ್ ಚಾರ್ಲ್‌ಸ ಮೆಟ್‌ಕಾಫ್.**

( ಮುಂದೆ ಸಾಗಿದೆ ) ( ಕ್ರಿ. ಶ. ೧೮೩೫-೧೮೩೬ )

೧. **ಬೆಂಟಿಂಕನ ರಾಜ್ಯವಿಸ್ತಾರ:**— ಸಹಾಯಕ ಸೈನ್ಯಪದ್ಧತಿಗೆ ಒಳಗಾದದಿಂದನಿಂದ ದೇಶೀಯ ಅರಸರಿಗೆ ಸಂರಕ್ಷಣೆಯ ಕೆಲಸವು ಇಲ್ಲದಾಯಿತು. ಇದರಿಂದ ಬಹುಜನ ಅರಸರು ವಿಲಾಸಿಗಳೂ ದುರ್ವ್ಯಸನಿಗಳೂ ಆದರು ಅವರೊಳಗಿನ ಕೆಲರಂತು ಪ್ರಜೆಗಳನ್ನು ಪೀಡಿಸಿ ಹಣವೆತ್ತಹತ್ತಿದರು.

ಈ ರೀತಿ ಅವ್ಯವಸ್ಥಿತವಾದ ಕೆಲವು ಸಂಸ್ಥಾನಗಳ ಕಾರಭಾರದಲ್ಲಿ ಬೆಂಟಿಂಕನು ಕೈಹಾಕಿದನು. ಅವುಗಳ ವಿವರ:— **೧. ಮೈಸೂರು**- ಮುಮ್ಮಡಿ

ಕೃಷ್ಣರಾಜನು ಸರಿಯಾಗಿ ಆಳದೆ ಪ್ರಜೆಗಳನ್ನು ಪೀಡಿಸಿದ್ದರಿಂದ ಬೆಂಟೆಂಕನು ಅವನನ್ನು ಪಟ್ಟದಿಂದ ದೂರಮಾಡಿ ಮೈಸೂರ ಕಾರಭಾರವನ್ನು ರೆಸಿಡೆಂಟ ನಿಂದ ಸಾಗಿಸಿದನು. **೧೮೩೧. ೨. ಕುರ್ಗ (ಕೊಡಗು)**– ಕೊಡಗಿನ ಅರಸ ನಾದ ವೀರರಾಜೇಂದ್ರನು ದುರ್ವ್ಯಸನಿಯೂ ತಲೆತಿರುಕನೂ ಆದುದರಿಂದ ಅವ ನನ್ನು ತಳ್ಳಿ ಆ ಸೀಮೆಯನ್ನು ಬೆಂಟೆಂಕನು ಇಂಗ್ಲಿಷರ ರಾಜ್ಯಕ್ಕೆ ಕೂಡಿಸಿದನು. ಕ್ರಿ. ಶ. **೧೮೩೪. ೩. ಸಿಲ್ಹೆಟ**- ಅಲ್ಲಿಯ ಅರಸು ಬಂಗಾಲ ಪ್ರಾಂತ್ರದ ಹಲವರನ್ನು ಕೊಲೆಗೊಳಿಸಿದ್ದರಿಂದ ಅದು ಖಾಲಸಾತ ಆಯಿತು. **೪. ಕಾಚಾರ** ಈ ಸಂಸ್ಥಾನದ ಅರಸನು ಕ್ರಿ. ಶ. **೧೮೩೦**ರಲ್ಲಿ ಸತ್ತನು. ಆಗ ಪಟ್ಟಣದ ಹಕ್ಕು ದಾರರಿಲ್ಲದ್ದರಿಂದ ಈ ರಾಜ್ಯವೂ ಇಂಗ್ಲಿಷರ ವಶವಾಯಿತು.

**೨. ಜನಹಿತದ ಸುಧಾರಣೆಗಳು:— ೧. ಸತಿಹೋಗುವದನ್ನು ತಡೆದದ್ದು**– ' ಸತಿಹೋಗುವದು , ಎಂದರೆ, ಗಂಡನು ಸಾಯಲು ಹೆಂಡತಿಯು ಅವನ ಚಿತೆಯಲ್ಲಿ ಹಾರಿಕೊಂಡು ಸಾಯುವದು ಈಪದ್ಧತಿಯು ನಮ್ಮ ದೇಶದಲ್ಲಿ ಬಹುಕಾಲದಿಂದ ರೂಢಿಯಲ್ಲಿತ್ತು. ಮೊದಲು ಸ್ತ್ರೀಯರನ್ನು ಸತಿಹೋಗಲು ಯಾರೂ ಒತ್ತಾಯಪಡಿಸುತ್ತಿರಲಿಲ್ಲ. ಸ್ವೇಚ್ಛೆಯಿಂದ ಸತಿಹೋಗುವ ಪತಿವ್ರತಾ ಸ್ತ್ರೀಯರನ್ನು ಒಳ್ಳೆಯ ಗೌರವದಿಂದ ಕಾಣುತ್ತಿದ್ದರು. ಆದರೆ ಮುಂದಿನ ಕಾಲದಲ್ಲಿ ಸತಿಹೋಗುವದು ಒಂದು ಸಾಂಪ್ರದಾಯವಾಯಿತು. ಇಚ್ಛೆಯಿಲ್ಲದ ಸ್ತ್ರೀಯರನ್ನು ಸತಿಹೋಗಲು ಒತ್ತಾಯಪಡಿಸಹತ್ತಿದರು. ಅಕಬರನ ಕಾಲದಲ್ಲಿ ಈ ಪದ್ಧತಿಯನ್ನು ತಡೆಯುವ ಪ್ರಯತ್ನವಾಗಿತ್ತು. ಆದರೆ ಯಶವು ಸಿಗಲಿಲ್ಲ. ಬೆಂಟೆಂಕನು ಮಾತ್ರ ಈ ಪದ್ಧತಿಯನ್ನು ನಿಲ್ಲಿಸುವ ನಿಶ್ಚಯಮಾಡಿದನು. ಆವನು **ರಾಜಾರಾಮಮೋಹನರಾಯ**ರಂಥ ಸುಸಿಕ್ಷಿತರ ಬೆಂಬಲವನ್ನು ಪಡೆದು 'ಸತಿಹೋವ ಸ್ತ್ರೀಯಳ ಸಂಬಂಧಿಕರು ಕೊಲೆಯ ಸಹಾಯಕರೆಂದು ತಿಳಿದು ವಿಚಾರಣೆಗೆ ಗುರಿಮಾಡಲ್ಪಡುವರು' ಎಂಬರ್ಥದ ಕಾಯದೆಯನ್ನು ಮಾಡಿದನು. ಆಗ ಸತಿಹೋಗುವದು ಕಟ್ಟಾಯಿತು. **೨ ಠಕ್ಕರ ನಾಶ**—- ಠಕ್ಕರು ದೇವಿಯ ಪೂಜಕರು. ಇವರು ತೋರಿಕೆಯಲ್ಲಿ ಹಳ್ಳಿಯ ದಾರಿಕಾರ– ರಂತೆ ಇದ್ದು, ಉಳಿದ ದಾರಿಕಾರರನ್ನು ಕೂಡಿಕೊಂಡು ಮುಂದೆ ಸಾಗಿ ಇಕ್ಕಟ್ಟಿನ ಸ್ಥಳದಲ್ಲಿ ಅವರಲ್ಲಿಯ ಶ್ರೀಮಂತರನ್ನು ಕೊಂದು ಅವರಆಸ್ತಿಯನ್ನು ಎತ್ತಿಕೊಳ್ಳುತ್ತಿದ್ದರು. ಇವರು ತಮ್ಮದೊಂದು ಸ್ವತಂತ್ರವಾದ ಭಾಷೆಯನ್ನೇ

ಕಲ್ಪಿಸಿಕೊಂಡಿದ್ದರು. ಬೆಂಟಿಂಕನ ಕಾಲದಲ್ಲಿ ಈ ಠಕ್ಕರ ಕಾಟವು ಹೆಚ್ಚಾಯಿತು ಆಗ **ಸ್ಲೀಮನ್** ಎಂಬ ಅಧಿಕಾರಿಯು ೨-೩ ಸಾವಿರ ಠಕ್ಕರನ್ನು ಹಿಡಿದು ಅಪರಾಧಕ್ಕೆ ತಕ್ಕಂತೆ ಕೆಲವರಿಗೆ ಮರಣದ ಶಿಕ್ಷೆಯನ್ನೂ ಉಳಿದವರಿಗೆ ಕಠಿಣ ಶಿಕ್ಷೆಯನ್ನೂ ಕೊಡಲು ಅವರ ಕಾಟವು ತಪ್ಪಿಹೋಯಿತು. ೩. **ಮಾರ್ಗಗಳೂ ಕಾಲುವೆಗಳೂ**— ಮುಂಬಯಿಯಿಂದ ಆಗ್ರಾದ ವರೆಗೆ ಒಂದು, ಮತ್ತು ದಿಲ್ಲಿಯಿಂದ ಕಲಕತ್ತೆಯ ವರೆಗೆ ಒಂದು ಹೀಗೆ ಎರಡು ರಾಜಮಾರ್ಗಗಳು ಆದವು. ಕಾಲುವೆಗಳನ್ನು ಕಟ್ಟಿಸುವ ಕೆಲಸವು ಹೆಚ್ಚಿಗೆ ಸಾಗಹತ್ತಿತು. ೪. **ಶಿಕ್ಷಣ**— ಇಂಗ್ಲಿಷ ಭಾಷೆಯನ್ನೂ ಅದರ ಮುಖಾಂತರವಾಗಿ ಉಳಿದ ಪಾಶ್ಚಾತ್ಯ ವಿದ್ಯೆಗಳನ್ನೂ ಈ ದೇಶದವರಿಗೆ ಕಲಿಸಬೇಕೆಂದು ಗೊತ್ತಾಯಿತು. ಕೂಡಲೆ ಅಲ್ಲಲ್ಲಿ ಇಂಗ್ಲಿಷ ಶಾಲೆಗಳುಂಟಾದವು. ಕಲಕತ್ತೆಯಲ್ಲಿ ಪಾಶ್ಚಾತ್ಯ ವೈದ್ಯಕ ಶಾಲೆಯೊಂದು ಸ್ಥಾಪಿಸಲ್ಪಟ್ಟಿತು.

೩. **ಕಂಪನಿಯ ಸನದಿನ ವಿಚಾರಣೆ**:- ಕ್ರಿ.ಶ. **೧೮೩೩** ಪಾರ್ಲಮೆಂಟ ಸಭೆಯಲ್ಲಿ ಕಂಪನಿಯ ಸನದಿನ ಚರ್ಚೆಯು ನಡೆದು, **೧.** ಕಂಪನಿಯವರು ವ್ಯಾಪಾರವನ್ನು ಬಿಟ್ಟುಕೊಟ್ಟು ಬರಿಯ ರಾಜ್ಯ ಕಾರಭಾರವನ್ನು ಸಾಗಿಸಬೇಕು. **೨.** ಈಸ್ಟ ಇಂಡಿಯಾ ಕಂಪನಿಯ ಪಾಲುಗಾರರಿಗೆ ಹಿಂದುಸ್ತಾನದ ಖಜಾನೆಯಿಂದ ೧೦೦ಕ್ಕೆ ೧೦॥ಯಂತೆ ಬಡ್ಡಿಯನ್ನು ಕೊಡತಕ್ಕದ್ದು ೩. ಚೀನದ ಕೂಡ ಬೇಕಾದವರು ವ್ಯಾಪಾರ ಮಾಡಬಹುದು. ೪. ಆಗ್ರಾ ಪ್ರಾಂತವನ್ನು ಬಂಗಾಲ ಇಲಾಖೆಯಿಂದ ಬೇರ್ಪಡಿಸಿ 'ವಾಯುವ್ಯ ಪ್ರಾಂತ' ಎಂಬ ಹೆಸರಿಟ್ಟು ಅದಕ್ಕೊಬ್ಬ ಸ್ವತಂತ್ರ ಅಧಿಕಾರಿಯನ್ನು ನಿಯಮಿಸಬೇಕು. ೫ ಇಡೀ ಹಿಂದುಸ್ತಾನ ಸಂಬಂಧ ಕಾಯುವೆ ಮಾಡುವ ಅಧಿಕಾರವು ಗ. ಜನರಲ್‌ನಿಗೆ ಇರಬೇಕು. ಅವನ ನೆರವಿಗೆ ಒಬ್ಬ ಕಾಯುದೆ ಪಂಡಿತನನ್ನು ಕೊಡಬೇಕು.

೪. **ಬೆಂಟಿಂಕನ ಯೋಗ್ಯತೆ**:— ಇವನು ಉದಾರನೂ ಶಾಂತತಾಪ್ರೀಯನೂ ಮುತ್ಸದ್ದಿಯೂ ಆಗಿದ್ದನು. ' ಪ್ರಜೆಗಳ ಹಿತವನ್ನು ಸಾಧಿಸುವದು ಸರಕಾರದ ಕರ್ತವ್ಯವು ' ಎಂಬ ಮಾತನ್ನು ಲಕ್ಷ್ಯದಲ್ಲಿಟ್ಟು ಇವನು ಕಾರಭಾರವನ್ನು ಸಾಗಿಸಿದನು. ಇವನ ಆಳಿಕೆಯಲ್ಲಿ ಇಂಗ್ಲಿಷ ರಾಜ್ಯದ ವಿಷಯವಾಗಿ ಜನರಲ್ಲಿ ಸಹಾನುಭೂತಿಯು ಉಂಟಾಗಹತ್ತಿತು. ಇವನು ಕ್ರಿ ಶ. **೧೮೩೫**ರಲ್ಲಿ ತನ್ನ ದೇಶಕ್ಕೆ ಹೋದನು.

**೫. ಸರ್ ಚಾರ್ಲ್ಸ್ ಮೆಟ್‌ಕಾಫ್** :— ಕ್ರಿ. ಶ. **೧೮೩೩**ರಲ್ಲಿ ಇವನು ವಾಯವ್ಯಪ್ರಾಂತದ ಲೆಫ್ಟನೆಂಟ ಗವ್ಹರ್ನರನಾಗಿದ್ದನು. ಇವನು ಯೋಗ್ಯತೆಯುಳ್ಳವನಿದ್ದುದರಿಂದ ಬೆಂಟಿಂಕನ ತರುವಾಯ ಗವ್ಹರ್ನರ ಜನರಲನಾದನು.

ವಾರನ್ ಹೆಸ್ಟಿಂಗ್ಸನ ಕಾಲದಿಂದ ವರ್ತಮಾನ ಪತ್ರಗಳಮೇಲೆ ಒಂದಿಲ್ಲೊಂದು ಬಗೆಯಿಂದ ನಿರ್ಬಂಧಗಳಿದ್ದವು. ಮೆಟ್‌ಕಾಫ್‌ನು ಈ ನಿರ್ಬಂಧಗಳನ್ನು ತೆಗೆದುಹಾಕಿ ವರ್ತಮಾನಪತ್ರಗಳಿಗೆ ಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟನು. ಇವನ ಈ ಧೋರಣೆಯು ಡಾಯರೆಕ್ಟರರ ಮನಸ್ಸಿಗೆ ಬರಲಿಲ್ಲ. ಆದದರಿಂದ ಇವನು ಕೆಲಸಬಿಟ್ಟು ಇಂಗ್ಲಿಂಡಿಗೆ ಹೋದನು. ಲಾರ್ಡ ಆಕ್ಲಂಡನು ಗ ಜನರಲನಾದನು. ಕ್ರಿ. ಶ. ೧೮೩೬.

---

# ೧೬ನೆಯ ಪಾಠ

## ಲಾರ್ಡ ಆಕ್ಲಂಡ. (ಕ್ರಿ ಶ. ೧೮೩೬—೧೮೪೨)

## ಲಾರ್ಡ ಎಲೆನಬರೊ. (ಕ್ರಿ. ಶ. ೧೮೪೨—೧೮೪೪)

**೧. ಆಕ್ಲಂಡನು ಬಂದ ಕಾಲದ ಸ್ಥಿತಿ** :— ಈಸ್ಟ ಇಂಡಿಯಾ ಕಂಪನಿಯ ನವಕರನೊಬ್ಬನು ಗ. ಜನರಲನಾಗಿರುವದು ಪಾರ್ಲಮೆಂಟನವರ ಮನಸ್ಸಿಗೆ ಒಪ್ಪಲಿಲ್ಲ ಆದದರಿಂದ ಅವನು ಮೆಟ್‌ಕಾಫ್‌ನನ್ನು ತೆಗೆಯುವ ಭರದಲ್ಲಿ **ಲಾರ್ಡ ಆಕ್ಲೆಂಡ್** ಎಂಬ ಹೆಚ್ಚಿನ ಯೋಗ್ಯತೆಯಿಲ್ಲದ ಮನುಷ್ಯನನ್ನು ಗ. ಜ ನನ್ನಾಗಿ ಆರಿಸಿದರು ಆಕ್ಲಂಡನು ಬಂದಾಗ ದೇಶದಲ್ಲಿ ಶಾಂತತೆಯಿತ್ತು. ಕ್ರಿ. ಶ. ೧೮೧೫ರಲ್ಲಿ **ವಾಟರ್ಲೂ** ಕಾಳಗದಲ್ಲಿ ನೆಪೋಲಿಯನನು ಸೋತಂದಿನಿಂದ, ವಾಯವ್ಯ ದಿಕ್ಕಿನಿಂದ ಫ್ರೇಂಚರು ಬರುವ ಹೆದರಿಕೆಯು ಇಲ್ಲದಾಗಿದ್ದಿತು. ರಶಿಯದ **ಝಾರನು** ಮಾತ್ರ ಪ್ರಬಲನಾಗಿ ತನ್ನ ರಾಜ್ಯವನ್ನು ಇರಾಣ, ಅಫಗಾಣಿಸ್ತಾನ ಈ ದೇಶಗಳಿಗೆ ನಿಲುಕಿಸಿದ್ದನು. ಅವನು ಹಿಂದುಸ್ಥಾನಕ್ಕೆ ಬರುವ ಮನಸ್ಸುಳ್ಳವನಾಗಿದ್ದರೂ ದಾರಿಯಲ್ಲಿರುವ ಇರಾಣ, ಅಫಗಾಣಿಸ್ಥಾನ, ಪಂಜಾಬ ಈ ದೇಶಗಳನ್ನು ದಾಟಿ ಇಷ್ಟರಲ್ಲಿ ಬರುವದು ಶಕ್ಯವಿರಲಿಲ್ಲ.

೨. **ಅಫಗಾಣಸ್ಥಾನದಲ್ಲಿಯ ಪಟ್ಟದ ಜಗಳ** :— ಅಫಗಾಣಿಸ್ಥಾನದ ವಜೀರನಾದ **ಫತ್ತೇಖಾನನು** ಅಲ್ಲಿಯ ಬಾದಶಹನಾದ ಝುಮಾನಷಾಹನ ಕಣ್ಣುಕೀಳಿಸಿ ಅವನನ್ನು ತಳ್ಳಿ ಪಟ್ಟವನ್ನು ಹಿಡಿದುಕೊಂಡನು. ಕ್ರಿ. ಶ. **೧೮೧೦.** ಆಗ ಝುಮಾನಷಾಹನ ತಮ್ಮ **ಷಾಹೆಸೂಜನು** ಅಣ್ಣನೊಡನೆ **ಲುಧಿಯಾನೆಗೆ** ಬಂದು ಇಂಗ್ಲಿಷರ ಆಶ್ರಯವಲ್ಲಿರಹತ್ತಿದನು. ಫತ್ತೇಖಾನನು ಶೂರನೂ ಜಾಣನೂ ಜನಪ್ರೀಯನೂ ಇದ್ದದರಿಂದ ಅವನ ಆಳಿಕೆಯಲ್ಲಿ ಅಫಗಾನ ದೇಶವು ಏಳ್ಗೆಯನ್ನು ಹೊಂದಿತು. ಮುಂದೆ ಕ್ರಿ. ಶ. **೧೮೨೮**ರಲ್ಲಿ ಫತ್ತೇಖಾನನ ಕೊಲೆಯಾಗಲು ಅವನ ತಮ್ಮನಾದ **ದೋಸ್ತಮುಹಮ್ಮದನು** ಅರಸನಾದನು ಆಗ ಷಾಹೆಸೂಜನು ಇದು ಅನುಕೂಲ ಕಾಲವೆಂದು ಇಂಗ್ಲಿಷರ ಸ್ನೇಹಿತರಾಗಿದ್ದ ರಣಜಿತಸಿಂಗನಿಗೆ **ಕೋಹಿನೂರ** ರತ್ನವನ್ನು ಕೊಟ್ಟು, ಅವನ ನೆರವನ್ನು ಹೊಂದಿ, ದೋಸ್ತಮುಹಮ್ಮದನ ಮೇಲೆ ಸಾಗಿಹೋದನು. ಆದರೆ ಅಫಗಾನರು ಒಟ್ಟಾಗಿ ವಿರೋಧಿಸಿದ್ದರಿಂದ ಇವನು ಸೋತು ಹಿಂದಿರುಗಿದನು. ರಣಜಿತಸಿಂಗನು ಮಾತ್ರ **ಪೇಶಾವರ** ಪ್ರಾಂತವನ್ನು ತನ್ನ ಕೈಸೇರಿಸಿಕೊಂಡನು.

೩. **ಅಫಗಾಣಿಸ್ಥಾನದ ಮೊದಲನೆಯ ಯುದ್ಧ** :— ಕ್ರಿ ಶ. **೧೮೩೮-೧೮೪೨. ಕಾರಣಗಳು**— ಅಫಗಾಣಿಸ್ಥಾನದ ಅರಸನೊಡನೆ ಸ್ನೇಹದ ಒಪ್ಪಂದಮಾಡಿಕೊಳ್ಳಬೇಕೆಂದು, ಆಕ್ಲಂಡನಿಗೆ ಅಪ್ಪಣೆಯಾಗಿತ್ತು. ಇಂಗ್ಲಿಷರ ಆಶ್ರಿತನಾಗಿದ್ದ ಷಾಹೆಸೂಜನ ಪ್ರಯತ್ನವು ಕೈಗೂಡಿ ಅವನಿಗೆ ಅಫಗಾನ ರಾಜ್ಯವು ಮರಳಿ ದೊರೆತಿದ್ದರೆ ಬೇರೆ ಒಪ್ಪಂದದ ಅವಶ್ಯವಿರಲಿಲ್ಲ. ಆದರೆ ಹಾಗೆ ಆಗದೆಯಿದ್ದವರಿಂದ ಆಕ್ಲಂಡನು ದೋಸ್ತಮುಹಮ್ಮದನ ಕಡೆಗೆ ವಕೀಲನನ್ನು ಕಳುಹಿದನು. ದೋಸ್ತಮುಹಮ್ಮದನು ಆ ವಕೀಲನನ್ನು ಬರಮಾಡಿಕೊಂಡು, 'ರಣಜಿತಸಿಂಗನ ವಶದಲ್ಲಿದ್ದ ಪೇಶಾವರ ಪ್ರಾಂತವನ್ನು ತೆಗೆದುಕೊಳ್ಳಲು ನೆರವಾಗುತ್ತಿದ್ದರೆ ಮಾತ್ರ ಇಂಗ್ಲಿಷರೊಡನೆ ಒಪ್ಪಂದ ಮಾಡುವೆನು' ಎಂದು ಹೇಳಿದನು. ಆಗ ವಕೀಲನು ರಣಜಿತಸಿಂಗನ ವಿರುದ್ಧ ಹೋಗುವದು ಒಳಿತಲ್ಲೆಂದು ಬಗೆದು ಸುಮ್ಮನೆ ಹಿಂದಿರುಗಿದನು. ಇಂಗ್ಲಿಷರ ಸ್ನೇಹದ ಆಶೆ ತಪ್ಪಲು ದೋಸ್ತಮುಹಮ್ಮದನು ರಶಿಯದವರ ಕೂಡ ಒಡಂಬಡಿಕೆ ಮಾಡಿಕೊಂಡನು. ಕ್ರಿ. ಶ. **೧೮೩೮. ಯುದ್ಧ**— ಬಳಿಕ ಇಂಗ್ಲಿಷರು ಷಾಹೆಸೂಜ

ನೊಡನೆ † **ಲಾಹೋರಕ್ಕೆ** ಹೋಗಿ ರಣಜಿತಸಿಂಗನ ಕೂಡ ಒಪ್ಪಂದವಮಾಡಿಕೊಂಡು ಅವನ ಸಹಾಯನ್ನು ಪಡೆದರು. ಮತ್ತು ದೋಸ್ತಮಹಮ್ಮದನನ್ನು ತಳ್ಳಿ ಷಾಹೆಸೂಜನನ್ನು ಪಟ್ಟಕ್ಕೆ ಕುಳ್ಳಿರಿಸಬೇಕೆಂದು ನಿಶ್ಚಯಿಸಿ ಯುದ್ಧವನ್ನು ಸಾರಿದರು. ಬಂಗಾಲದಿಂದಲೂ ಮುಂಬಯಿಯಿಂದಲೂ ಇಂಗ್ಲಿಷರ ಸೈನ್ಯಗಳು ಅಫಗಾಣಿಸ್ಥಾನದ ಕಡೆಗೆ ಹೊರಟವು. ಅವೆರಡೂ ಕಂದಹಾರದಲ್ಲಿ ಒಟ್ಟಾಗಿ **ಸರ್ ಜಾನ್ ಕೀನನ** ಕೈಕೆಳಗೆ **ಗಝ್ನಿಯ** ಮೇಲೆ ಸಾಗಿದವು. ಕೀನನು ಶೌರ್ಯದಿಂದ ಕಾದಿ ಆ ಕೋಟೆಯನ್ನು ವಶಮಾಡಿಕೊಂಡನು. ಅಲ್ಲಿ ವಿಪುಲವಾದ ಯುದ್ಧಸಾಹಿತ್ಯವು ಇಂಗ್ಲಿಷರಿಗೆ ದೊರೆಯಿತು ಆಮೇಲೆ. ಇಂಗ್ಲಿಷ ಸೈನ್ಯವು **ಕಾಬೂಲದ** ಕಡೆಗೆ ಸಾಗಲು ದೋಸ್ತಮಹಮ್ಮದನು ಓಡಿಹೋದನು. ಯುದ್ಧವಾಗದೆ ಕಾಬೂಲ ಪಟ್ಟಣವು ವಶವಾಯಿತು. ಷಾಹೆಸೂಜನು ಅಫಗಾಣಿಸ್ಥಾನದ ಅರಸನಾದನು. ಕ್ರಿ. ಶ. ೧೮೩೯.

೪. **ಯುದ್ಧದ ತರುವಾಯದ ಸ್ಥಿತಿ**:— ಷಾಹೆಸೂಜನು ಅರಸನಾದರೂ ಜನರು ಅವನನ್ನು ಪ್ರೀತಿಸಲಿಲ್ಲ. ಆದದರಿಂದ ಅವನು ಇಂಗ್ಲಿಷರ ಸೈನ್ಯದ ಬೆಂಬಲವನ್ನು ಕಾದುಕೊಳ್ಳಬೇಕಾಯಿತು. ಇಂಗ್ಲಿಷ ಅಧಿಕಾರಿಗಳೂ ಸೈನ್ಯಗಳೂ **ಕಾಬೂಲ ಕಂದಹಾರ-ಜಲಾಲಾಬಾದ**ಗಳಲ್ಲಿ ಇರುತ್ತಿದ್ದರು. ಮುಂದೆ ಅಲ್ಲಿ ಬಹಳ ದಿವಸ ಇರಬೇಕಾದುದರಿಂದಲೂ ಅಲ್ಲಿಯ ತಂಪು ಹವೆಯು ಸೊಗಸೆನಿಸಿದ್ದರಿಂದಲೂ ಇಂಗ್ಲಿಷರು ತಮ್ಮ ಹೆಂಡಿರು ಮಕ್ಕಳನ್ನು ಕೂಡ ಅತ್ತ ಕರೆಯಿಸಿಕೊಂಡರು. ಓಡಿಹೋಗಿದ್ದ ದೋಸ್ತಮಹಮ್ಮದನು ಯಾರ ನೆರವೂ ಸಿಗದೆಯಿದ್ದದರಿಂದ ಇಂಗ್ಲಿಷರ ಕೈಸೇರಿದನು. ಅವರು ಅವನನ್ನು ಕಲಕತ್ತೆಯಲ್ಲಿ ಇಟ್ಟರು.

೫. **ಅಕಬರಖಾನನ ಬಂಡಾಯ**:— ದೋಸ್ತಮಹಮ್ಮದನ ಮಗ ಅಕಬರಖಾನನು ಅಫಗಾಣಿಸ್ಥಾನದಲ್ಲಿಯ ಜನರನ್ನು ಕೂಡಿಸಿಕೊಂಡು ಮುಖ್ಯ

---

† ಲಾಹೋರದ ಒಪ್ಪಂದವು ಇಂಗ್ಲಿಷರು, ಷಾಹೆಸೂಜ, ರಣಜಿತಸಿಂಗ ಈ ಮೂವರಲ್ಲಾಯಿತು. ಇದರ ಕರಾರುಗಳು— ೧. ಇಂಗ್ಲಿಷರು ಷಾಹಸೂಜನನ್ನು ಕಾಬೂಲ ಪಟ್ಟಕ್ಕೆ ಕುಳ್ಳಿರಿಸಬೇಕು. ೨. ಷಾಹೆಸೂಜನು ಹಿಂದುಸ್ತಾನಕ್ಕೆ ಪರಚಕ್ರಗಳ ದಾಳಿ ತಟ್ಟದಂತೆ ಕಾದುಕೊಂಡಿರಬೇಕು. ೩. ರಣಜಿತಸಿಂಗನಿಗೆ **ಪೇಶಾವರ** ಮತ್ತು ಸಿಂಧದ ವರೆಗಿನ ಸೀಮೆಯನ್ನು ಕೊಡಬೇಕು. ೪. ಇಂಗ್ಲಿಷರ ವಕೀಲನನ್ನು ಕಾಬೂಲದಲ್ಲಿ ಇಟ್ಟುಕೊಳ್ಳಬೇಕು.

ವಾಗಿ ಇಂಗ್ಲಿಷ ರೆಸಿಡೆಂಟನನ್ನು ಕೊಂದು ಅವರ ಸೈನ್ಯಕ್ಕೆ ಕಾಳುಕಡಿಗಳು ಸಿಗದಂತೆ ಮಾಡಿದನು. ಈ ಪ್ರಸಂಗದಲ್ಲಿ ಎಲ್ಲ ಕಡೆಗೆ ಅಸ್ವಸ್ಥತೆಯಿದ್ದದರಿಂದ ಕಂದಹಾರ, ಜಲಾಲಾಬಾದಗಳಿಂದಲೂ ನೆರವು ದೊರೆಯುವದು ಅಶಕ್ಯವಾ- ಯಿತು. ಆದದರಿಂದ ಕಾಬೂಲದ ಇಂಗ್ಲಿಷ ಅಧಿಕಾರಿಗಳು ಹೆದರಿ ಅಕಬರಖಾನ ನಿಗೆ ಶರಣುಹೋಗಿ ಯಾವತ್ತು ಶಸ್ತ್ರಾಸ್ತ್ರಗಳನ್ನು ಒಪ್ಪಿಸಿದರು. ಹೆಂಡರು ಮಕ್ಕಳನ್ನೂ ಜಡ್ಡಿನವರನ್ನೂ ಅವನ ವಶಕ್ಕೆ ಕೊಟ್ಟು ಹಿಂದುಸ್ಥಾನದ ದಾರಿಯು ಹಿಡಿದರು. ಆದರೆ ಈ ಜನರು ಗುಡ್ಡುಗಾಡು ಸೀಮೆಯಲ್ಲಿಯೂ ಇಕ್ಕಟ್ಟಾದ ಕಣಿವೆಗಳಲ್ಲಿಯೂ ಹಾದು ಬರುತ್ತಿರಲು ಅಫಗಾನರು ಅವರ ಮೇಲೆ ಬಿದ್ದು ಎಲ್ಲರನ್ನು ಕೊಂದುಹಾಕಿದರು. ಹದಿನಾರು ಹದಿನೇಳು ಸಾವಿರ ಜನರಲ್ಲಿ ಡಾ. **ಬ್ರಾಯಡನ್** ಎಂಬವನೊಬ್ಬನು ಮಾತ್ರ ಸತ್ತು ಕೆಟ್ಟು ಜಲಾಲಾಬಾದಕ್ಕೆ ಬಂದು ಮುಟ್ಟಿದನು. ಕ್ರಿ. ಶ. **೧೮೪೨.** ಬಳಿಕ ಅಫಗಾನರು ಜಲಾಲಾಬಾದ ವನ್ನೂ ಮುತ್ತಿದರು. ಅತ್ತ ಕಾಬೂಲದವರು ಷಾಹೆಸೂಜನನ್ನು ಕೊಂದರು.

**೬. ಆಕ್ಲಂಡನು ಹೋಗಿ ಲಾರ್ಡ ಎಲೆನಬರೋನು ಬಂದುದ್ದು:**— ಅಫಗಾಣಿಸಾನ್ಥನದಲ್ಲಿ ಹೀಗೆ ಅನರ್ಥವಾಗಿರಲು ಲಾರ್ಡ ಆಕ್ಲಂಡನು ಹೋಗಿ ಲಾರ್ಡ ಎಲಿನಬರೋನು ಗ. ಜನರಲನಾಗಿ ಬಂದನು. ಅಫಗಾನ ಯುದ್ಧವನ್ನು ಮುಗಿಸುವ ಹೊರೆಯು ಇವನ ಪಾಲಿಗೆ ಬಂದಿತು

**೭. ಅಫಗಾನ ಯುದ್ಧದ ಕೊನೆ:**— ಎಲೆನಬರೋನು ಬಂದೊಡನೆ ಪೋಲಾಕನನ್ನು ಅಫಗಾಣಿಸ್ಥಾನದ ಮೇಲೆ ಕಳುಹಿದನು ಪೋಲಾಕನು ಖೈಬರಘಟ್ಟದ ದಾರಿಯಿಂದ ಜಲಾಲಾಬಾದಕ್ಕೆ ಮುಟ್ಟಿ ಸೇಲನಿಗೆ ನೆರವಾಗಿ ಕಾಬೂಲದ ಕಡೆಗೆ ಸಾಗಿದನು. ಇಷ್ಟರಲ್ಲಿ ನಾಟನು ಕಂದಾಹಾರದಿಂದ ಹೊರಟು ಗಝುನಿಯನ್ನು ಗೆದ್ದುಕೊಂಡು ಮುಂದೆ ಸಾಗಿ ಪೋಲಾಕನನ್ನು ಕೂಡಿಕೊಂಡನು. ಬಳಿಕ ಪೋಲಾಕನು ಅಕಬರಖಾನನ ವಶದಲ್ಲಿದ್ದ ತನ್ನು ಜನರನ್ನು ಕೂಡಿಕೊಂಡು, ಕಾಬೂಲ ಪೇಟೆಯನ್ನು ಹಾಳುಮಾಡಿ, ಅಲ್ಲಿ ದೊರೆತ ಸುಲಿಗೆಯನ್ನೂ ಗಝುನಿಯ ಮಸೀದೆಯ ಬಾಗಿಲುಗಳನ್ನೂ ತೆಗೆದು ಕೊಂಡು ಹಿಂದುಸ್ತಾನಕ್ಕೆ ಬಂದನು.

**೮. ದೋಸ್ತಮಹಮ್ಮದನ ಬಿಡುಗಡೆ:** — ಪೋಲಾಕನು ಬಂದ ಸುದ್ದಿಯನ್ನು ಕೇಳಿ, ಎಲೆನಬರೋನು ದೋಸ್ತ ಮಹಮ್ಮದನನ್ನು ಸಂಗಡ

ಕರೆದುಕೊಂಡು ಫಿರೋಜಪುರಕ್ಕೆ ಹೋದನು. ಮತ್ತು ಹಲವು ಮಾಂಡಲಿಕರನ್ನು ಅಲ್ಲಿಗೆ ಕರೆಯಿಸಿಕೊಂಡು ಸುಲಿಗೆಯ ಸಂಪತ್ತಿನ ಮೆರವಣಿಗೆ ಮಾಡಿಸಿದನು. ಬಳಿಕ ಅಫಗಾನಿಸ್ತಾನದ ಕಾರಭಾರದಲ್ಲಿ ಕೈಹಾಕುವದಿಲ್ಲೆಂದು ಹೇಳಿ ದೋಸ್ತ ಮಹಮ್ಮದನ ಬಿಡುಗಡೆಮಾಡಿದನು. ಮುಂದೆ ದೋಸ್ತಮಹಮ್ಮದನು ತನ್ನ ದೇಶದ ಅಮೀರನಾಗಿ ಕ್ರಿ. ಶ.೧೮೬೩ ರ ವರೆಗೆ ಆಳಿದನು.

---

## ೧೧ ನೆಯ ಪಾಠ

**ಲಾರ್ಡ ಎಲೆನಬರೋ.** (ಮುಂದೆ ಸಾಗಿದ್ದು)

**ಲಾರ್ಡ ಹಾರ್ಡಿಂಜ.** (ಕ್ರಿ. ಶ. ೧೮೪೪-೧೮೪೮)

೧. **ಸಿಂಧಪ್ರಾಂತವನ್ನು ಕಸಿದುಕೊಂಡದ್ದು:**— ಕ್ರಿ. ಶ. **೧೮೪೩.** ಕ್ರಿ ಶ. ೧೮ನೆಯ ಶತಕದ ಕೊನೆಯಭಾಗದಲ್ಲಿ **ಬಲೂಚಿ** ಜನರು ಸಿಂಧಪ್ರಾಂತದಲ್ಲಿ ಹೈದರಾಬಾದ, ಖೈರಪುರ, ಮೀರಪುರ ಈ ರಾಜ್ಯಗಳನ್ನು ಸ್ಥಾಪಿಸಿದರು. ಇವರು ಅಫಗಾಣಿಸ್ತಾನದ ಅರಸನಿಗೆ ಕಪ್ಪಕೊಡುತ್ತಿದ್ದರು. ಈ ಅರಸರಿಗೆ **ಅಮೀರ** ಎಂಬ ಹೆಸರು. ಕ್ರಿ. ಶ. ೧೮೦೯ರಲ್ಲಿ ಇಂಗ್ಲಿಷರು ಸಿಂಧದ ಅಮೀರನೊಡನೆ ಸ್ನೇಹದ ಒಪ್ಪಂದಮಾಡಿದರು. ಕ್ರಿ. ಶ ೧೮೩೨ರಲ್ಲಿ ವ್ಯಾಪಾರ ಮಾಡಲು ಅಪ್ಪಣೆ ಪಡೆದು, ಸಿಂಧುನದಿಯೊಳಗಿಂದ ಸೈನ್ಯವನ್ನು ಒಯ್ಯುವದಿಲ್ಲೆಂದು ಒಪ್ಪಿಕೊಂಡರು. ಆದರೆ ಮುಂದೆ ಅಫಗಾನ ಯುದ್ಧವು ಹತ್ತಲು ಮುಂಬಯಿ ಸೈನ್ಯವನ್ನು ಕರಾರು ಮುರಿದು ಸಿಂಧುನದಿಯ ದಾರಿಯಿಂದ ಒಯ್ದರು. ಅಲ್ಲದೆ ಷಾಹಸೂಜನನ್ನು ಪಟ್ಟಗಟ್ಟಿದ ಕೂಡಲೆ ಹಿಂದಿನ ೩೦ ವರ್ಷದ ಕಪ್ಪವನ್ನು ಅವನ ಹೆಸರಿನಿಂದ ಅಮೀರನನ್ನು ಕೇಳಿದರು. ಅಮೀರನು ಅದನ್ನು ಕೊಟ್ಟನು. ಮುಂದೆ ಕ್ರಿ. ಶ. ೧೮೩೯ರಲ್ಲಿ ಸಹಾಯಕ ಸೈನ್ಯವು ಅಮೀರರ ಕಡೆಗೆ ಇಡಲ್ಪಟ್ಟಿತು. **ಅಮೀರರೊಡನೆ ಯುದ್ಧ**— ಈ ಸಹಾಯಕ ಸೈನ್ಯದ ಸೇನಾಪತಿಯು ಸರ್ **ಚಾರ್ಲ್ಸ ನೇಪಿಯರ**ನೆಂಬವನಿದ್ದನು. ಅವನು ಕ್ರಿ. ಶ. ೧೮೪೨ರಲ್ಲಿ ಅಮೀರರಿಗೆ— **೧.** ನೀವು ಸೈನ್ಯವೆಚ್ಚಕ್ಕಾಗಿ ಕೊಡತಕ್ಕ ೩ ಲಕ್ಷ ರೂಪಾಯಿಗಳ ಬದಲಾಗಿ ಸೀಮೆಯನ್ನು ಕೊಡಬೇಕು. **೨.** ನಿಮ್ಮ ಹೆಸರಿನ ನಾಣ್ಯಗಳನ್ನು ಹೊರಡಿಸದೆ ಕಂಪನಿಯ ರೂಪಾಯಿಗಳನ್ನೇ

ಉಪಯೋಗಿಸಬೇಕು. ೩. ಕಂಪನಿ ಸರಕಾರದ ಹಡಗಗಳಿಗೆ ಉರುವಲವನ್ನು ಪೂರೈಸಬೇಕು; ಎಂದು ತಿಳಿಸಿದರು. **ಯುದ್ಧ**— ಈ ಕರಾರುಗಳನ್ನು ಕೇಳಿ ಬಲುಚಿ ಸೈನ್ಯವು ಇಂಗ್ಲಿಷರ ವಕೀಲನಾದ **ಔಟ್ರ್ಯಾಮನ** ಮೇಲೆ ಸರಿ-ಹೋಯಿತು. ಆಗ ಅವನು ಓಡಿಹೋಗಿ ನೇಪಿಯರನನ್ನು ಕೂಡಿಕೊಂಡನು. ಕೂಡಲೆ ನೇಪಿಯರನು **ಮಿಯಾನಿ, ಹೈದರಾಬಾದ**ಗಳ ಯುದ್ಧದಲ್ಲಿ ಅಮೀರರ ಸೈನ್ಯವನ್ನು ಸೋಲಿಸಿ, ಸಿಂಧ ಪ್ರಾಂತವನ್ನು ಖಾಲಸಾ ಮಾಡಿದನು. ನೇಪಿಯರನೇ ಆ ಪ್ರಾಂತದ ಮೊದಲನೆಯ ಗವ್ಹರ್ನರನಾದನು. ಅಲ್ಲದೆ ಅವನಿಗೆ ೭೦ ಸಾವಿರ ಪೌಂಡು ಮೆಚ್ಚು ಸಿಕ್ಕಿತು.

೨. **ಸಿಂಧೆಯ ಬಲವನ್ನು ಮುರಿದದ್ದು:**— ಸಿಂಧೆ ದೌಲತರಾಯನು ಕ್ರಿ. ಶ. ೧೮೨೭ರಲ್ಲಿ ಸಾಯಲು ಅವನ ಮಗ **ಜನಕೋಜಿಯು** ಕ್ರಿ.ಶ. ೧೮೪೩ ರವರೆಗೆ ಆಳಿ ಮರಣಹೊಂದಿದನು. ಆಗ ಅವನ ಹೆಂಡತಿಯಾದ ತಾರಾಬಾ-ಯಿಯು **ಜಯಾಜಿರಾಯ**ನನ್ನು ದತ್ತಕ ಮಾಡಿಕೊಂಡು ತಾನು ಕಾರಭಾರ ವನ್ನು ಸಾಗಿಸಹತ್ತಿದಳು. ಗ್ವಾಲೇರದ ರಾಜ್ಯದಲ್ಲಿ ಆಗ ೪೦ ಸಾವಿರ ಸುರಿತ ಸೈನ್ಯವೂ ೨೦೦ ತೋಫುಗಳೂ ಇದ್ದವು. ರಣಜಿತಸಿಂಗನ ತರುವಾಯ ಅವನ ೮೦ ಸಾವಿರ ಸೈನ್ಯವು ಪಂಜಾಬದಲ್ಲಿ ಪ್ರಬಲವಾಗುತ್ತಲಿದ್ದಿತು. ಈ ಎರಡು ಸೈನ್ಯಗಳು ಬೇರೆ ಬೇರೆಯಾಗಿ ಇಲ್ಲವೆ ಒಟ್ಟಾಗಿ ಇಂಗ್ಲಿಷರನ್ನು ವಿರೋಧಿಸ-ಬಹುದೆಂದು ಗ. ಜನರಲನಿಗೆ ಎನಿಸಿದ್ದರಿಂದ ಅವನು ಮೊದಲು ಸಿಂಧೆಯನ್ನು ಅಳತೆಯಲ್ಲಿ ತರಲು ನಿಶ್ಚಯಿಸಿ ಸರ್ **ಹ್ಯೂಗೋ**ನನ್ನು ಸೈನ್ಯದೊಂದಿಗೆ ಕಳುಹಿದನು. ಹ್ಯೂಗೋನು ಚಂಬಳಾನದಿಯನ್ನು ದಾಟುತ್ತಲೆ ಸಿಂಧೆಯ ಸೈನ್ಯವು ಅವನನ್ನು ತಡೆಯಿತು. ಆದರೆ **ಮಹಾರಾಜಪುರ, ಪನಿಯಾರ** ಈ ಯುದ್ಧ-ಗಳಲ್ಲಿ ಅದು ಸೋತಿತು. ಆದದರಿಂದ ಸಿಂಧೆಯು ಇಂಗ್ಲಿಷರ ಹೇಳಿಕೆಯಂತೆ ಒಡಂಬಡಿಕೆ ಮಾಡಿಕೊಂಡನು. **ಗ್ವಾಲೇರದ ಒಡಂಬಡಿಕೆ**— ಕ್ರಿ. ಶ. **೧೮೪೩. ೧.** ಸಿಂಧೆಯು ಯುದ್ಧದ ವೆಚ್ಚವನ್ನು ಇಂಗ್ಲಿಷರಿಗೆ ಕೊಡಬೇಕು. **೨.** ಸೈನ್ಯವನ್ನು ೯ ಸಾವಿರಕ್ಕಿಂತ, ತೋಫುಗಳನ್ನು ೩೨ಕ್ಕಿಂತ ಹೆಚ್ಚಿಗೆ ಇಡಕೂಡದು. **೩.** ೧೦ ಸಾವಿರ ಸ. ಸೈನ್ಯವನ್ನಿಟ್ಟುಕೊಂಡ ಅದರ ವೆಚ್ಚಕ್ಕಾಗಿ ಸೀಮೆಯನ್ನು ಹಂಚಿಕೊಡಬೇಕು. **೪.** ಜಯಾಜಿರಾಯನು ವಯಸ್ಸಿಗೆ ಬರುವವರೆಗೆ ಇಂಗ್ಲಿಷ ರೆಸಿಡೆಂಟನು ಕಾರಭಾರವನ್ನು ಸಾಗಿಸಬೇಕು.

**೩. ಲಾರ್ಡ ಹಾರ್ಡಿಂಜನು ಗ. ಜನರಲನಾದನು** :— ಎಲೆನ ಬರೋನ ಎರಡೇ ವರ್ಷಗಳ ಆಳಿಕೆಯಲ್ಲಿ ಮೂರು ಯುದ್ಧಗಳಾದವು. ಈ ರೀತಿಯನ್ನು ಸಾಗಗೊಡುವದು ಸರಿಯೆನಿಸದೆ ಇದ್ದುದರಿಂದ ಡಾಯರೆಕ್ಟರರು ಇವನನ್ನು ಕರೆಯಿಸಿಕೊಂಡರು. ಇವನ ಆಳಿಕೆಯಲ್ಲಿ ಗುಲಾಮರ ವ್ಯಾಪಾರ ವನ್ನೂ ಲಾಟರಿಗಳನ್ನೂ ತಡೆಯುವ ಕಾಯದೆಗಳಾದವು. ಇವನ ಬಳಿಕ ಯುದ್ಧಕಲೆಯಲ್ಲಿ ನುರಿತು ಹೆಸರಾದ **ಲಾರ್ಡ ಹಾರ್ಡಿಂಜನು** ಗ. ಜನರಲ ನಾಗಿ ಬಂದನು. ೬೦ ವರ್ಷದ ವಯಸ್ಸಿನವನಾಗಿದ್ದರೂ ಇವನ ಹುರುಪು ಕುಂದಿರಲಿಲ್ಲ.

**೪. ರಣಜಿತಸಿಂಗನ ತರುವಾಯದ ಪಂಜಾಬದ ಸ್ಥಿತಿ** :— ಕ್ರಿ. ಶ. ೧೮೦೯ರಲ್ಲಿ ಅಮೃತಸರದ ಒಪ್ಪಂದವಾಗಿ, ರಣಜಿತಸಿಂಗನು ಸತಲಜ ನದಿಯ ದಕ್ಷಿಣಕ್ಕೆ ತನ್ನ ರಾಜ್ಯವನ್ನು ಹಬ್ಬಿಸುವದಿಲ್ಲೆಂದು ಒಪ್ಪಿಕೊಂಡಿದ್ದನು. ಆಬಳಿಕ ಆವನು **ಪೇಶಾವರ, ಕಾಶ್ಮೀರ** ಮೊದಲಾದ ಉತ್ತರದ ಸೀಮೆಗಳನ್ನು ಗೆಲಿದು ಅತ್ತ ತನ್ನ ರಾಜ್ಯವನ್ನು ಬೆಳೆಯಿಸಿದನು. ಇಂಗ್ಲಿಷರ ಸಾಮರ್ಥ್ಯ ಮತ್ತು ಧೋರಣೆ ಇವುಗಳ ಅರಿವು ಅವನಿಗಿದ್ದುದರಿಂದ ಕಾರಣವಿಲ್ಲದೆ ಆವರನ್ನು ತಡಹುತ್ತಿರಲಿಲ್ಲ. ರಣಜಿತಸಿಂಗನಿರುವ ವರೆಗೆ ಇಂಗ್ಲಿಷರಾದರೂ ಅವನ ವಿರುದ್ಧ ಹೋಗುವ ಸಾಹಸಕ್ಕೆ ಕೈಹಾಕಲಿಲ್ಲ.

ಆದರೆ ಕ್ರಿ. ಶ. ೧೮೩೯ರಲ್ಲಿ ರಣಜಿತಸಿಂಗನು ಸಾಯಲು ಅವನಇಬ್ಬರು ಮಕ್ಕಳು ಒಬ್ಬರ ಬಳಿಕೊಬ್ಬರು ಪಟ್ಟಕ್ಕೆ ಬಂದು ಕೊಲ್ಲಲ್ಪಟ್ಟರು. ಬಳಿಕ ಅವನ ದಾಸಿಪುತ್ರನಾದ **ಧುಲೀಪಸಿಂಗನು** ಅರಸನಾದನು. ಈ ಧುಲೀಪಸಿಂಗನು ಚಿಕ್ಕವನಿದ್ದುದರಿಂದ ಅವನ ತಾಯಿಯು **ಲಾಲಸಿಂಗ**ನೆಂಬ ಸರದಾರನ ನೆರವಿನಿಂದ ಕಾರಭಾರವನ್ನು ಸಾಗಿಸಿದಳು. ಆದರೆ ಸೈನ್ಯದ ಒಡೆತನವು ಸೈನಿಕರಿಂದ ಆರಿಸಲ್ಪಟ್ಟ ಮಂಡಲದ ಕೈಗೆ ಹೋಯಿತು. ಸೀಖ ಸೈನ್ಯದಲ್ಲಿ ೮೦ ಸಾವಿರ ಸೈನಿಕರೂ ನಾಲ್ಕೈದುನೂರು ತೋಫುಗಳೂ ಇದ್ದವು.

**೫. ಶೀಖರ ಮೊದಲನೆಯ ಯುದ್ಧ**:— ಕ್ರಿ. ಶ. **೧೮೪೫-೧೮೪೬.**
**ಕಾರಣಗಳು- ೧.** ಸೀಖಸೈನ್ಯವು ಇಂಗ್ಲಿಷರೊಡನೆ ಕಾದಲು ಹವಣಿಸುತ್ತಿತ್ತು. **೨** ಇಂಗ್ಲಿಷರಾದರೂ, ತಮ್ಮನ್ನೆದುರಿಸಲು ಶೀಖ ಸೈನ್ಯವು ಸಮರ್ಥವಾಗಿರುವ

ದೆಂದುತಿಳಿದು, ಸಿಂಧುನದಿಯ ಮಾರ್ಗವಾಗಿ ಯುದ್ಧ ಸಾಹಿತ್ಯವನ್ನು ಒದಗಿಸಿಕೊಂಡು, ಸತಲಜ ನದಿಯ ದಕ್ಷಿಣಕ್ಕೆ ಸೈನ್ಯವನ್ನು ಸಜ್ಜುಗೊಳಿಸಿದ್ದರು. **೩.** ಇಂಗ್ಲಿಷರು ಸಿಂಧಪ್ರಾಂತವನ್ನು ಕಸಿದರು. ಸಿಂಧೆಯ ಬಲವನ್ನು ಕುಗ್ಗಿಸಿದರು ಇನ್ನು ಅವರು ತಮ್ಮಮೇಲೆ ಸಾಗಿಬರುವದು ಸಹಜ. ಆದುದರಿಂದ ತಾವೇ ಅವರನ್ನು ಕೆಣಕಬೇಕೆಂದು ಸೀಖರು ಗೊತ್ತುಮಾಡಿದರು. **ಯುದ್ಧಗಳು**— ಶೀಖಸೈನ್ಯವು ಸತಲಜ ನದಿಯನ್ನು ದಾಟಿ ಇಂಗ್ಲಿಷರ ಮೇಲೆ ಸಾಗಿತು. **ಮುಡಕಿ** ಎಂಬಲ್ಲಿ ಯುದ್ಧವಾಗಿ ಇಂಗ್ಲಿಷರಿಗೆ ಜಯವಾಯಿತು; ಆದರೂ ಸೀಖರ ತೋಫುಗಳ ಹೊಡೆತದಿಂದ ಇಂಗ್ಲಿಷ ಸೈನ್ಯಕ್ಕೂ ಬಹಳ ನಷ್ಟವಾ-ಯಿತು. ಬಳಿಕ ಶೀಖ ಸೈನ್ಯವು ಹಿಮ್ಮೆಟ್ಟಿ **ಫಿರೋಜಶಹ** ಎಂಬಲ್ಲಿಯು ತಮ್ಮ ಸೈನ್ಯವನ್ನು ಕೂಡಿಕೊಂಡಿತು. ಆಗ ಲಾರ್ಡ ಹಾರ್ಡಿಂಜನೂ ಸೇನಾಪತಿಯಾದ ಸರ್ ಹ್ಯೂಗೋನೂ ಶೀಖರ ಮೇಲೆ ಏರಿಹೋಗಲು ಕಡುಕದನವಾಗಿ ಇಂಗ್ಲಿಷರ ಕಡೆಯ ಎರಡು ಸಾವಿರ ಜನರು ಬಿದ್ದರು. ಜಯಾಪಜಯಗಳು ಅನಿಶ್ಚಿತವಾಗಿರುವಷ್ಟರಲ್ಲಿ ಶೀಖ ಅಧಿಕಾರಿಗಳಲ್ಲಿ ಜಗಳ ಹತ್ತಿದ್ದರಿಂದ ಅವರೇ ಹಿಮ್ಮೆಟ್ಟಿ ನದಿಯ ಉತ್ತರ ತೀರಕ್ಕೆ ಹೋದರು. ಮತ್ತು ಕೆಲದಿನಗಳ ನಂತರ ತಾವೇ ನದಿಯನ್ನು ದಾಟಿ ಇಂಗ್ಲಿಷರ ಸೈನ್ಯವನ್ನು ಎದುರಿಸಿದರು **ಆಲಿವಾಲ, ಸೋಬ್ರಾವುನ್** ಎಂಬ ಎರಡು ಕಡೆಗಳಲ್ಲಿ ಭಯಂಕರವಾದ ಯುದ್ಧಗಳಾಗಿ ಶೀಖರು ಪೂರ್ಣವಾಗಿ ಸೋತರು. ಬಳಿಕ ಇಂಗ್ಲಿಷರು ಲಾಹೋರದ ಕಡೆಗೆ ಸಾಗಿ ಹೋಗಲು ಅಲ್ಲಿ ಒಪ್ಪಂದವಾಯಿತು. **ಲಾಹೋರದ ಒಪ್ಪಂದ**— ಸತಲಜ-ಬಿಯಾಸಗಳ ನಡುಸೀಮೆಯನ್ನು ಶೀಖರು ಇಂಗ್ಲಿಷರಿಗೆ ಕೊಡಬೇಕು **೨.** ಧುಲೀಪಸಿಂಗನು ಗುಲಾಬಸಿಂಗನಿಂದ ೧ ಕೋಟಿ ರೂಪಾಯಿ ಇಸಿದುಕೊಂಡು ಅವನಿಗೆ ಕಾಶ್ಮೀರ ಪ್ರಾಂತವನ್ನು ಕೊಡಬೇಕು. **೩.** ಯುದ್ಧದ ವೆಚ್ಚಕ್ಕಾಗಿ ೧॥ ಕೋಟಿ ರೂಪಾಯಿಗಳು ಇಂಗ್ಲಿಷರಿಗೆ ಸಲ್ಲಿಸಬೇಕು. **೪.** ಶೀಖ ಸೈನ್ಯವು ಒಟ್ಟು ೩೨ ಸಾವಿರಕ್ಕೆ ಮಿಕ್ಕಕೂಡದು. **೫.** ರಾಜ್ಯದಲ್ಲಿ ಶಾಂತತೆಯುಂಟಾಗುವ ತನಕ ಇಂಗ್ಲಿಷರ ದಂಡೂ ರೆಸಿಡೆಂಟನೂ ಲಾಹೋರದಲ್ಲಿ ಇರಬೇಕು.

ಶೀಖರ ಮೊದಲನೆಯ ಯುದ್ಧವು ಮುಗಿದ ಕೂಡಲೆ ಲಾರ್ಡ ಹಾರ್ಡಿಂಜನು ವಿಲಾಯತಿಗೆ ಹೋದನು. ಇವನ ಕಾಲದಲ್ಲಿ ಸಂಸ್ಥಾನಗಳ

ಲ್ಲಿಯ ಸತಿಹೋಗುವ ಪದ್ಧತಿಯು ಕಟ್ಟಾಯಿತು. ಗಂಗಾನದಿಯ ಕಾಲುವೆಯ ಕೆಲಸವು ಆರಂಭವಾಯಿತು.

---

## ೧೫ನೆಯ ಪಾಠ

### ಲಾರ್ಡ ಡಾಲಹೌಸಿ

(ಕ್ರಿ. ಶ. ೧೮೪೮—೧೮೫೬)

**೧. ಲಾರ್ಡ ಡಾಲಹೌಸಿಯೂ ಅವನ ಆಳಿಕೆಯ ಸ್ವರೂಪವೂ:-** ಇವನು ವಯಸ್ಸಿನ ೨೫ನೆಯ ವರ್ಷ ಇಂಗ್ಲಂಡದ ಪಾರ್ಲಮೆಂಟಿನ ಸಭಾಸದನಾಗಿಯೂ ಮುಂದೆ ವ್ಯಾಪಾರಖಾತೆಯ ಮಂತ್ರಿಯಾಗಿಯೂ ಮನಸುಗೊಟ್ಟು ಕೆಲಸಮಾಡಿ ಹೆಸರಾಗಿದ್ದನು. ಕ್ರಿ. ಶ. **೧೮೪೮**ರಲ್ಲಿ ಗ. ಜ. ನಾಗಿ ಈ ದೇಶಕ್ಕೆ ಬಂದನು. ಇವನು ಮೊದಲು ಸೀಖರ ೨ನೆಯ ಯುದ್ಧವನ್ನಾಡಿ ಪಂಜಾಬ ಪ್ರಾಂತವನ್ನು ಇಂಗ್ಲಿಷರ ರಾಜ್ಯಕ್ಕೆ ಕೂಡಿಸಿ, ಇಂಗ್ಲಿಷ ರಾಜ್ಯದ ಮೇರೆಯನ್ನು ಅಫಗಾಣಿಸ್ಥಾನಕ್ಕೆ ನಿಲುಕಿಸಿದನು. ಆಗ ಇಂಗ್ಲಿಷರಿಗೆ ತಡೆಯನ್ನುಂಟು ಮಾಡುವ ಕಸುವು ಈ ದೇಶದಲ್ಲಿ ಯಾರಲ್ಲಿಯೂ ಇಲ್ಲದಾಯಿತು. ಆ ಬಳಿಕ ಡಾಲಹೌಸಿಯು ಇಂಗ್ಲಿಷರ ಸಾಮ್ರಾಜ್ಯರಕ್ಷಣೆಗೂ ವ್ಯಾಪಾರದ ಬೆಳವಣಿಗೆಗೂ ಅನುಕೂಲವಾಗುವಂತೆ **ಉಗೆಬಂಡಿ, ತಾರಾಯಂತ್ರ, ಪೋಸ್ಟ ಆಫೀಸ** ಮೊದಲಾದ ಹೊಸ ಸಾಧನಗಳನ್ನು ಈ ದೇಶದಲ್ಲಿ ನೆಲೆಯಿಸುವ ಕೆಲಸವನ್ನು ಕೈಕೊಂಡು ಅದನ್ನು ಒತ್ತರದಿಂದ ಸಾಗಿಸಿದನು. ಈ ಸಾಧನಗಳನ್ನು ದೇಶದ ತುಂಬ ಹರಡುವುದಾದರೆ ನಡುನಡುವೆ ಇರುವ ದೇಶೀಯ ರಾಜ್ಯಗಳ ಸವಲನ್ನು ಅಡಗಿಸುವದು ಅವಶ್ಯವೆಂದೆನಿಸಿದ್ದರಿಂದ ಇವನು ಹಲವು ಕಾರಣಗಳನ್ನು ಮುಂದೆ ಮಾಡಿ ಎಷ್ಟೋ ರಾಜ್ಯಗಳನ್ನು ಖಾಲಸಾ ಮಾಡಿದನು. ಅಲ್ಲದೆ ರಾಜ್ಯಕಾರಭಾರದಲ್ಲಿಯೂ ಬಹಳ ಸುಧಾರಣೆಗಳನ್ನು ಮಾಡಿದನು. ಒಟ್ಟಿನ ಮೇಲೆ ಇವನ ಆಳಿಕೆಯಲ್ಲಿ ಹಿಂದುಸ್ಥಾನದ ಸ್ವರೂಪವೇ ಬದಲಾಯಿತೆಂದು ಹೇಳಬಹುದು.

**೨. ಶೀಖರ ಎರಡನೆಯ ಯುದ್ಧ** :— ಕ್ರಿ. ಶ. **೧೮೪೮-೧೮೪೯.** **ಕಾರಣಗಳು**—ಲಾಹೋರದ ಒಪ್ಪಂದವಾದ ತುಸು ದಿನಗಳಲ್ಲಿಯೇ ಮತ್ತೊಂದು

ಒಪ್ಪಂದವಾಗಿ, ಧುಲೀಪಸಿಂಗನು ವಯಸ್ಸಿಗೆ ಬರುವ ತನಕ ಎಂಟು ಜನರಿರುವ ಮಂಡಲದ ನೆರವಿನಿಂದ ಇಂಗ್ಲಿಷ ರೆಸಿಡೆಂಟನೇ ಪಂಜಾಬದ ಕಾರಭಾರವನ್ನು ಸಾಗಿಸಬೇಕೆಂದು ಗೊತ್ತಾಯಿತು. ಆದರೆ ಮುಂದೆ, ಹೀಗೆ ತನ್ನ ಅಧಿಕಾರವನ್ನು ಕಳೆದುಕೊಂಡದ್ದು ಧುಲೀಪಸಿಂಗನ ತಾಯಿಯ ಮನಸ್ಸಿಗೆ ಬರಲಿಲ್ಲ; ಆಕೆಯು ಇಂಗ್ಲಿಷರ ವಿರುದ್ಧವಾಗಿ ಒಳಸಂಚು ನಡೆಸಿದಳು. ಶೀಖ ಜನರಿಗೂ ಹೊಸ ಆಳಿಕೆಯು ಸೇರಲಿಲ್ಲ. ಇದೇ ಹೊತ್ತಿಗೆ ಮಂಡಲದವರು **ಮುಲತಾನ**ದ ಸುಭೇದಾರನಾದ **ಮೂಲರಾಜ**ನಿಗೆ ಕಪ್ಪವನ್ನು ಕೇಳಿದರು ಆವನು ಕಪ್ಪವನ್ನು ಕೊಡದೆ, ಮುಲತಾನವನ್ನೇ ಬಿಟ್ಟುಕೊಡುವೆನೆಂದು ಹೇಳಿದನು. ಕೂಡಲೆ ರೆಸಿಡೆಂಟನಾದ **ಸರ್ ಹೇನ್ರಿ ಲಾರೇನ್ಸ**ನು ಇಬ್ಬರು ಇಂಗ್ಲಿಷ ಅಧಿಕಾರಿಗಳೊಡನೆ ಬೇರೊಬ್ಬ ಸುಭೇದಾರನನ್ನು ಮುಲತಾನಕ್ಕೆ ಕಳುಹಿದನು. ಆದರೆ ಅಲ್ಲಿ ಆ ಅಧಿಕಾರಿಗಳು ಕೊಲ್ಲಲ್ಪಟ್ಟರು ಆಗ ಲಾಹೋರದಿಂದ ಒಂದು ದಂಡು ಮುಲತಾನದ ಮೇಲೆ ಸಾಗಿಸಲ್ಪಡಲು ಆದು ಮೂಲರಾಜನೊಡನೆ ಕಾದುವದನ್ನು ಬಿಟ್ಟು ಆವನನ್ನೇ ಕೂಡಿಕೊಂಡಿತು ಇದನ್ನು ಕಂಡು ಎಲ್ಲ ಶೀಖ ಜನರು ಇಂಗ್ಲಿಷರೊಡನೆ ಕಾದಲು ಅಣಿಯಾದರು

**ಯುದ್ಧಗಳು**— ಮುಂಬಯಿಯ ಇಂಗ್ಲಿಷ ಸೈನ್ಯವು ಮುಲತಾನವನ್ನು ಮುತ್ತಿತು. ಹ್ಯೂಗೋನು ೨೦ ಸಾವಿರ ಸೈನ್ಯದೊಂದಿಗೆ ಶೀಖರ ಸೀಮೆಯನ್ನು ಹೊಕ್ಕನು. ಆದರೆ **ರಾಮನಗರದ** ಯುದ್ಧದಲ್ಲಿ ಶೀಖರು ಇವನನ್ನು ಸೋಲಿಸಿದರು. ಬಳಿಕ ಇವನು ಒಳ್ಳೆಯ ಆವೇಶದಿಂದ **ಚಿಲಿಯಾನವಾಲಾ** ಎಂಬಲ್ಲಿಯ ಶೀಖರ ಪಾಳಯವನ್ನು ನುಗ್ಗಿದನು. ಆದರೆ ಅಲ್ಲಿಯೂ ಶೀಖರ ತೋಪುಗಳ ಹೊಡೆತಕ್ಕೆ ಹ್ಯೂಗೋನ ಸೈನ್ಯವು ನುಗ್ಗಾಯಿತು. ಅಷ್ಟರಲ್ಲಿ ಮುಂಬಯಿಯ ಸೈನ್ಯವು ಮುಲತಾನವನ್ನು ವಶಮಾಡಿಕೊಂಡು ಹ್ಯೂಗೋನ ನೆರವಿಗೆ ಬಂದಿತು. ಬಳಿಕ **ಗುಜರಾತ** ಎಂಬಲ್ಲಿ ಮತ್ತೊಂದು ಯುದ್ಧವಾಯಿತು ಅಲ್ಲಿ ಮಾತ್ರ ಶೀಖರು ಪೂರ್ಣವಾಗಿ ಸೋತರು. ಶೀಖರ ನಾಯಕನಾದ **ಶೇರಸಿಂಗನು** ಇಂಗ್ಲಿಷರ ಕೈಗೆ ಸಿಕ್ಕನು.

**೩. ಯುದ್ಧದ ತರುವಾಯದ ಪಂಜಾಬದ ವ್ಯವಸ್ಥೆ** :— ಡಾಲಾಹೌಸಿಯು × ಧುಲೀಪಸಿಂಗನಿಗೆ ೫ ಲಕ್ಷ ರೂಪಾಯಿ ವರ್ಷಾಶನವನ್ನು

× ಬಳಿಕ ಧುಲಿಪಸಿಂಗನು ಇಂಗ್ಲಂಡಕ್ಕೆ ಹೋಗಿ ಕ್ರಿಸ್ತ್ರೀಧರ್ಮವನ್ನು ಸೇರಿ ಅಲ್ಲಿಯೇ ಕಾಲ ಕಳೆದನು. ಕೋಹಿನೂರರತ್ನವು ಇವನಿಂದಲೇ ವಿಕ್ಟೋರಿಯಾ ಮಹಾಣಿಯವರಿಗೆ ಕೊಡಲ್ಪಟ್ಟಿತು.

ಗೊತ್ತುಮಾಡಿ ಪಂಜಾಬ ಪ್ರಾಂತವನ್ನು ಇಂಗ್ಲಿಷರ ರಾಜ್ಯಕ್ಕೆ ಕೂಡಿಸಿದನು; ಮೂಲ ರಾಜನನ್ನು ಗಡಿದಾಟಿಸಿದನು. ಬಳಿಕ ಶೀಖರ ರೆಸಿಡೆಂಟನಾಗಿದ್ದ ಹೆನ್ರಿ ಲಾರೆನ್ಸ ಮತ್ತು ಅವನ ತಮ್ಮ **ಸರ್ ಜಾನ್ ಲಾರೇನ್ಸ** ಇವರಿಬ್ಬರ ಕಡೆಗೆ ಪಂಜಾಬದ ಕಾರಭಾರವು ಒಪ್ಪಿಸಲ್ಪಟ್ಟಿತು. ಪಂಜಾಬದ ಎಲ್ಲ ಜನರ ಶಸ್ತ್ರಗಳು ಕಸಿಯಲ್ಪಟ್ಟವು. ಪಂಜಾಬದಲ್ಲಿ ಶಾಂತತೆಯುಂಟಾಗಿ ಇಂಗ್ಲಿಷರ ಆಳಿಕೆಯು ಆರಂಭವಾಯಿತು

**೪. ಬ್ರಹ್ಮದೇಶದ ೨ನೆಯ ಯುದ್ಧ:**— ಕ್ರಿ. ಶ. ೧೮೫೨. **ಕಾರಣ—ಎಂದಬು** ಒಪ್ಪಂದವಾದಂದಿನಿಂದ ಇಂಗ್ಲಿಷರ ವಕೀಲನು **ಅವಾ**ದಲ್ಲಿ ಇರಹತ್ತಿದನು. ಆದರೆ ಅಲ್ಲಿಯ ಓಲಗದವರು ಅವನೊಡನೆ ತಕ್ಕ ರೀತಿಯಲ್ಲಿ ನಡೆಯುತ್ತಿರಲಿಲ್ಲ. ಕ್ರಿ. ಶ. ೧೮೪೧ರಲ್ಲಂತೂ ಅವರು ಇಂಗ್ಲಿಷ ವಕೀಲನನ್ನು ತಮ್ಮಲ್ಲಿಂದ ಹೊರಡಿಸಿಬಿಟ್ಟರು. ಆಗ ಅಫಗಾನಿಸ್ತಾನದ ಯುದ್ಧದ ಪ್ರಸಂಗ ವಿದ್ದದರಿಂದ ಗ. ಜ ನಾಗಿದ್ದ ಆಕ್ಲಂಡನು ಈ ಅಪಮಾನದ ಸೇಡುತೀರಿಸುವ ಗೋಜಿಗೆ ಹೋಗಲಿಲ್ಲ. **ರಂಗೂನ**ದಲ್ಲಿಯ ಬ್ರಹ್ಮೀ ವ್ಯಾಪಾರಸ್ಥರಿಗೂ ಇಂಗ್ಲಿಷ ವ್ಯಾಪಾರಸ್ಥರಿಗೂ ಮೇಲಿಂದಮೇಲೆ ಜಗಳಗಳಾಗುತ್ತಿದ್ದವು. ಡಾಲಹೌಸಿಯ ಕಾಲದಲ್ಲಿ ಇಂಗ್ಲಿಷ ವ್ಯಾಪಾರಸ್ಥರು ತಮಗಾಗುವ ತೊಂದರೆಗಳನ್ನು ದೂರಿ-ಕೊಂಡರು ಆಗ ಡಾಲಹೌಸಿಯು 'ರಂಗೂನದ ಅಧಿಕಾರಿಗಳನ್ನು ತೆಗೆದುಹಾಕಿ ನಮ್ಮವರ ಹಾನಿಯನ್ನು ತುಂಬಿಕೊಡಬೇಕು' ಎಂದು ಬ್ರಹ್ಮದೇಶದ ಅರಸನಿಗೆ ತಿಳಿಸಿದನು. ಆದರೆ ಅದಕ್ಕೆ ಉತ್ತರವು ಕೂಡ ಬರದೆಯಿದ್ದುದರಿಂದ ಯುದ್ಧವು ಆರಂಭವಾಯಿತು. **ಯುದ್ಧ:**— ಇಂಗ್ಲಿಷರ ಹಡಗು ಪಡೆಯೂ ಸೈನ್ಯವೂ ಹೊರಟು **ಮಾರ್ತಾಬಾನ** ಬಂದರವನ್ನೂ ರಂಗೂನ ಪಟ್ಟಣವನ್ನೂ ಹಿಡಿದು-ಕೊಂಡವು. ಬಳಿಕ **ಪ್ರೋಮ** ಪಟ್ಟಣವೂ ಇಂಗ್ಲಿಷರ ಕೈಸೇರಿತು. ಆದರೂ ಆ ದೇಶದ ಅರಸನು ಒಪ್ಪಂದಕ್ಕೆ ಒಪ್ಪಲಿಲ್ಲ ಆದುದರಿಂದ ಡಾಲಹೌಸಿಯು **ಪೇಗೂ** ಪ್ರಾಂತವು ಇಂಗ್ಲಿಷರ ರಾಜ್ಯಕ್ಕೆ ಕೂಡಿಸಲ್ಪಟ್ಟಿತೆಂದು ಸಾರಿ ಅಲ್ಲಿ ತಮ್ಮಅಧಿಕಾರಿಗಳನ್ನು ನಿಯಮಿಸಿದನು. ಬಂಗಾಲದಉಪಸಾಗರಕ್ಕೆ ಹೊಂದಿದ ಬ್ರಹ್ಮದೇಶದ ದಂಡೆಯ ಪ್ರದೇಶವೆಲ್ಲ ಇಂಗ್ಲಿಷರ ವಶವಾದಂತಾಯಿತು.

**೫. ಡಾಲಹೌಸಿಯು ಕಸಿದುಕೊಂಡ ರಾಜ್ಯಗಳು :— (ಅ) ದತ್ತಕ ಮಗನ ಅಧಿಕಾರವನ್ನು ಒಪ್ಪದೆ ಕಸಿದುಕೊಂಡ ರಾಜ್ಯಗಳು—**




ಬ್ರಿಟಿಶರ ರಾಜ್ಯವಿಸ್ತಾರ

**೧. ಸಾತಾರೆ**- ೨ನೆಯ ಶಾಹೂರಾಜನು ಕ್ರಿ. ಶ. **೧೮೪೮**ರಲ್ಲಿ ಸಾಯಲು, ಅವನು ಮಾಡಿಕೊಂಡ ಮಗನಿಗೆ ರಾಜ್ಯವನ್ನು ನಡೆಯಿಸದೆ ಅವನ್ನು ಡಾಲಹೌಸಿಯು ಇಂಗ್ಲಿಷರ ರಾಜ್ಯಕ್ಕೆ ಕೂಡಿಸಿದನು. **೨. ಝಾಂಸಿ**- ಕ್ರಿ. ಶ. **೧೮೫೩** ರಲ್ಲಿ ಇಲ್ಲಿಯ ಅರಸನಾದ ಗಂಗಾಧರರಾಯನು ಸಾಯಲು, ದತ್ತಕ ಮಗನ ಬಾಧ್ಯತೆಯನೊಪ್ಪದೆ ಆ ರಾಜ್ಯವನ್ನು ಕಸಿದುಕೊಂಡನು. **೩. ೨ನೆಯ ಬಾಜೀರಾಯನ ವರ್ಷಾಶನ** -- ಬಾಜಿರಾಯನು ಕ್ರಿ. ಶ. **೧೮೫೨**ರಲ್ಲಿ ಸತ್ತಕೂಡಲೆ ಅವನಿಗೆ ಸಲ್ಲುತ್ತಿದ್ದ ೮ ಲಕ್ಷ ರೂ. ವರ್ಷಾಶನಕ್ಕೆ ದತ್ತಕ ಮಗನಾದ ನಾನಾಸಾಹೇಬನು ಅಧಿಕಾರಿಯಾಗನೆಂದು ಹೇಳಿ ಅದನ್ನು ಪೂರ್ಣವಾಗಿ ನಿಲ್ಲಿಸಿದನು. **( ಆ ) ದತ್ತಕ ಮಾಡಿಕೊಳ್ಳಲು ಒಪ್ಪಿಗೆ ಕೊಡದೆ ಕಸಿದುಕೊಂಡ ರಾಜ್ಯಗಳು — ೧. ನಾಗಪುರ** — ರಘೂಜಿ ಭೋಸಲೆಯು ಮಕ್ಕಳಿಲ್ಲದೆ ಸಾಯಲು ನಾಗಪುರ ರಾಜ್ಯವು ಇಂಗ್ಲಿಷರಿಗೆ ಆಯಿತು. **೨. ತಂಜಾವರ, † ಉದೇಪುರ, ಜೈತಪುರ, ಸಂಬಳಪುರ** ಈ ರಾಜ್ಯಗಳ ಅರಸರು ಮಕ್ಕಳಿಲ್ಲದೆ ತೀರಿಕೊಳ್ಳಲು ಇವು ಇಂಗ್ಲಿಷರ ರಾಜ್ಯಕ್ಕೆ ಸೇರಿಸಲ್ಪಟ್ಟವು. **೩. ಕರ್ನಾಟಕದ ನವಾಬನ ವರ್ಷಾಶನ**— ಕರ್ನಾಟಕದ ನಬಾಬನ ವಂಶಜನಾದ **ಗೌಸಖಾನ** ಎಂಬವನು ಸಂತತಿಯಿಲ್ಲದೆ ಸಾಯಲು ಆ ಮನೆತನಕ್ಕೆ ಸಲ್ಲುತ್ತ ಬಂದಿದ್ದ ವರ್ಷಾಶನವು ಕಟ್ಟಾಯಿತು. **(ಇ) ಅವ್ಯವಸ್ಥೆಯಿದ್ದ ನೆವದಿಂದ ಕಸಿದುಕೊಂಡ ರಾಜ್ಯಗಳು— ೧. ಅಯೋಧ್ಯೆ—** ವಜೀರನು ಚೆನ್ನಾಗಿ ಆಳಲು ಅಸಮರ್ಥನಾಗಿದ್ದನು ; ಅವನ ರಾಜ್ಯದಲ್ಲಿ ತಾಲೂಕದಾರರು ರೈತರನ್ನು ಪೀಡಿಸುತ್ತಿದ್ದರು. ಆವದರಿಂದ ಈ ರಾಜ್ಯವು ಇಂಗ್ಲಿಷ ರಾಜ್ಯಕ್ಕೆ ಕೂಡಿತು. **೨. ಖೈರಪುರ**- ಇಲ್ಲಿಯ ಅಮೀರನಾದ ಅಲ್ಲೀಮುರಾದನು ಚೆನ್ನಾಗಿ ರಾಜ್ಯವಾಳುವದಿಲ್ಲೆಂದು ಕಂಡುಬಂದದರಿಂದ ಡಾಲಹೌಸಿಯು ೩-೪ ಲಕ್ಷದ ಜಹಗೀರನ್ನು ಉಳಿಸಿ ಮಿಕ್ಕ ರಾಜ್ಯವನ್ನು ಕಸಿದುಕೊಂಡನು. **೩. ದಾರ್ಜಿಲಿಂಗ**- ನೇಪಾಳ, ಭೂತಾನ ಈ ರಾಜ್ಯಗಳ ನಡುವೆ **ಸಿಕಿಮು** ಎಂಬ ಸಣ್ಣ ಸಂಸ್ಥಾನವಿದೆ. ಅದರೊಳಗಿನ ದಾರ್ಜಿಲಿಂಗ ಎಂಬುದು ಬೇಸಿಗೆಯಲ್ಲಿ ಇರಲು ಅನುಕೂಲವಾದ ತಂಪು ಪ್ರದೇಶವು ಇವನ್ನು ಇಂಗ್ಲಿಷರು ತಮ್ಮ ಕಡೆಗೆ ಇಟ್ಟುಕೊಂಡು ವರ್ಷಕ್ಕೆ

† ಇದೊಂದು ಸಂಸ್ಥಾನವು ಮಾತ್ರ ಲಾರ್ಡ ಕ್ಯಾನಿಂಗನ ಕಾಲದಲ್ಲಿ ಮರಳಿ ಕೊಡಲ್ಪಟ್ಟಿತು.

ಆರು ಸಾವಿರ ರೂಪಾಯಿಗಳನ್ನು ಸಿಕಿಮದ ಅರಸನಿಗೆ ಸಲ್ಲಿಸುತ್ತಿದ್ದರು. ಆದರೆ ಡಾಲಹೌಸಿಯ ಕಾಲದಲ್ಲಿ ಅಲ್ಲಿಯ ಅರಸನು ಇಬ್ಬರು ಇಂಗ್ಲಿಷರನ್ನು ಸೆರೆ ಹಿಡಿವದ್ದರಿಂದ ದಾರ್ಜಿಲಿಂಗವೂ ಅದರ ನೆರೆಯ ಸೀಮೆಯೂ ಅವನಿಂದ ತೆಗೆದುಕೊಳ್ಳಲ್ಪಟ್ಟವು **(ಈ) ಸೈನ್ಯದ ವೆಚ್ಚಕ್ಕಾಗಿ ತೆಗೆದುಕೊಂಡ ಸೀಮೆ–ವರ್‍ಹಾಡ ಪ್ರಾಂತವೂ ರಾಯಚೂರು, ನಂದಿದುರ್ಗ ಪರಗಣೆಗಳೂ**- ನಿಜಾಮನು ತನ್ನಲ್ಲಿಟ್ಟುಕೊಂಡ ಸೈನ್ಯದ ಸಂಬಂಧದಿಂದ ೮೦ ಲಕ್ಷ ರೂಪಾಯಿಗಳನ್ನು ಇಂಗ್ಲಿಷರಿಗೆ ಕೊಡತಕ್ಕದ್ದಿತ್ತು. ಡಾಲಹೌಸಿಯು ಎಲ್ಲ ಹಣವನ್ನು ಇಲ್ಲವೆ ಅಷ್ಟು ಉತ್ಪನ್ನದ ಸೀಮೆಯನ್ನು ಕೊಡಲೇಬೇಕೆಂದು ತಿಳಿಸಲು ನಿಜಾಮನು ೪೦ ಲಕ್ಷ ರೂಪಾಯಿಗಳನ್ನು ಕೊಟ್ಟು, ಉಳಿದ ಹಣದ ಸಲುವಾಗಿ ೧ ವರ್ಷದ ಅವಧಿಯನ್ನು ಕೇಳಿಕೊಂಡನು. ಆದರೆ ವರ್ಷದ ಮೇಲೆಯೂ ಹಣ ಕೊಡುವದಾಗಲಿಲ್ಲ ಆಗ ಡಾಲಹೌಸಿಯು ಅವನೊಡನೆ ಹೊಸ ಕರಾರು ಮಾಡಿಕೊಂಡು ವರ್‍ಹಾಡ, ರಾಯಚೂರ, ನಂದಿದುರ್ಗ ಈ ಸೀಮೆಗಳನ್ನು ತನ್ನ ವಶಕ್ಕೆ ತೆಗೆದುಕೊಂಡನು. ಕ್ರಿ. ಶ **೧೮೫೩.**

**೬. ಡಾಲಹೌಸಿಯು ಕಾಲದ ಸುಧಾರಣೆಗಳು:—** ೧. ಬಂಗಾಲ ಪ್ರಾಂತದ ಕಾರಭಾರನ್ನು ಗ ಜನರಲನೇ ಸಾಗಿಸುತ್ತಿದ್ದನು. ಡಾಲಹೌಸಿಯ ಕಾಲದಲ್ಲಿ ಆ ಪ್ರಾಂತವು ಸ್ವತಂತ್ರ ಇಲಾಖೆಯಾಗಿ, ಅದಕ್ಕೊಬ್ಬ **ಲೆಫ್ಟನಂಟ ಗವ್ಹರ್ನರನು** ನಿಯಮಿಸಲ್ಪಟ್ಟನು. ಎಲ್ಲ ಪ್ರಾಂತಗಳ ಮೇಲ್ವಿಚಾರಣೆಯೊಂದೇ ಗ. ಜನರಲ್ಲನ ಕೆಲಸವಾಯಿತು. **೨.** ಕಲಕತ್ತೆಗೆ ಬದಲಾಗಿ **ಮಿರತ** ಎಂಬದು ಸೈನ್ಯದ ಮುಖ್ಯ ಠಾಣ್ಯವಾಯಿತು. **೩. ಪಬ್ಲಿಕ್ ವರ್ಕ್ಸ** ಎಂಬ ಖಾತೆಯನ್ನೇರ್ಪಡಿಸಿ ಮಾರ್ಗ, ಕಾಲುವೆ ಮುಂತಾದವುಗಳನ್ನು ಕಟ್ಟಿಸುವ ಕೆಲಸವನ್ನು ಒತ್ತರದಿಂದ ಸಾಗಿಸಿದನು. ೪ ಕೆಲವು ಖಾತೆಗಳಿಂದ ಕೂಡಿದ ಒಂದೊಂದು ವಿಭಾಗದ ಮೇಲ್ವಿಚಾರಣೆಯ ಕೆಲಸವನ್ನು ಒಬ್ಬೊಬ್ಬ ಸಭಾಸದನಿಗೆ ಒಪ್ಪಿಸಿದನು. **೫.** ಇಂಗ್ಲಂಡದಲ್ಲಾಗುತ್ತಿದ್ದ **ಸಿವ್ಹಿಲ್ ಸರ್ವ್ಹಿಸ್** ಎಂಬ ಪರೀಕ್ಷೆಗೆ ಕೂಡಲು ಈದೇಶದವರಿಗೂ ಅನುಕೂಲವಾಯಿತು. **೬.** ಉಗೆಬಂಡಿ ತಾರಾಯಂತ್ರ, ಪೋಸ್ಟ ಆಫೀಸ ಇವು ಹೊಸದಾಗಿ ಬಳಿಕೆಯಲ್ಲಿ ಬಂದವು. **೭. ಶಿಕ್ಷಣ ಖಾತೆ**ಯನ್ನು ಸ್ಥಾಪಿಸಿ ವಿದ್ಯಾಪ್ರಸಾರಕ್ಕೆ ಅನುಕೂಲ ಮಾಡಿದನು. ಅಂದಿನಿಂದ ಅಲ್ಲಲ್ಲಿ ದೇಶಭಾಷೆಯ ಶಾಲೆಗಳುಂಟಾದವು. ಅಲ್ಲದೆ, ಜನರು

ನಡೆಸಿದ ಶಾಲೆಗಳಿಗೂ ಹಣದ ಸಹಾಯವು ಸಿಗಹತ್ತಿತು. **೮.** ಹಾರ್ಡಿಂಜನ ಕಾಲದಲ್ಲಿ ಆರಂಭವಾಗಿದ್ದ ಗಂಗೆಯ ಕಾಲುವೆಯು ಇವನ ಕಾಲಕ್ಕೆ ಮುಗಿಯಿತು. ಈ ದೊಡ್ಡ ಕಾಲುವೆಯಿಂದ ಒಕ್ಕಲತನಕ್ಕೂ ಸರಕು-ಹಡಗುಗಳ ಓಡಾಟಕ್ಕೂ ಅನುಕೂಲವಾಯಿತು.

೭. **ಕಂಪನಿಯು ಸನದಿನ ವಿಚಾರ** :— ಕ್ರಿ. ಶ. **೧೮೫೩.** ಕಂಪನಿಯು ಸನದಿನ ೨೦ ವರ್ಷದ ಅವಧಿಯು ಮುಗಿದುದರಿಂದ ಪಾರ್ಲಮೆಂಟಿನಲ್ಲಿ ಮತ್ತೆ ಅದರ ವಿಚಾರಣೆಯು ನಡೆದು, 'ಕಂಪನಿಯ ಕೈಯ ರಾಜ್ಯಭಾರವನ್ನು ಪಾರ್ಲಮೆಂಟಿನವರು ಬೇಕಾದಾಗ ತಮ್ಮ ಕಡೆಗೆ ತೆಗೆದುಕೊಳ್ಳಬಹುದು. ಆ ವರೆಗೆ ಕಂಪನಿಯು ಮೊದಲಿನಂತೆಯೆ ಕಾರಭಾರವನ್ನು ಸಾಗಿಸಬೇಕು.' ಎಂದು ಗೊತ್ತಾಯಿತು.

೮. **ಡಾಲಹೌಸಿಯು ಆಳಿಕೆಯ ಕೊನೆಯೂ ಯೋಗ್ಯತೆಯೂ :— ವೆಲಸ್ಲಿಯು** ಬರಿಯ ರಾಜ್ಯವನ್ನು ವಿಸ್ತರಿಸಿದನು; ಬೆಂಟಿಂಕನು ರಾಜ್ಯವಿಸ್ತಾರಕ್ಕಿಂತ ಸುಧಾರಣೆಗಳನ್ನು ಮಾಡುವಲ್ಲಿ ಹೆಚ್ಚು ಮನಸ್ಸು ಹಾಕಿದನು. ಆದರೆ ಡಾಲಹೌಸಿಯು ಇವೆರಡೂ ಕೆಲಸಗಳನ್ನು ನಿತಿಮೀರಿ ಮಾಡಿ ಹೆಸರಾದನು. ಇಡೀ ಹಿಂದುಸ್ಥಾನವನ್ನು ಇಂಗ್ಲಿಷರ ಅಧಿಕಾರಕ್ಕೆ ಒಳಪಡಿಸುವ ಕೆಲಸವನ್ನು ಮುಗಿಸಿ, ಹೊಸ ಸುಧಾರಣೆಗಳಿಂದ ಈ ದೇಶವನ್ನು ಸಿಂಗರಿಸಿ ಇವನು ಕೃತ-ಕೃತ್ಯನೆನಿಸಿದನು. ಇವನು ದೇಶೀಯ ರಾಜ್ಯಗಳನ್ನು ಕಸಿದುಗೊಂಡದ್ದರಿಂದ ಜನರಲ್ಲಿ ಅವಿಶ್ವಾಸವೂ ಅಸಮಾಧಾನವೂ ಉಂಟಾದವು. ಆದದರಿಂದ ಇವನು ಬಳಕೆಯಲ್ಲಿ ತಂದ ಉಗೆಬಂಡಿ ಮೊದಲಾದ ಹೊಸ ಸಾಧನಗಳ ಮಹತ್ವವು ಜನರ ಲಕ್ಷ್ಯಕ್ಕೆ ಬರಲಿಲ್ಲ. ಇವನು ಕ್ರಿ. ಶ. **೧೮೫೬**ರಲ್ಲಿ ತನ್ನ ದೇಶಕ್ಕೆ ಹೋದನು.

---

## ೧೯ ನೆಯ ಪಾಠ

### ಲಾರ್ಡ ಕ್ಯಾನಿಂಗ

( ಕ್ರಿ. ಶ. ೧೮೫೬—೧೮೬೨. )

೧. **ಲಾರ್ಡ ಕ್ಯಾನಿಂಗನ ಬರುವಿಕೆಯೂ ಧೋರಣೆಯೂ :—** ಡಾಲಹೌಸಿಯು ಹೋಗಲು ಲಾರ್ಡ ಕ್ಯಾನಿಂಗನು ಗ. ಜ. ನಾಗಿ ಬಂದನು.

ಪಾರ್ಲಮೆಂಟಿನಲ್ಲಿ ಇವನು ಹಲವು ವರ್ಷ ಕೆಲಸಮಾಡಿ ರಾಜ್ಯಕಾರ್ಯವನ್ನೂ ಹಿಂದುದೇಶದ ಸ್ಥಿತಿಯನ್ನೂ ಅರಿತವನಾಗಿದ್ದನು. ಡಾಲಹೌಸಿಯ ಕೃತ್ಯಗಳ ಮೂಲಕ ಹಿಂದುಸ್ತಾನದಲ್ಲಿ ಕಠಿಣವಾದ ಪ್ರಸಂಗವು ಒದಗಬಹುದೆಂದು ಇವನಿಗೆ + ಎನಿಸಿತ್ತು. ಇವನು ಸದಾಚಾರಿಯೂ ಶಾಂತನೂ ಆಗಿದ್ದನು.

೨. **ಇರಾಣದ ಯುದ್ಧ**:— ಕ್ರಿ. ಶ. **೧೮೫೬.** ಕ್ಯಾನಿಂಗನು ಬಂದ ತುಸುದಿನಗಳಲ್ಲಿ ಇರಾಣದ ಯುದ್ಧದ ಪ್ರಸಂಗವು ಒದಗಿತು. ಅಫಗಾಣಿಸ್ತಾ-ನದ ಅಮೀರನಾದ ದೊಸ್ತಮಹಮ್ಮದನು ಇಂಗ್ಲಿಷರ ಗೆಳೆಯನಾಗಿದ್ದನು. ಆವನ ರಾಜ್ಯದಲ್ಲಿಯ **ಹಿರಾತ**ವ ಕೋಟೆಯನ್ನು ಇರಾಣದ ಶಹನು ಕಸಿದಿದ್ದನು ಆದದರಿಂದ ಇಂಗ್ಲಂಡದಿಂದ ಅಪ್ಪಣೆಯಾದ ಮೇರೆಗೆ ಕ್ಯಾನಿಂಗನು ಅಮೀರನ ನೆರವಿಗೆ ದಂಡು ಕಳುಹಿದನು. ಅದು ಅಮೀರನೊಡನೆ ಹೋಗಿ ಇರಾಣದವರ **ಬುಶಾಯರ** ಪಟ್ಟಣವನ್ನು ಹಿಡಿದುಕೊಂಡಿತು. ಆಗ ಷಾಹನು ತಾನು ತೆಗೆದು ಕೊಂಡಿದ್ದ ಕೋಟೆಯನ್ನು ಬಿಟ್ಟುಕೊಟ್ಟು ಒಡಂಬಡಿಕೆ ಮಾಡಿಕೊಂಡನು.

೩. **೧೮೫೭ ರ ಬಂಡಾಯ** :— ಕ್ರಿ ಶ ೧೮೫೭ — **೧೮೫೮. ಕಾರಣಗಳು**— **೧.** ಡಾಲಹೌಶಿಯು ಹಲವು ದೇಶೀಯ ರಾಜ್ಯಗಳನ್ನೂ ವರ್ಷಾಶನಗಳನ್ನೂ ಖಾಲಸಾ ಮಾಡಿದ್ದರಿಂದ ಅಧಿಕಾರ, ಧನ ಮಾನ ಇವು ಗಳಿಗೆ ಎರವಾದ ಜನರು ಅಸಂತಪ್ತರಾಗಿದ್ದರು. ೨. ಮಿಶನರಿಗಳು ಈ ದೇಶದಲ್ಲಿ ನಡೆಸಿದ್ದ ಧರ್ಮ ಪ್ರಸಾರದ ಕೆಲಸಕ್ಕೆ ಡಾಲಹೌಸಿಯ ಕಾಲದಿಂದ ಕಂಪನಿಯ ಅಧಿಕಾರಿಗಳು ನೆರವಾಗಹತ್ತಿದರು; ವೇಲೂರ ಬರಾಕಪುರಪಳ ಸೈನಿಕರ ದಂಗೆಗಳು, ಧರ್ಮ ಭಾವನೆಗಳಿಗೆ ಅಡ್ಡಿಯಾದದರಿಂದಲೆ ಉಂಟಾದ ವೆಂಬ ಮಾತು ಜನರಿಗೆ ಗೊತ್ತು ಇದ್ದಿತು. ಕ್ರಿ. ಶ. ೧೮೫೬ ರಲ್ಲಿ 'ಜಗತ್ತಿನ ಯಾವುದೇ ಭಾಗದಲ್ಲಿ ಹೋಗಿ ಕೆಲಸಮಾಡಲು ಒಪ್ಪಿಗೆ ಕೊಟ್ಟವರನ್ನೇ ಸೈನ್ಯ ದಲ್ಲಿ ಸೇರಿಸಿಕೊಳ್ಳಬೇಕು' ಎಂಬ ನಿಯಮವಾಯಿತು. ಈ ಕಾರಣಗಳ ಮೂಲಕ ಜನರಲ್ಲಿ, ಕಂಪನಿ ಸರಕಾರವು ನಮ್ಮ ಧರ್ಮವನ್ನು ಕೆಡಿಸಲು

---

+ " ಇದೀಗ ಹಿಂದುಸ್ತಾನದ ಮುಗಿಲು ಮೋಡವಿಲ್ಲದದೂ ಶಾಂತವೂ ಆಗಿ ತೋರುವುದಾ-ದರೂ, ಒಂದಾನೊಂದು ಕಾರ್ಮೋಡವು ಹುಟ್ಟಿ, ಕ್ಷಣದಲ್ಲಿ ಬೆಳೆದು, ಅದು ಮುಗಿಲನ್ನೆಲ್ಲ ಯಾವ ಬಗೆಯಿಂದ ಮುಸುಕುವದೋ ತಿಳಿಯದು." ಲಾರ್ಡ ಕ್ಯಾನಿಂಗ

(ಬೋರವಣಕರ ಕೃತ ಐ. ಹಿಂದುಸ್ತಾನ)

ಹೇವಣಿಸುವದೆಂಬ ಸಂಶಯವು ಉಂಟಾಯಿತು ೩. ಎಂದೂ ಕಾಣದೆಯಿದ್ದ ಉಗಿಬಂಡಿ, ತಾರಾಯಂತ್ರ ಈ ಹೊಸ ಸಾಧನಗಳು ಒಮ್ಮೆಲೆ ಬಳಿಕೆಯಲ್ಲಿ ಬಂದದರಿಂದ ಇವುಗಳನ್ನು ತಿಳುವಳಿಕೆಯಿಲ್ಲದ ಜನರು ಉತ್ಪಾದವೆಂದು ಭಾವಿಸಿದರು ೪. "ಪ್ಲಾಸಿಯ ಯುದ್ಧದಿಂದ ಕಂಪನಿಯ ರಾಜ್ಯವು ಸ್ಥಾಪಿತವಾಯಿತು; ಅದು ನೂರುವರ್ಷ ಬಾಳಿ ಮುಳುಗುವದು ಎಂದು ಭವಿಷ್ಯವಿದೆ; ಆಕಾಲವು ಈಗ ಸಮೀಪಿಸಿತು" ಎಂದು ಹಬ್ಬಿದ ಸುದ್ದಿಯನ್ನು ಹಲವರು ನಿಜವೆಂದು ನಂಬಿದ್ದರು. ೫. ದಿಲ್ಲಿಯಲ್ಲಿ ಇರುತ್ತಿದ್ದ ಬಹದ್ದೂರಷಾಹನಿಗೆ ವರ್ಷಾಶನಕೊಡುತ್ತಿದ್ದರು ಆ ಮನೆತನಕ್ಕಿದ್ದ 'ಬಾದಷಾಹ' ಎಂಬ ಬಿರುದನ್ನು ಕಸಿದುಕೊಳ್ಳಬೇಕೆಂದು ಗೊತ್ತಾಯಿತು. ಇದನ್ನು ತಿಳಿದು ಮೊಗಲ ಮನೆತನವನ್ನು ಗೌರವದಿಂದ ಕಾಣುವ ದಿಲ್ಲಿಪ್ರಾಂತದ ಜನರು ಅಸಮಾಧಾನ ಹೊಂದಿದರು ೬. ಅಯೋಧ್ಯಾ ಪ್ರಾಂತವು ಖಾಲಸಾ ಆದಬಳಿಕ ಅಲ್ಲಿಯ ಜಮೀನದಾರರ ಹಕ್ಕುಗಳನ್ನು ಕ್ರಮದಿಂದ ಕಡಿಮೆಮಾಡಿ ಜಮೀನದಾರಿ ಪದ್ಧತಿಯನ್ನೇ ಮುರಿದು ಬಿಡಬೇಕೆಂದು ಗೊತ್ತಾಯಿತು. ಆದರೆ ಕಂಪನಿಯವರ ಈ ಕೃತಿಯು ಜಮೀನದಾರರಿಗೆ ಸಹನವಾಗಲಿಲ್ಲ. ೭. ದೇಶೀಯ ರಾಜ್ಯಗಳಲ್ಲಿದ್ದಾಗ ಸಹಾಯಕ ಸೈನ್ಯದ ಸೈನಿಕರಿಗೆ ಸಿಗುತ್ತಿದ್ದ ಭತ್ತೆಯು ಸಿಗುವದು ಕಟ್ಟಾಯಿತು ಎಷ್ಟು ವರ್ಷ ದುಡಿದರೂ ದೇಶೀಯರಿಗೆ ಹೆಚ್ಚಿನ ಅಧಿಕಾರದ ಸ್ಥಳಗಳು ದೊರೆಯುತ್ತಿರಲಿಲ್ಲ. ಕ್ರಿ. ಶ. **೧೮೫೩**ರಲ್ಲಿ **'ಎನ್‌ಫೀಲ್ಡ ರಾಯಫಲ್'** ಎಂಬ ಹೊಸತರದ ತುಬಾಕಿಗಳು ಸೈನಿಕರಿಗೆ ಕೊಡಲ್ಪಟ್ಟವು. ಅವುಗಳನ್ನು ಉಪಯೋಗಿಸುವಾಗ ಕಾಡತೂಸುಗಳ ಬಾಯಿಯ ಹೊದಿಕೆಯನ್ನು ಹಲ್ಲುಗಳಿಂದ ಕಡಿದು ತೆಗೆಯಬೇಕೆಂದು ನಿಯಮವಿದ್ದಿತು. ಈ ಕ್ರಮವು ಕೆಲವುದಿನ ನಡೆದಿರಲು, ಕಾಡತೂಸುಗಳಿಗೆ ನೆಣವನ್ನು ತೊಡೆಯುವರೆಂಬ ಸಂಗತಿಯು ಒಂದು †ಪ್ರಸಂಗದಿಂದ ಎಲ್ಲರಿಗೆ ಗೊತ್ತಾಯಿತು ಈ ಕಾರಣಗಳಿಂದ ಇಂಗ್ಲಿಷ

† ಈ ಕಾಡತೂಸುಗಳು **ಡಮುಡಮು** ಎಂಬಲ್ಲಿಯ ಕಾರಖಾನೆಯಿಂದ ಬರುತ್ತಿದ್ದವು. ಆ ಕಾರಖಾನೆಯಲ್ಲಿ ದುಡಿಯುವ ಒಬ್ಬ ಹೊಲೆಯನಿಗೂ ಬರಾಕಪುರದಲ್ಲಿಯ ಒಬ್ಬ ಬ್ರಾಹ್ಮಣ ಸೈನಿಕನಿಗೂ ಬಾವಿಯ ಮೇಲೆ ನೀರು ತುಂಬುವಾಗ ಒಮ್ಮೆ ಜಗಳಹತ್ತಿತು ಆ ಪ್ರಸಂಗದಲ್ಲಿ ಹೊಲೆಯನು "ಮಡಿಹುಡಿ ಮಾಡುವ ನೀವು, ಆಕಳು-ಹಂದಿಗಳ ನೆಣಹತ್ತಿದ ಕಾಡತೂಸುಗಳನ್ನು ಬಾಯಲ್ಲಿಟ್ಟುಕೊಳ್ಳುವಿರಲ್ಲ!" ಎಂದು ಆ ಬ್ರಾಹ್ಮಣನಿಗೆ ಅಂದನು. ಈ ಮಾತಿನಿಂದ ಹಿಂದುಗಳೂ ಮುಸಲ್ಮಾನರೂ ಸಿಟ್ಟಾಗಿ ಕಾಡತೂಸುಗಳನ್ನು ಮುಟ್ಟಲಾರೆವೆಂದು ಹಟವನ್ನು ಹಿಡಿದರು.

ಸೈನ್ಯದಲ್ಲಿಯ ದೇಶೀಯ ಸೈನಿಕರು ಉಳಿದ ಜನರಿಗಿಂತ ಹೆಚ್ಚು ಅಸಂತುಷ್ಟರಾದರು.

**೪. ಬಂಡಾಯದ ಆರಂಭವೂ ಅದರ ಹಬ್ಬುವಿಕೆಯೂ:—** ಹೀಗಿರುವಾಗ ಕ್ರಿ. ಶ. ೧೮೫೭ನೆಯ ಫೆಬ್ರುವರಿ ತಿಂಗಳಿನಲ್ಲಿ **ರಾಣಿಗಂಜದ** ಒಂದು ಸೈನ್ಯ ವಿಭಾಗದವರು ಕಾಡತೂಸುಗಳಿಗೆ ಕೈಹಚ್ಚುವದಿಲ್ಲೆಂದರು. ಆಗ ಅಧಿಕಾರಿಗಳು ಶಸ್ತ್ರಗಳನ್ನು ಕಸಿದುಕೊಂಡು ಅವರನ್ನು ಕೆಲಸದಿಂದ ತೆಗೆದು ಹಾಕಿದರು. ತೆಗೆದುಹಾಕಲ್ಪಟ್ಟವರಲ್ಲಿ ಬಹು ಜನರು ಅಯೋಧ್ಯಾ-ರೋಹಿಲಖಂಡಗಳ ನಿವಾಸಿಗಳಿದ್ದರು. ಅವರು ತಮ್ಮ ಶೀಮೆಗಳಿಗೆ ಬಂದು ಕಲಕತ್ತೆಯ ಸೈನಿಕರ ವಿಚಾರಗಳನ್ನು ಜನರಲ್ಲಿ ಬಿತ್ತಹತ್ತಿದರು. ಮುಂದೆ ಎಪ್ರಿಲ ೨೪ನೆಯ ತಾ. ದಿನ ದಂಡಿನ ಮುಖ್ಯ ಶಿಬಿರವಾದ **ಮಿರತ** ದಲ್ಲಿ ಕವಾಯಿತಿಗೆ ನಿಲ್ಲಿಸಲ್ಪಟ್ಟ ಒಂದು ವಿಭಾಗದ ಬಹುತರ ಎಜಲ್ಲನರು ಕಾಡ-ತೂಸುಗಳನ್ನು ಮುಟ್ಟಲಿಲ್ಲ. ಆದದರಿಂದ ಅವರಿಗೆಲ್ಲ ಶಿಕ್ಷೆಯು ವಿಧಿಸಲ್ಪಟ್ಟಿತು. ಬಳಿಕ ಅಧಿಕಾರಿಗಳು ಮೇ ತಿಂಗಳ ೯ನೆಯ ದಿನ, ಶಿಕ್ಷೆಹೊಂದಿದ ಜನರನ್ನು ಉಳಿದ ಸೈನಿಕರ ಮುಂದೆ ನಿಲ್ಲಿಸಿ, ಅವರ ಡ್ರೆಸ್ಸುಗಳನ್ನು ಕಸಿದುಕೊಂಡು ಸೆರೆಯಾಳುಗಳ ಬಟ್ಟೆಗಳನ್ನು ಕೊಟ್ಟರು. ಈ ಶಿಕ್ಷೆಹೊಂದಿದವರಲ್ಲಿ ಬಹು ಜನರು ಇಂಗ್ಲಿಷರಿಗಾಗಿ ಒಳ್ಳೆಯ ಶೌರ್ಯದಿಂದ ಕಾದಿದವರಾಗಿದ್ದರು. ಇಂಥವರಿಗೊದಗಿದ ಪ್ರಸಂಗವನ್ನು ನೋಡಿ ಉಳಿದಸೈನಿಕರ ಮನಸ್ಸು ಕಳವಳಿಸಿತು.

ಹೀಗಿರಲು, ಕ್ರಿ. ಶ. **೧೮೫೭ರ ಮೇ ತಿಂಗಳ ೧೦ನೆಯ** ದಿನ ಮಿರತ ದಲ್ಲಿಯೇ ಮೊದಲು ಬಂಡಾಯವೆದ್ದಿತು. ಆ ದಿನ ಸಂಜೆಗೆ ಬಂಡುಗಾರರು ಒಮ್ಮೆಲೆ ಶೆರೆಮನೆಯನ್ನು ನುಗ್ಗಿ ಅಲ್ಲಿದ್ದ ಸೈನಿಕರನ್ನು ಬಿಡಿಸಿಕೊಂಡು ಕಣ್ಣಿಗೆ ಬಿದ್ದ ಯುರೋಪಿಯನರನ್ನು ಕೊಲ್ಲಹತ್ತಿದರು. ಮತ್ತು ಮರುದಿನ ದಿಲ್ಲಿಯ ಮೇಲೆ ಸಾಗಿ, ಅಲ್ಲಿಯ ಹಿಂದೀ ಸೈನ್ಯವನ್ನು ತಮ್ಮ ಕಡೆಗೆ ಮಾಡಿಕೊಂಡು ಮಿರತದ ಕಾಯಕವನ್ನು ಅಲ್ಲಿಯೂ ಸಾಗಿಸಿದರು. ಬಳಿಕ ಅವರು ಮದ್ದು-ಗುಂಡುಗಳ ರಾಶಿಯನ್ನು ವಶಮಾಡಿಕೊಳ್ಳಹೋದರು. ಆದರೆ ಅದನ್ನು ರಕ್ಷಿಸುತ್ತಲಿದ್ದ ಯುರೋಪಿಯನ್ ಅಧಿಕಾರಿಗಳು ಅದು ಇನ್ನು ಬಂಡುಗಾರರ ಕೈಸೇರುವದೆಂದು ಎನಿಸಿದಕೂಡಲೆ ಜೀವದ ಹಂಗುದೊರೆದು ಅದಕ್ಕೆ ಬೆಂಕಿ

ಹಚ್ಚಿಬಿಟ್ಟರು. ಆದರೂ ಎಷ್ಟೋ ಮದ್ದು–ಗುಂಡು ಬಂಡುಗಾರರ ಪಾಲಾಯಿತು. ಆಮೇಲೆ ಬಂಡುಗಾರರು ದಿಲ್ಲಿಯನ್ನು ಪೂರ್ಣ ವಶಮಾಡಿಕೊಂಡು ಬಹದ್ದೂರಷಾಹನನ್ನು ಒಳ್ಳೆಯ ಸಡಗರದಿಂದ ಪಟ್ಟಕ್ಕೆ ಕುಳ್ಳಿರಿಸಿದರು.

**ಕಾನಪೂರ—** ಬಂಡುಗಾರರು ದಿಲ್ಲಿಯನ್ನು ವಶಮಾಡಿಕೊಳ್ಳುತ್ತಿರಲು ಇತ್ತ **ಕಾನಪೂರ, ಲಖನೌ, ಬನಾರಸ, ಝಾಂಸಿ, ಬರೇಲಿ, ನಿಮುಚ, ಗ್ವಾಲ್ವೇರ, ನಸೀರಾಬಾದ** ಮುಂತಾದ ಎಡೆಗಳಲ್ಲಿಯೂ ಬಂಡಾಯವೆದ್ದಿತು. ಜೂನ ತಿಂಗಳ ಆರಂಭಕ್ಕೆ ಕಾನಪುರದ ಸಿಪಾಯಿಗಳು ಬಂಡುಹೂಡಿದರು. ೨ನೆಯ ಬಾಜಿರಾಯನ ದತ್ತಕಮಗ **ನಾನಾಸಾಹೇಬ**ನು ಅವರ ಮುಂದಾಳಾಗಿ ಅಲ್ಲಿಯ ಇಂಗ್ಲಿಷ ಠಾಣ್ಯವನ್ನು ಮುತ್ತಿದನು. ಸುಮಾರು ಮೂರು ವಾರಗಳ ವರೆಗೆ ಒಳಗಿನವರು ತಡೆದಿದ್ದರು. ಆಮೇಲ್ಲೆ ಅವರು ಮುಂದುಗಾಣದೆ ನಿಶಸ್ತ್ರರಾಗಿ ನಾನಾಸಾಹೇಬನಿಗೆ ಶರಣುಹೋದರು ಮತ್ತು ಹೆಂಗಸರನ್ನು ಹುಡುಗರನ್ನು ಅವನ ವಶಕ್ಕೆ ಕೊಟ್ಟು ತಾವು ನಾವುಗಳಿಂದ ಅಲಹಾಬಾದದ ಕಡೆಗೆ ಹೊರಟರು. ಆದರೆ ಬಂಡುಗಾರರು ಗುಂಡುಗಳ ಮಳೆಗರೆದು ಬಹುತರ ಯಾವತ್ತು ಜನರನ್ನು ನಾಶಗೊಳಿಸಿದರು. **ಲಖನೌ**- ಇಲ್ಲಿಯ ಅಸಂತುಷ್ಟರಾದ ಸೈನಿಕರಿಗೆ ಜಮೀನದಾರರ ಮತ್ತು ಉಳಿದ ಜನರ ನೆರವು ಇದ್ದಿತು. ಬಂಡುಗಾರರು ಕಮಿಶನನಾದ ಸರ್ ಹೆನ್ರಿ ಲಾರೇನ್ಸನನ್ನು ಕೊಂದು ಇಂಗ್ಲಿಷರ ಶಿಬಿರವನ್ನು ಮುತ್ತಿದರು **ಝಾಂಸಿ**– ಜೂನ ತಿಂಗಳ ಆರಂಭಕ್ಕೆ ಬಂಡಾಯವೆದ್ದಿತು ಬಂಡುಗಾರರು ತಮ್ಮ ಮೇಲಧಿಕಾರಿಗಳನ್ನು ಕೊಂದು ಕೋಟೆಯನ್ನು ನುಗ್ಗಿ ಒಳಗಿದ್ದಯುರೋಪಿಯನ್ನರನ್ನು ಕೊಲೆಮಾಡಿದರು. ಮತ್ತು ಝಾಂಸಿಯ ರಾಣಿಯಾಗಿದ್ದ ಲಕ್ಷ್ಮೀಬಾಯಿಯ ಕಡೆಯಿಂದ ಒಂದು ಲಕ್ಷ ರೂಪಾಯಿಗಳನ್ನು ಕಸಿದುಕೊಂಡು ದಿಲ್ಲಿಯ ಕಡೆಗೆ ಸಾಗಿದವರು ನಡುವೆಯೆ ಕಾನಪುರದ ಕಡೆಗೆ ತಿರುಗಿ ನಾನಾಸಾಹೇಬನನ್ನು ಕೂಡಿಕೊಂಡರು.

**೫. ಬಂಡಾಯುವನ್ನು ಅಡಗಿಸಿದ್ದು:— ದಿಲ್ಲಿ**- ಬಂಡುಗಾರರು ದಿಲ್ಲಿಯನ್ನು ಹೊಕ್ಕು ಯುರೋಪಿಯನರ ಕೊಲೆ ನಡೆಸಿರುವಾಗಲೆ ಯುರೋಪಿಯನನೊಬ್ಬನು ಹೊತ್ತುಸಾಧಿಸಿ ಬಂಡಾಯದ ಸುದ್ದಿಯನ್ನು ತಂತಿಯಿಂದ ಪಂಜಾಬಕ್ಕೆ ಮುಟ್ಟಿಸಿದನು. ಪಂಜಾಬದ ಗ.ನಾದ ಸರ್ ಜಾನ್ ಲಾರೇನ್ಸನು

ದಂಡಿನೊಡನೆ ಜನರಲ್ **ನಿಕಲ್ಸನ**ನನ್ನು ದಿಲ್ಲಿಗೆ ಕಳುಹಿದನು. ಸಪ್ಟಂಬರ ತಿಂಗಳ ಮಧ್ಯದ ಸುಮಾರಿಗೆ ದೊಡ್ಡ ಯುದ್ಧವಾಗಿ ನಿಕಲಸನನೂ ಬಹು ಜನ ಸೈನಿಕರೂ ಹತರಾದರು. ಆದರೂ ಕೊನೆಗೆ ಕಾಶ್ಮೀರ ಅಗಸೆಯಿಂದ ಇಂಗ್ಲಿಷರ ಸೈನ್ಯವು ಒಳನುಗ್ಗಿತು. ಬಳಿಕ ಇಂಗ್ಲಿಷರ ಕಡೆಯ ಹಡಸನ್ ಎಂಬವನು ಬಹಾದ್ದೂರಷಾಹನ ಇಬ್ಬರು ಮಕ್ಕಳನ್ನು ಗುಂಡು ಹಾಕಿ ಕೊಂದನು. ಇಂಗ್ಲಿಷರು ಬಹಾದ್ದೂರಷಾಹನನ್ನು ಸೆರೆಹಿಡಿದು ರಂಗೂನದಲ್ಲಿ ಒಯ್ದಿಟ್ಟರು. **ಕಾನಪುರ**- ಅಲಹಾಬಾದದಲ್ಲಿದ್ದ ಬಂಡಾಯವನ್ನು ಮುರಿದ ಬಳಿಕ ಇಂಗ್ಲಿಷರು ಅಲ್ಲಿಯೇ ಠಾಣ್ಯವನ್ನು ಮಾಡಿಕೊಂಡು ಕಾನಪುರ ಮೊದ ಲಾದ ಬಂಡುಗಾರರಿದ್ದ ಸ್ಥಳಗಳಿಗೆ ಸೈನ್ಯವನ್ನು ಕಳುಹಿಸುತ್ತಿದ್ದರು. ಕಾನ ಪುರದಲ್ಲಿಯ ಯುರೋಪಿಯನರು ಬಂಡುಗಾರರ ಕೈಯಲ್ಲಿ ಸಿಕ್ಕು ನಾಶ ಹೊಂದಿದ ಸುದ್ದಿಯನ್ನು ಕೇಳಿ ಜ. **ಹ್ಯಾವಲಾಕ**ನು ಕಾನಪುರದ ಮೇಲೆ ಸಾಗಿದನು. ಇವನು ಬಂದನೆಂಬದನ್ನು ಕೇಳಿ ಬಂಡುಗಾರರು ತಮ್ಮ ವಶದಲ್ಲಿದ್ದ ಯುರೋಪಿಯನ ಹೆಂಗಸರನ್ನೂ ಹುಡುಗರನ್ನೂ ಕೊಂದುಬಿಟ್ಟರು. ಮುಂದೆ ಹ್ಯಾವಲಾಕನ ಎದುರಿಗೆ ತನ್ನ ಆಟ ಸಾಗದೆಂದು ತಿಳಿದು ನಾನಾಸಾಹೇಬನು ಓಡಿಹೋದನು. ತರುವಾಯ ಕಾನಪುರವು ಹ್ಯಾವಲಾಕನ ಕೈವಶವಾಯಿತು. ಬಳಿಕ ಹ್ಯಾವಲಾಕನು ಲಖನೌ ಪಟ್ಟಣವನ್ನು ಕೈವಶ ಮಾಡಿಕೊಳ್ಳಲು ಹೋಗಿ ಬಂಡುಗಾರರಿಂದ ತಾನೇ ಮುತ್ತಲ್ಪಟ್ಟನು.

ಈ ಬಂಡಾಯದ ಸುದ್ದಿಯು ಇಂಗ್ಲಂಡದವರಿಗೆ ತಿಳಿಯಲು ಅವರು ಸರ್ **ಹ್ಯೂರೋಜ** ಮತ್ತು **ಕ್ಯಾಂಬೇಲ** ಇವರನ್ನು ಸೈನ್ಯದೊಂದಿಗೆ ಹಿಂದು ಸ್ಥಾನಕ್ಕೆ ಕಳುಹಿದರು. ಅವರಿಬ್ಬರು ಮುಂಬಯಿಗೆ ಇಳಿದು ಬಂಡಾಯವೆದ್ದ ಸಿಟ್ಟಿಗೆ ಸಾಗಿದರು. **ಕ್ರಿ ಶ. ೧೮೫೭ರ ನವ್ಹಂಬರ ತಿಂಗಳು ಅರ್ಧಗಳೆದಿರಲು** ಕ್ಯಾಂಬೇಲನು ಲಖನೌ ಪಟ್ಟಣಕ್ಕೆ ತಲುಪಿ ಬಂಡುಗಾರರನ್ನು ಸೋಲಿಸಿ ಹ್ಯಾವಲಾಕನನ್ನು ಕೂಡಿಕೊಂಡು ಆ ಪಟ್ಟಣವನ್ನು ವಶಪಡಿಸಿಕೊಂಡನು. ಅಷ್ಟರಲ್ಲಿ ಗ್ವಾಲ್ಹೇರದ ಬಂಡುಗಾರರು **ಕಾಲ್ಪಿಗೆ** ಬಂದು ನಾನಾಸಾಹೇಬ ನನ್ನು ಕೂಡಿಕೊಂಡು ಕಾನಪುರದ ಮೇಲೆ ಸಾಗಿದರು. ಆಗ ಕ್ಯಾಂಬೇಲನು ಅತಗೆ ಹೋಗಿ ಆ ಬಂಡುಗಾರರನ್ನೂ ಸೋಲಿಸಿದನು. ಆ ಬಳಿಕ ಕ್ರಿ. ಶ.

**೧೮೫೮ರ ಮಾರ್ಚದ ವರೆಗೆ** ಲಖನೌದ ಬಂಡಾಯವನ್ನೂ ಅಲ್ಲಿಂದ **ಮೇದ** ವರೆಗೆ **ಬರೇಲಿಯ** ಬಂಡಾಯವನ್ನೂ ಪೂರ್ಣವಾಗಿ ಅಡಗಿಸಿದನು.

ಅತ್ತ, ಕ್ಯಾಂಬೇಲನಿಂದ ಸೋಲಿಸಲ್ಪಟ್ಟ ಗ್ವಾಲ್ಹೇರದ ಸೈನಿಕರು ಝಾಂಸಿಗೆ ಹೋಗಿ **ಲಕ್ಷ್ಮೀಬಾಯಿ**ಯನ್ನು ಕೂಡಿಕೊಂಡು ಹುರಿಯಾಗಿ ನಿಂತರು. ಆಗ ಸರ್ ಹ್ಯೂರೋಜನು **ಮಾರ್ಚ ತಿಂಗಳಲ್ಲಿ** ಝಾಂಸಿಯನ್ನು ದುತ್ತಿದನು. ತನ್ನವರೆ ಶತ್ರುಗಳನ್ನು ಕೂಡುತ್ತಿರುವದನ್ನು ಕಂಡು, ಇನ್ನು ಕೋಟೆಯು ಕೈಬಿಡುವದೆಂದು ತಿಳಿದು ಲಕ್ಷ್ಮೀಬಾಯಿಯು ಮುನ್ನೂರು ಜನ ರಾಹುತರೊಂದಿಗೆ ಪಾರಾಗಿ ಕಾಲ್ಪಿಗೆ ಹೋಗಿ ಪೇಶವೆಯನ್ನು ಕೂಡಿಕೊಂಡಳು. ಹ್ಯೂರೋಜನು ಕೂಡಲೆ ಕಾಲ್ಪಿಗೆ ಹೋಗಿ ಪೇಶವೆಯನ್ನು ಸೋಲಿಸಲು ಅವನು ಎಲ್ಲಿಯೋ ಹೋಗಿಬಿಟ್ಟನು. ಬಳಿಕ ಲಕ್ಷ್ಮೀಬಾಯಿಯ ಹೇಳಿಕೆ ಯಂತೆ ಎಲ್ಲ ಬಂಡುಗಾರರು, ಸಿಂಧೆಯೂ ಅವನ ಸೈನ್ಯವೂ ತಮ್ಮನ್ನು ಕೂಡಿ-ಕೊಳ್ಳಬಹುದೆಂಬಾಶೆಯಿಂದ **ಗ್ವಾಲೇರಕ್ಕೆ** ಹೋದರು. ಬಯಸಿದಂತೆ ಸಿಂಧೆಯ ಸೈನ್ಯವು ಇವರನ್ನು ಕೂಡಿತು. ಸ್ವತಃ ಸಿಂಧೆಯು ಬಂಡುಗಾರರನ್ನು ಎದುರಿಸಿ ಸೋತು, ಆಸರಕ್ಕಾಗಿ ಇಂಗ್ಲಿಷರ ಕಡೆಗೆ ಓಡಿಹೋದನು. ಮುಂದೆ ಜೂನ ತಿಂಗಳಲ್ಲಿ ಬಂಡುಗಾರರಿಗೂ ಹ್ಯೂರೋಜನಿಗೂ ದೊಡ್ಡ ಯುದ್ಧ ವಾಯಿತು. ವೀರ ರಾಣಿಯಾದ ಲಕ್ಷ್ಮೀಬಾಯಿಯು ಕಾದುತ್ತ ಕಾದುತ್ತ ಮಡಿದಳು. **ತಾತ್ಯಾ ಟೋಪಿ**ಯು ಆಗ ಓಡಿಹೋದನು ಮರುವರುಷ ಸಿಕ್ಕು ಗಲ್ಲಿಗೆ ಗುರಿಯಾದನು. ಆ ಬಳಿಕ ಸಣ್ಣಪುಟ್ಟ ಬಂಡಾಯಗಳನ್ನಡಗಿಸುವ ಕೆಲಸವು ಕ್ರಿ. ಶ. **೧೮೫೮ರ ನವ್ಹಂಬರದ** ತನಕ ಸಾಗಿ ಮುಗಿಯಿತು.

---

## ೨೦ ನೆಯ ಪಾಠ

### ಲಾರ್ಡ ಕ್ಯಾನಿಂಗ ( ಮುಂದೆ ಸಾಗಿದ್ದು )

**೧. ಬಂಡಾಯದ ಪರಿಣಾಮ :—** ಬಂಡಾಯವಾದಂದಿನಿಂದ ಇಂಗ್ಲಂಡದ ಜನರು ಹಿಂದುಸ್ಥಾನದ ರಾಜ್ಯಕಾರಭಾರದ ಕಡೆಗೆ ಹೆಚ್ಚು ಲಕ್ಷ್ಯಕೊಡಹತ್ತಿದರು. ಹಿಂದೀ ಜನರ ಅಧಿಕಾರ, ಹಕ್ಕು, ಮಾನಮರ್ಯಾದೆ ಇವುಗಳನ್ನು ಲಕ್ಷಿಸದೆ ಬರಿಯ ಲಾಭದ ದೃಷ್ಟಿಯಿಂದ ಕಾರಭಾರವನ್ನು

ಸಾಗಿಸಿದ ಕಂಪನಿಯ ಆಳಿಕೆಯು ಅವರಿಗೆ ಸಾಕೆನಿಸಿತು. ಆದದರಿಂದ ಹಿಂದುಸ್ಥಾನದ ಆಡಳಿತವನ್ನು ಪ್ರತ್ಯಕ್ಷ ಪಾರ್ಲಿಮೆಂಟಿನವರು ತಮ್ಮ ವಶಕ್ಕೆ ತೆಗೆದುಕೊಳ್ಳಬೇಕೆಂದು ಅವರು ಪ್ರತಿಪಾದಿಸತೊಡಗಿದರು. ಕೊನೆಗೆ ಇದೇ ಮಾತಿಗೆ ಬಹುಮತದ ಬೆಂಬಲವು ದೊರೆತು, ಹಿಂದುಸ್ಥಾನದ ರಾಜ್ಯ ಕಾರಭಾರದ ಒಂದು ಕಾಯದೆಯು ಪಾರ್ಲಮೆಂಟಿನಲ್ಲಿ ಪಾಸಾಯಿತು. ಕ್ರಿ. ಶ. **೧೮೫೮.**

**೨. ಕ್ರಿ. ಶ. ೧೮೫೮ರ ಕಾಯದೆ :—** ೧. ಈಸ್ಟ ಇಂಡಿಯಾ ಕಂಪನಿಯನ್ನು ರದ್ದುಪಡಿಸಿ ಅದರ ಕಡೆಗಿದ್ದ ಕಾರಭಾರವನ್ನು ವಿಕ್ಟೋರಿಯಾ ರಾಣಿಯವರು ತಮ್ಮ ಕೈಯಲ್ಲಿ ತೆಗೆದುಕೊಳ್ಳಬೇಕು **೨.** ಮಂತ್ರಿಮಂಡಲದಲ್ಲಿಯ ಒಬ್ಬನು **ಭಾರತ ಮಂತ್ರಿ** ( ಸ್ಟೇಟ ಸಕ್ರೆಟರಿ ) ಯಾಗಿ ೧೫ ಜನ ಸಭಾಸದರ ನೆರವಿನಿಂದ ಹಿಂದುಸ್ಥಾನಪ ಗವ್ಹರ್ನರ ಜನರಲನ ಮಾರ್ಗದರ್ಶಕನೂ ಮೇಲ್ವಿಚಾರಕನೂ ಆಗಿರಬೇಕು. **೩** ಗವ್ಹರ್ನರ ಜನರಲನಿಗೆ ರಾಣಿಯವರ **ಪ್ರತಿನಿಧಿ (ವ್ಹಾಯಸರಾಯ)** ಎಂಬ ಗೌರವದ ಹೆಸರು ಉಂಟಾಯಿತು. ಈ ಕಾಯದೆಯ **೪೪ ಕಲಮುಗಳಲ್ಲಿ** ಮೇಲಿನವು ಮುಖ್ಯವಾದವುಗಳು. ಉಳಿದ ಕಲಮುಗಳು ರಾಜ್ಯಕಾರಭಾರದ ಸಂಬಂಧದ ಸೂಚನೆಗಳಾಗಿದ್ದವು.

**೩. ರಾಣಿಯವರ ಜಾಹೀರನಾಮೆ :—** ಪಾರ್ಲಿಮೆಂಟಿನ ಕಾಯದೆಯ ಮೇರೆಗೆ ಹಿಂದುಸ್ಥಾನದಲ್ಲಿಯ ಸಂಸ್ಥಾನಿಕರನ್ನೂ ಎಲ್ಲ ಪ್ರಜೆಗಳನ್ನೂ ಉದ್ದೇಶಿಸಿ ಒಂದು ಜಾಹೀರನಾಮೆಯನ್ನು ಪ್ರಕಟಿಸಿದರು. ಮೊದಲನೆಯ ವ್ಹಾಯಿಸರಾಯನಾದ ಲಾರ್ಡ ಕ್ಯಾನಿಂಗನು ಕ್ರಿ ಶ. **೧೮೫೮ರ ನವ್ಹಂಬರ ತಿಂಗಳಿನ ಮೊದಲನೆಯ ದಿನ ಅಲಹಾಬಾದ**ದಲ್ಲಿ ದೊಡ್ಡ ದರ್ಬಾರವನ್ನು ನೆರೆಯಿಸಿ, ಈ ಜಾಹೀರನಾಮೆಯನ್ನು ಓದಿತೋರಿಸಿದನು ಇದರಲ್ಲಿಯ ಮುಖ್ಯ ಸಂಗತಿಗಳು— **೧.** ಹಿಂದೀ ಸಂಸ್ಥಾನಿಕರಿಗೂ ಕಂಪನಿಗೂ ಆದ ಕರಾರುಗಳಂತೆ ತಪ್ಪದೆ ನಡೆದುಕೊಳ್ಳುವೆವು. **೨.** ದತ್ತಕ ತೆಗೆದುಕೊಳ್ಳಲು ಅಪ್ಪಣೆ ಕೊಟ್ಟು ಆ ದತ್ತಕ ಸಂತತಿಗಳ ಕಡೆಗೆ ರಾಜ್ಯಗಳನ್ನೂ ವರ್ಷಾಶನಗಳನ್ನೂ ನಡೆಯಿಸುವೆವು, **೩.** ಸಂಸ್ಥಾನಿಕರೇ ಮೊದಲಾದವರ ಅಧಿಕಾರ-ಮಾನ-ಮರ್ಯಾದೆಗಳನ್ನು ತಕ್ಕರೀತಿಯಿಂದ ಕಾಯುವೆವು. **೪.** ಪ್ರಜೆಗಳ ಧರ್ಮದಲ್ಲಿಯೂ ಆಚಾರ-ವಿಚಾರಗಳ ಸಂಬಂಧದಲ್ಲಿಯೂ ಕೈಹಾಕುವದಿಲ್ಲ. **೫.**

ಧರ್ಮ, ಜಾತಿ ಇವುಗಳನ್ನು ಎಣಿಸದೆ ಯೋಗ್ಯತೆಯುಳ್ಳವರಿಗೆ ಪಕ್ಷಪಾತ ವಿಲ್ಲದೆ ಕೆಲಸಗಳನ್ನು ಕೊಡುವೆವು ೬. ಕೊಲೆಯ ಅಪರಾಧವನ್ನು ಮಾಡದೆ ಇದ್ದ ಬಂಡುಗಾರರನ್ನೆಲ್ಲ ಕ್ಷಮಿಸುವೆವು.

ಈ ಜಾಹೀರ ನಾಮೆಯಿಂದ ಎಲ್ಲರ ಮನಸ್ಸಿಗೆ ಸಮಾಧಾನವೆನಿಸಿತು.

**೪. ಕ್ಯಾನಿಂಗನ ಕಾಲದ ಉಳಿದ ಕೆಲಸಗಳು:—** ೧. **ವಿಶ್ವವಿದ್ಯಾಲಯಗಳೂ ಹಾಯಕೋರ್ಟುಗಳೂ—** ಕ್ರಿ. ಶ. ೧೮೫೭ ರಲ್ಲಿ ಬಂಡಾಯ ನಡೆದಿರುವಾಗಲೇ ಕಲಕತ್ತೆ, ಮುಂಬಯಿ, ಮದ್ರಾಸ ಈ ಪಟ್ಟಣಗಳಲ್ಲಿ ವಿಶ್ವವಿದ್ಯಾಲಯ (ಯುನಿವರ್ಸಿಟಿ) ಗಳುಮತ್ತು ಹಾಯಕೋರ್ಟುಗಳ ಸ್ಥಾಪನೆಯಾಯಿತು. ೨. **ಕಾಯದೆ ಮಂಡಲಗಳು—** ಕ್ರಿ. ಶ. ೧೮೬೧ರಲ್ಲಿ **ಕೌನ್ಸಿಲ ಆಕ್ಟು** ಪಾಸಾಗಿ ಮುಂಬಯಿ, ಮದ್ರಾಸ ಇವುಗಳ ಗವ್ಹರ್ನರರ ನೆರವಿಗೆ **ಪ್ರಾಂತಿಕ ಕಾಯದೆ ಮಂಡಲಗಳೂ** ವ್ಹಾಯಿಸರಾಯನ ನೆರವಿಗೆ **ವರಿಷ್ಠ ಕಾಯದೆ ಮಂಡಲವೂ** ಉಂಟಾದವು ಈ ಮಂಡಲಗಳಲ್ಲಿ ಸರಕಾರದ ನವಕರರಲ್ಲದೆ ಕೆಲವರನ್ನೂ ನಿಯಮಿಸಿಕೊಳ್ಳಬೇಕೆಂದು ಗೊತ್ತಾಯಿತು ೩. **ಹೊಸ ಕರಗಳು—** ಬಂಡಾಯವನ್ನು ಅಡಗಿಸುವ ಕೆಲಸಕ್ಕೆ ೪೦ಕೋಟಿ ರೂ. ವೆಚ್ಚವಾದವು; ಸೈನ್ಯದ ಸುಧಾರಣೆಗಾಗಿ ೧೦ ಕೋಟಿ ರೂ, ಹೆಚ್ಚಿಗೆ ಬೇಕಾಗ ಹತ್ತಿದವು. ಈ ಹಣವನ್ನು ಒದಗಿಸಿಕೊಳ್ಳುವದಕ್ಕಾಗಿ **ಉತ್ಪನ್ನದ ಮೇಲಿನ ಕರ** (ಇನ್‌ಕಮ್ ಟ್ಯಾಕ್ಸ) ವು ಎತ್ತಲಾರಂಭವಾಯಿತು. ೪. ಈಗ ನಾವು ಹಣದಂತೆ ಬಳಸುವ **ನೋಟು**ಗಳು ಕ್ಯಾನಿಂಗನ ಕಾಲದಲ್ಲಿಯೇ ಹೊರಡ ಹತ್ತಿದವು. ೫ **ಸೈನ್ಯದ ಸುಧಾರಣೆ—** ಬಂಡಾಯವಾಗುವ ಮೊದಲು ಹಿಂದೀ ಮತ್ತು ಯುರೋಪಿಯನ್ ಸೈನಿಕರ ಪ್ರಮಾಣವು ೫ : ೧ ಇದ್ದಿತು. ಕ್ಯಾನಿಂಗನು ಯುರೋಪಿಯನ ಸೈನಿಕರ ಸಂಖ್ಯೆಯನ್ನು ಹೆಚ್ಚಿಸಿ ಉತ್ತರ ಹಿಂದುಸ್ತಾನದಲ್ಲಿ ಈ ಪ್ರಮಾಣವು ೨ : ೧ ಮತ್ತು ದಕ್ಷಿಣ ಹಿಂದುಸ್ತಾನದಲ್ಲಿ ೩ : ೧ ಇರತಕ್ಕದ್ದೆಂದೂ ತೋಫುಖಾನೆಯ ವ್ಯವಸ್ಥೆಯನ್ನು ಯುರೋಪಿಯನರೇ ಮಾಡತಕ್ಕದ್ದೆಂದೂ ಗೊತ್ತುಮಾಡಿದನು. ಈ ವ್ಯವಸ್ಥೆಯಿಂದ ಸೈನ್ಯದ ವೆಚ್ಚವು ಹೆಚ್ಚಿತು. ೬. **ಬಂಗಾಲ ಟೆನನ್ಸಿ ಆಕ್ಟ—** ಈ ಕಾಯದೆಯ ಮೂಲಕ ಬಂಗಾಲದ ಜಮೀನದಾರರು ಒಕ್ಕಲಿಗರಿಂದ ಮನಬಂದಂತೆ ಹಣ ಹೀರಿಕೊಳ್ಳುವದು ತಪ್ಪಿತು.



ಹಿಂದೀ ಸೈನ್ಯದ ಕುದುರೆಯ ಸವಾರರು



ಬ್ರಿಟಿಷ ಸೈನಿಕರು

೫. **ಕ್ಯಾನಿಂಗನ ಯೋಗ್ಯತೆ**:— ಡಾಲಹೌಸಿಯು ಹೋದಬಳಿಕ ಉಂಟಾದ ಕೆಟ್ಟ ಪರಿಸ್ಥಿತಿಯನ್ನು ಜಾಣತನದಿಂದ ಸುಧಾರಿಸಿದವನು ಈ ಕ್ಯಾನಿಂಗನು. ಹಲವು ಇಂಗ್ಲಿಷರು ಬಂಡುಗಾರರ ಸೇಡು ತೀರಿಸಿಕೊಳ್ಳಬೇಕೆಂದು ಹಾತೊರೆಯುತ್ತಿರಲು, ದಯಾಳುವಾದ ಇವನು ಅವರನ್ನು ತಡೆದು ಶಾಂತತೆಯ ಮತ್ತು ಜಾಣತನದ ಉಪಾಯಗಳಿಂದ ಜನರ ಮನಸ್ಸನ್ನು ಸಮಾಧಾನಬಡಿಸಿದನು. ರಾಣಿಯವರ ಜಾಹೀರನಾಮೆಯ ಮೂಲಕ ಕೊಟ್ಟ ಅಭಿವಚನಗಳನ್ನು ಹಿಂದೀಜನರು ತಟ್ಟನೆ ನಂಬಲು ಕ್ಯಾನಿಂಗನ ಒಳ್ಳೆಯ ಆಳಿಕೆಯೇ ಕಾರಣವಾಯಿತೆಂದು ಹೇಳಬಹುದು. ಕ್ರಿ. ಶ **೧೮೬೨**ರಲ್ಲಿ ಇವನು ಕೆಲಸಬಿಟ್ಟು ತನ್ನ ದೇಶಕ್ಕೆ ಹೋದನು.

---

## ೨೧ನೆಯ ಪಾಠ

### ಕ್ಯಾನಿಂಗನ ತರುವಾಯದ ನಾಲ್ವರು ವ್ಹಾಯಿಸರಾಯರು

( ಕ್ರಿ. ಶ. **೧೮೬೨—೧೮೮೬** )

೧. **ಲಾರ್ಡ ಎಲ್ಗಿನ್** :— ಕ್ರಿ. ಶ. **೧೮೬೨-೧೮೬೩.** ಕ್ಯಾನಿಂಗನ ಬಳಿಕ ಲಾರ್ಡ ಎಲ್ಗಿನನು ವ್ಹಾಯಿಸರಾಯನಾದನು. ಇವನು ಈ ದೇಶಕ್ಕೆ ಬಂದು ಒಂದು ವರ್ಷದೊಳಗಾಗಿಯೆ ಸತ್ತನು. ಇವನ ಕಾಲದಲ್ಲಿ ಪಂಜಾಬದ ವಹಾಬಿ ಎಂಬ ಮುಸಲ್ಮಾನರು ದಂಗೆ ಎಬ್ಬಿಸಿದರು. ಅದನ್ನು ಸೇನಾಪತಿ ಹ್ಯೂರೋಜನು ಮುರಿದನು

೨. **ಲಾರ್ಡ ಲಾರೇನ್ಸ** :— **೧೮೬೪—೧೮೬೯.** ಪಂಜಾಬದ ಗವ್ಹರ್ನರನಾಗಿದ್ದ **ಲಾರೇನ್ಸ**ನು ಎಲ್ಗಿನನ ತರುವಾಯ ವ್ಹಾಯಿಸರಾಯನಾದನು. ಇವನ ಕಾಲದಲ್ಲಿ ಮುಖ್ಯವಾಗಿ ಭೂತಾನದ ಯುದ್ಧವೂ ಒಡಿಸಾ-ರಾಜಪುತಾನ, ಬುಂದೇಲ ಖಂಡಗಳ ಬರಗಳೂ ಒದಗಿದವು. **ಭೂತಾನದ ಯುದ್ಧ**- ಕ್ರಿ. ಶ. **೧೮೬೪.** ಆಸಾಮು, ಭೂತಾನ ಇವುಗಳ ನಡುವೆ ಇರುವ ಘಟ್ಟದ ಸೀಮೆಯ ಒಡೆತನದ ವಿಷಯವಾಗಿ ಇಂಗ್ಲಿಷರಿಗೂ ಭೂತಾನದವರಿಗೂ ತಿಕ್ಕಾಟ ನಡೆಯಿತು. ಇಂಗ್ಲಿಷರು **ಏಡನ್** ಎಂಬುವನನ್ನು ಆಲೋಚನೆಗಾಗಿ ಭೂತಾನದವರ ಕಡೆಗೆ ಕಳುಹಿದನು. ಆದರೆ ಅಲ್ಲಿ ಆದ ಕರಾರುಗಳು ಸಮಾಧಾನಕರ

ವಾದವುಗಳಿಲ್ಲದ್ದರಿಂದ ಲಾರೇನ್ಸನು ಭೂತಾನದ ಮೇಲೆ ದಂಡು ಕಳುಹಿದನು. ಆಗ ಭೂತಾನದವರು ಸೋತು ಒಪ್ಪಂದ ಮಾಡಿಕೊಂಡರು. ಭೂತಾನದವರು **ದ್ವಾರ್ಸ** ಎಂಬ ಪ್ರಾಂತವನ್ನು ಇಂಗ್ಲಿಷರಿಗೆ ಕೊಟ್ಟು ಅವರಿಂದ ೫ ಸಾವಿರ ಪೌಂಡುಗಳನ್ನು ತೆಗೆದುಕೊಳ್ಳಬೇಕೆಂದು ಗೊತ್ತಾಯಿತು. **ಒಡಿಸಾ ಪ್ರಾಂತದ ಬರ**— ಕ್ರಿ. ಶ. ೧೮೬೫ರಲ್ಲಿ ಒಡಿಸಾ ಪ್ರಾಂತದಲ್ಲಿ ಮಳೆ ಹೋಗಿ ಅತಿ ಭಯಂಕರವಾದ ಬರಬಿದ್ದಿತು. ೨೦ ಲಕ್ಷ ಜನರು ಜೀವಕ್ಕೆ ಎರವಾದರು. **ರಾಜಪುತಾನಾ ಬುಂದೇಲಖಂಡಗಳ ಬರ**— ಕ್ರಿ. ಶ. ೧೮೬೮ರಿಂದ ೧೮೬೯ರ ವರೆಗೆ ಈ ಎರಡು ಪ್ರಾಂತಗಳಲ್ಲಿ ಬರಬೀಳಲು ಜನರ ಕಷ್ಟಗಳನ್ನು ತಪ್ಪಿಸುವದಕ್ಕಾಗಿ ಸರಕಾರದವರು ಬಹಳ ಹಣ ವೆಚ್ಚಮಾಡಿದರು. **ಶೇರಅಲಿಯ ಕೂಡ ಸ್ನೇಹದ ಬಳಿಕೆ**— ಕ್ರಿ. ಶ. ೧೮೬೩ರಲ್ಲಿ ದೋಸ್ತಮಹಮದನು ಸತ್ತಬಳಿಕ ಅವನ ಮಕ್ಕಳಲ್ಲಿ ಅವನ ಪ್ರೀತಿಯವನಾದ **ಶೇರಅಲಿಯು** ಅರಸನಾದನು. ಆಗ ಲಾರೇನ್ಸನು ಅವನನ್ನು ಅಭಿನಂದಿಸಿ, ೬ ಲಕ್ಷ ರೂ. ಗಳನ್ನು ಕೊಟ್ಟು ಅವನೊಡನೆ ಸ್ನೇಹವನ್ನು ಸಂಪಾದಿಸಿದನು. **ಸುಯೇಜದ ಕಾಲುವೆ**— ಫ್ರೇಂಚ ಇಂಜನಿಯರನಾದ ಲೆಸೆಪ್ಸನು ಈ ಕಾಲುವೆಯ ಕೆಲಸವನ್ನು ಕ್ರಿ ಶ. **೧೮೬೯**ರಲ್ಲಿ ಮುಗಿಸಿದನು. ಅಂದಿನಿಂದ ಹಿಂದುಸ್ಥಾನದ ಬಂದರಗಳಿಂದ ಹೊರಟ ಹಡಗಗಳು ನೆಟ್ಟಗೆ ಇಂಗ್ಲಂಡ ಮೊದಲಾದ ಯುರೋಪದ ದೇಶಗಳಿಗೆ ಹೋಗಹತ್ತಿದವು. **ಪಂಜಾಬ ಟೆನನ್ಸೀ ಆಕ್ಟ** ಮತ್ತು **ಅಯೋಧ್ಯಾ ರೆಂಟ ಆಕ್ಟ**— ರೈತರ ಹಿತಕ್ಕಾಗಿ ಈ ಎರಡು ಕಾಯದೆಗಳು ಪಾಸಾದವು. ಇವನು ಹೋದ ಬಳಿಕ ಲಾರ್ಡ **ಮೇಯೋ**ನು ವ್ಹಾಯಿಸರಾಯನಾಗಿ ಬಂದನು.

೩. **ಲಾರ್ಡ ಮೇಯೋ**:— ಕ್ರಿ. ಶ. **೧೮೬೯-೧೮೭೨** ಇವನು ಬಂದ ವರುಷವೆ ಅಫಗಾಣಿಸ್ಥಾನದ ಅಮೀರ ಶೇರ ಅಲಿಯನ್ನು ಬರಮಾಡಿಕೊಂಡು, **ಅಂಬಾಲಾ**ದಲ್ಲಿ ದರಬಾರವನ್ನು ನೆರೆಯಿಸಿ, ಅವನಿಗೆ ಬಹುಮಾನ ಮಾಡಿದನು. ಆಗ ಅಮೀರನು, ಯಾರ ಪರಚಕ್ರಗಳು ಬಂದರೂ ಇಂಗ್ಲಿಷರ ನೆರವು ದೊರೆಯುವ ಹಾಗಿದ್ದಲ್ಲಿ ತಾನು ಸ್ನೇಹದಿಂದ ಇರುವೆನು ; ಎಂದನು. ಮೇಯೋನು ರಶಿಯದ ವಿರುದ್ಧವಾಗಿ ಮಾತ್ರ ತಮಗೆ ಇಂಗ್ಲಿಷರ ನೆರವು ಸಿಗುವದು ಶಕ್ಯವಿದೆ; ಎನ್ನಲು ಅಮೀರನು ಸಮಾಧಾನ ಹೊಂದದೆ ಹೊರಟು ಹೋದನು.

ಖರ್ಚಿನ ಮಾನದಿಂದ ಉತ್ಪನ್ನವು ಕಡಿಮೆ ಇದ್ದುದರಿಂದ ಮೇಯೋನು ಉತ್ಪನ್ನದ ಮೇಲಿನ ಕರವನ್ನೂ ಉಪ್ಪಿನ ಕರವನ್ನೂ ಹೆಚ್ಚಿಸಿ ಜಮಾಖರ್ಚು ಬಾಯಿಗೂಡುವಂತೆ ಮಾಡಿದನು. ಪ್ರಾಂತಿಕ ಸರಕಾರಗಳ ಕಡೆಗೆ ಕೆಲಕೆಲವು ಖಾತೆಗಳ ವ್ಯವಸ್ಥೆಯನ್ನು ಒಪ್ಪಿಸಿದನು. ಒಕ್ಕಲತನದ ಖಾತೆಯನ್ನು ಏರ್ಪಡಿಸಿದನು. ದೇಶೀಯ ಅರಸರ ಮಕ್ಕಳ ಶಿಕ್ಷಣಕ್ಕಾಗಿ **ಅಜಮೀರ** ದಲ್ಲಿ **'ಮೇಯೋ ಕಾಲೇಜು'** ಉಂಟಾಯಿತು. ಇವನು ಕ್ರಿ. ಶ. **೧೮೭೨**ರಲ್ಲಿ **ಅಂದಮಾನ** ವನ್ನು ನೋಡಹೋದಾಗ ಒಬ್ಬ ಸೆರೆಯಾಳು ಇವನನ್ನು ಇರಿದು ಕೊಂದನು.

**೪. ಲಾರ್ಡ ನಾರ್ಥಬ್ರೂಕ್**:— ಕ್ರಿ. ಶ. **೧೮೭೨ - ೧೮೭೬.** ಮೇಯೋನ ತರುವಾಯ ಲಾರ್ಡ **ನಾರ್ಥಬ್ರೂಕನು** ವ್ಹಾಯಿಸರಾಯನಾದನು. ಕ್ರಿ ಶ. **೧೮೭೪**ರಲ್ಲಿ ಬಂಗಾಲದಲ್ಲಿ ದೊಡ್ಡ ಬರಬೀಳಲು, ಇವನು ೮ ಕೋಟಿ ರೂ ವೆಚ್ಚಮಾಡಿ ರೇಲ್ವೆ, ಕಾಲುವೆ ಮುಂತಾದ ಕೆಲಸಗಳನ್ನು ಒದಗಿಸಿಕೊಟ್ಟು ಜನರ ಜೀವ ಉಳಿಸಿದನು. ಬಡೋದೆಯ **ಮಲ್ಹಾರರಾಯನು** ದುರ್ವ್ಯಸನಿಯೂ ಪ್ರಜೆಗಳನ್ನು ಪೀಡಿಸುವವನೂ ಆಗಿದ್ದದರಿಂದ ವ್ಹಾಯಿಸ-ರಾಯನು ಅವನಿಗೆ ಚೆನ್ನಾಗಿ ಕಾರಭಾರ ಸಾಗಿಸಬೇಕೆಂದು ಎಚ್ಚರಿಸಿದನು. ಆದರೆ ಮಲ್ಹಾರರಾಯನು ದಾರಿಗೆ ಬರಲಿಲ್ಲ. ಆದನರಿಂದ ನಾರ್ಥಬ್ರೂಕನು ಅವನನ್ನು ಪಟ್ಟದಿಂದ ತೆಗೆದು, ಅವನಿಗೆ ದತ್ತಕ ಮಾಡಿಕೊಳ್ಳಲು ಅಪ್ಪಣೆ ಕೊಟ್ಟು, ಸಯಾಜಿರಾಯನನ್ನು ಪಟ್ಟಕ್ಕೆ ಕುಳ್ಳಿರಿಸಿದನು. ಕ್ರಿ ಶ ೧೮೭೫ ಈ ಪ್ರಸಂಗದಿಂದ ಇಂಗ್ಲಿಷ ಸರಕಾರದ ಧೋರಣೆಯ ವಿಷಯವಾಗಿ ಸಂಸ್ಥಾನಿಕರ ಮನಸ್ಸಿನ ಅಲ್ಪ ಸ್ವಲ್ಪ ಸಂಶಯವೂ ಬಡಲಾಯಿತು. ಇದೇ ವರುಷ ಆಗಿನ ಪ್ರಿನ್ಸಆಫ್ ವೇಲ್ಸರಾದ **ಏಳನೆಯ ಎಡ್ವರ್ಡರು** ಈ ದೇಶಕ್ಕೆ ಬಂದು ಜನರು ರಾಜನಿಷ್ಠರಾಗಿರುವದನ್ನು ಕಂಡು ಸಂತೋಷವನ್ನು ವ್ಯಕ್ತಪಡಿಸಿದರು. ಮೇಯೋನ ಕಾಲದಲ್ಲಿಯ ಪ್ರಾಪ್ತಿಯ ಮೇಲಿನ ಕರವನ್ನು ನಾರ್ಥಬ್ರೂಕನು ತೆಗೆದು ಹಾಕಿದನು ಕ್ರಿ. ಶ ೧೮೭೪ರಲ್ಲಿ ಉದಾರಮತದ **ಗ್ಲಾಡಸ್ಟನನ** ಪಕ್ಷವು ಹಿಮ್ಮೆಟ್ಟಿ ಸಾಮ್ರಾಜ್ಯವಾದಿಯಾದ **ಡಿಝುರೇಲಿ**ಯು ಮುಖ್ಯ ಮಂತ್ರಿಯಾದನು. ಇವನ ಧೋರಣೆಯಂತೆ ಆಗಿನ ಸ್ಟೇಟ ಸೆಕ್ರೆಟರಿ (ಭಾರತಮಂತ್ರಿ) ಯು ಅಫಗಾಣಿಸ್ತಾನದಲ್ಲಿ ತನ್ನ ವಕೀಲನನ್ನು ಇಡುವ ಪ್ರಯತ್ನ ಮಾಡ-ಬೇಕೆಂದೂ ಹಿಂದುಸ್ತಾನದಲ್ಲಿ ಬರುವ ಸರಕಿನ ಮೇಲೆ ೧೦೦ಕ್ಕೆ ೫ರಂತೆ

ಇದ್ದ ಕರವನ್ನು ಸಹ ತೆಗೆದುಹಾಕಬೇಕೆಂದೂ ಬರೆದನು. ಈ ಎರಡೂ ವಿಚಾರಗಳು ನಾರ್ಥಬ್ರೂಕನಿಗೆ ಸರಿದೋರಲಿಲ್ಲ. ಮುಂದೆ ತುಸು ದಿವಸಗಳಲ್ಲಿ ಇವನು ಮೈಯಲ್ಲಿ ಸ್ವಸ್ಥತೆಯಿಲ್ಲದಂತಾದ ನೆವದಿಂದ ರಾಜೀನಾಮೆಯನ್ನು ಕೊಟ್ಟು ಹೊರಟು ಹೋದನು. ಕ್ರಿ. ಶ. **೧೮೭೬.**

---

## ೨೨ ನೆಯ ಪಾಠ

**ಲಾರ್ಡ ಲಿಟನ್** (ಕ್ರಿ. ಶ. ೧೮೭೬-೧೮೮೦) **ಲಾರ್ಡ ರಿಪನ್** (ಕ್ರಿ. ಶ. ೧೮೮೦ ೧೮೮೪)

**ಲಾರ್ಡ ಡಫರೀನ್** (ಕ್ರಿ. ಶ. ೧೮೮೪-೧೮೮೮)

**೧. ಲಾರ್ಡ ಲಿಟನ್**:— ಕ್ರಿ. ಶ. **೧೮೭೬–೧೮೮೦.** ಡಿಝ್ರೇಲಿಯ ಪಕ್ಷದ ಲಾರ್ಡ **ಲಿಟನನು** ನಾರ್ಥಬ್ರೂಕನ ತರುವಾಯ ವ್ಹಾಯಿಸರಾಯನಾದನು. ಇವನ ಕಾಲದಲ್ಲಿ ಕ್ರಿ. ಶ. **೧೮೭೬-೧೮೭೭** ರ ವರೆಗೆ ದಕ್ಷಿಣ ಹಿಂದುಸ್ತಾನದಲ್ಲಿ ಬಹಳ ಭಯಂಕರವಾದ ಬರಬಿದ್ದಿತು. ಸರಕಾದವರೂ ಈ ದೇಶದ ಮತ್ತು ಇಂಗ್ಲಂಡದ ಧನಿಕರೂ ಜನರನ್ನು ಉಳಿಸಲು ಬಹಳ ಹಣ ವೆಚ್ಚ ಮಾಡಿದರು ಆದರೂ ೫೦ ಲಕ್ಷ ಜನರು ಸಾವಿಗೆ ತುತ್ತಾದರು. ಆಯತ ಹೊತ್ತಿಗೆ ಕೈಕೊಂಡ ಉಪಾಯಗಳಿಂದ ಬಂದ ಬಾಧೆಯನ್ನು ತಪ್ಪಿಸುವದು ಆಗವೆಂದು ಅನುಭವ ಬಂದದರಿಂದ ಬರದ ನಿವಾರಣಕ್ಕಾಗಿ ಒಂದು ಯೋಜನೆಯು ಗೊತ್ತು ಮಾಡಲ್ಪಟ್ಟಿತು. ಇದರಿಂದ **೧.** ಪ್ರತಿವರ್ಷ ೧॥ ಕೋಟಿ ರೂಪಾಯಿಗಳನ್ನು ಬರದ ನಿವಾರಣಕ್ಕಾಗಿ ತೆಗೆದಿಡಬೇಕು **೨.** ಬರ ಬಿದ್ದ ಭಾಗದಲ್ಲಿ ತೆರಿಗೆಯನ್ನು ಕಟ್ಟುಮಾಡಬೇಕು. **೩.** ಬರಗಾಲದಲ್ಲಿ ಕೆರೆ ಕಾಲುವೆ ರೇಲ್ವೆ, ಮುಂತಾದ ಕೆಲಸಗಳನ್ನು ಮಾಡಿಸಬೇಕು **೪.** ಧರ್ಮಾರ್ಥ ಔಷಧಾಲಯಗಳನ್ನು ಇಡಬೇಕು. ಎಂದುಗೊತ್ತಾಯಿತು. ಕ್ರಿ-ಶ. **೧೮೭೭ನೆಯ ಜನೆವರಿ ೧ನೆಯ** ತಾರೀಖಿನ ದಿನ **ದಿಲ್ಲಿಯಲ್ಲಿ** ದೊಡ್ಡ ದರಬಾರವು ನೆರೆದು, **ವ್ಹಿಕ್ಟೋರಿಯಾ** ಮಹಾರಾಣಿಯವರು **"ಹಿಂದುಸ್ಥಾನದ ಚಕ್ರವರ್ತಿನಿ"** ಎಂಬ ಬಿರುದನ್ನು ಧರಿಸಿದ ಸಂಗತಿಯು ಜನರಿಗೆಲ್ಲ ತಿಳಿಯಿತು. ಹಿಂದುಸ್ಥಾನಕ್ಕೆ ಹೊರಗಿನಿಂದ ಬರುವ ಬಟ್ಟೆಗಳ ಮೇಲೆ ೧೦೦ಕ್ಕೆ ೫ರಂತೆ ಇದ್ದ

ಕರವು ತೆಗೆದುಹಾಕಲ್ಪಟ್ಟಿತು. **ಆರ್ಮ್ಸ ಆಕ್ಟ (ಶಸ್ತ್ರಗಳ ಕಾಯಿದೆ)** ಪಾಸಾಗಿ ಜನರು ನಿಶ್ಶಸ್ತ್ರರಾಗಿ ಮಾಡಲ್ಪಟ್ಟರು **ಪ್ರೆಸ್ ಆಕ್ಟ್** ಆಗಿ ವರ್ತಮಾನಪತ್ರ ಕರ್ತರ ಮೇಲೆ ಹಲವು ಪ್ರತಿಬಂಧಗಳು ಉಂಟಾದವು.

**೨. ಅಫಗಾಣಿಸ್ಥಾನದ ಎರಡನೆಯ ಯುದ್ಧ :— ಕ್ರಿ. ಶ. ೧೮೭೮-೧೮೮೦. ಕಾರಣಗಳು**— ಲಿಟನನು ಅಫಗಾನದ ಅಮೀರನಾದ ಷೇರಅಲಿಗೆ ಪತ್ರ ಬರೆದು, ಇಂಗ್ಲಿಷರ ವಕೀಲನನ್ನು ಕಾಬೂಲದಲ್ಲಿ ಇಟ್ಟುಕೊಳ್ಳಬೇಕೆಂದು ತಿಳಿಸಿದನು. ಅದಕ್ಕೆ ಅಮೀರನು ಒಪ್ಪಲಿಲ್ಲ ಇದೇ ಹೊತ್ತಿಗೆ, ಅಮೀರನು ಬೇಡೆಂದರೂ ರಶಿಯದ ವಕೀಲನು ಒಂದು ವರ್ಷದ ವರೆಗೆ ಕಾಬೂಲ ದಲ್ಲಿದ್ದನು. ಅದೇ ಮೇರೆಗೆ ಲಿಟನನು ಕಳುಹಿದ ಚೇಂಬರಲೇನ ಎಂಬವನಿಗೆ ಮಾತ್ರ ಅಮೀರನ ಕಡೆಯವರು ದಾರಿಯನ್ನು ಕೊಡಲಿಲ್ಲ. **ಯುದ್ಧ**— ಈ ಕಾರಣಗಳಿಂದ ಲಿಟನನು ಖೈಬರ, ಖುರಮ, ಬೋಲನ ಈ ಘಟ್ಟಗಳ ಮಾರ್ಗ ವಾಗಿ ಅಫಗಾನಿಸ್ಥಾನದ ಮೇಲೆ ಸೈನ್ಯ ಕಳುಹಿದನು. ಇದನ್ನು ಕಂಡು ಷೇರ ಅಲಿಯು ರಶಿಯದ ಸಹಾಯವನ್ನು ಪಡೆಯಲು ಹವಣಿಸಿ, ಅದು ಸಿಗದಿರಲು ಓಡಿಹೋದನು. ಅವನ ಹಿಂದೆ ಇಂಗ್ಲಿಷರು ಕಾಬೂಲವನ್ನು ವಶಮಾಡಿ ಕೊಂಡು, ಷೇರಅಲಿಯ ಮಗನಾದ **ಯಾಕೂಬಖಾನ**ನನ್ನು ಪಟ್ಟಗಟ್ಟಿ, ಅವನೊಡನೆ ತಮಗೆ ಅನುಕೂಲವಾಗುವಂತೆ ಒಪ್ಪಂದ ಮಾಡಿಕೊಂಡರು. ಇವನ್ನೆಲ್ಲ ನೋಡುತ್ತ ೫-೬ ತಿಂಗಳುಗಳ ವರೆಗೆ ಸುಮ್ಮನಿದ್ದ ಅಫಗಾನರು ಒಮ್ಮೆಲೆ ಇಂಗ್ಲಿಷರ ಮೇಲೆ ಬಿದ್ದು ರೆಸಿಡೆಂಟನನ್ನೂ ಅವನ ಸಂಗಡಿಗರೆಲ್ಲರನ್ನೂ ಕೊಂದುಬಿಟ್ಟರು. ಆಗ ಲಾರ್ಡ **ರಾಬರ್ಟ್ಸನ** ಕೈಕೆಳಗೆ ಇಂಗ್ಲಿಷರ ಹೊಸ ದಂಡು ಕಾಬೂಲದ ಮೇಲೆ ಸಾಗಿತು. ರಾಬರ್ಟ್ಸನು ಕಾಬೂಲದಲ್ಲಿ ತನ್ನ ಅಧಿ ಕಾರವನ್ನು ನೆಲೆಸಿ, ಬಂಡುಗಾರರನ್ನು ಕೂಡಿದವನೆಂದು ತಿಳಿದು ಯಾಕೂಬ ಖಾನನನ್ನು ಸೆರೆಹಿಡಿದು, **ಅಬ್ದುಲ್ ರಹಮಾನಖಾನ** ಎಂಬವನನ್ನು ಅಮೀರ ನನ್ನು ಮಾಡಿದನು.

ಇಷ್ಟರಲ್ಲಿ ಅಫಗಾಣಿಸ್ಥಾನದಲ್ಲಾದ ಅನರ್ಥದ ಸುದ್ದಿಯನ್ನು ಕೇಳಿ, ಇಂಗ್ಲಂಡದ ಲೋಕಮತವು ಡಿಝುರೇಲಿಯ ವಿರುದ್ಧವಾಯಿತು. ಆಗ ಅವನ ಪಕ್ಷವು ಹಿಮ್ಮೆಟ್ಟಿ ಕ್ರಿ. ಶ. **೧೮೮೦** ರಲ್ಲಿ ಮತ್ತೆ ಗ್ಲ್ಯಾಡಸ್ಟನನು ಮುಖ್ಯ ಮಂತ್ರಿ

ಯಾದನು. ಕೂಡಲೆ, ಲಿಟನನು ಇನ್ನು ತನ್ನ ಆಟ ಸಾಗದೆಂದು ತಿಳಿದು ರಾಜೀನಾಮೆ ಕೊಟ್ಟು ಹೊರಟುಹೋದನು. ಆಗ ಗ್ಲ್ಯಾಡಸ್ಟನನು ಉದಾರ ಮತದ ಲಾರ್ಡ **ರಿಪನ**ನನ್ನು ವ್ಹಾಯಿಸರಾಯನ ಕೆಲಸಕ್ಕೆ ಆರಿಸಿದನು.

೩. **ಲಾರ್ಡ ರಿಪನ್** :-- ಕ್ರಿ. ಶ. ೧೮೮೦-೮೪. **ಅಫಗಾನ ಯುದ್ಧದ ಕೊನೆ**- ಯಾಕೂಬಖಾನನನ್ನು ಇಂಗ್ಲಿಷರು ಸೆರೆಹಿಡಿದದರಿಂದ ಅವನ ತಮ್ಮನಾದ **ಆಯುಬಖಾನ**ನು ದೊಡ್ಡ ದಂಡಿನೊಡನೆ ಬಂದು, ಜನರಲ್ **ಬರೋಜನ** ಕೈಕೆಳಗಿನ ಸೈನ್ಯವನ್ನು **ಮಯಿವಾಡ** ಎಂಬಲ್ಲಿ ಸೋಲಿಸಿದನು ಅದರಲ್ಲಿಯ ಕೆಲವು ಸೈನ್ಯವು ಪಾರಾಗಿ ಕಂದಾಹಾರಕ್ಕೆ ಓಡಿಬಂದಿತು. ಆಗ ರಾಬರ್ಟ್ಸನು ಕಾಬೂಲದಿಂದ ಕಂದಾಹಾರಕ್ಕೆ ಬಂದು ಅವನ್ನು ಸಂರಕ್ಷಿಸಿದನು. ಇದೇ ಸಮಯಕ್ಕೆ ಇಂಗ್ಲಂಡದ ಮಂತ್ರಿ ಮಂಡಲದವರು ಅಫಗಾಣಿಸ್ಥಾನದ ಯುದ್ಧವನ್ನು ಮುಗಿಸಬೇಕೆಂದು ತಿಳಿಸಿದರು. ಆದದರಿಂದ ರಿಪನನು ಬಂದಕೂಡಲೆ ಯುದ್ಧವನ್ನು ಮುಗಿಸಿ ಎಲ್ಲ ಇಂಗ್ಲಿಷ ಸೈನ್ಯವನ್ನು ಅಫಗಾಣಿಸ್ಥಾನದಿಂದ ಕರೆಯಿಸಿಕೊಂಡನು,

೪. **ರಿಪನನು ಮಾಡಿದ ಹಿತದ ಕೆಲಸಗಳು :— ೧. ಮೈಸೂರನ್ನು ಮರಳಿ ಕೊಟ್ಟದ್ದು:—** ಕ್ರಿ ಶ. ೧೮೩೧ ರಿಂದ ಮೈಸೂರ ರಾಜ್ಯಕಾರಭಾರವು ಇಂಗ್ಲಿಷರ ಕೈ ಸೇರಿದ್ದಿತು. ಕೃಷ್ಣರಾಜ ಒಡೆಯರ ದತ್ತಕ ಮಕ್ಕಳಾದ **ಚಾಮರಾಜ** ಒಡೆಯರು ಕ್ರಿ. ಶ ೧೮೮೧ರಲ್ಲಿ ವಯಸ್ಸಿಗೆ ಬಂದರು ಆದದರಿಂದ ಲಾರ್ಡ ರಿಪನನು ಮೈಸೂರ ರಾಜ್ಯವನ್ನು ಅವರಿಗೆ ಮರಳಿ ಒಪ್ಪಿಸಿದನು. **೨. ಮುದ್ರಣ ಸ್ವಾತಂತ್ರ್ಯ**— ಮೆಟಕಾಫನ ಕಾಲದಲ್ಲಿ ಕೊಡಲ್ಪಟ್ಟಿದ್ದ ಮುದ್ರಣ ಸ್ವಾತಂತ್ರ್ಯವನ್ನು ಲಿಟನನು ಕಸಿದುಕೊಂಡಿದ್ದನು. ಉದಾರನಾದ ರಿಪನನು ದೇಶೀಯ ವರ್ತಮಾನ ಪತ್ರಕರ್ತರ ಮೇಲಿನ ಈ ನಿರ್ಬಂಧಗಳನ್ನು ತೆಗೆದುಬಿಟ್ಟನು. **೩. ಸ್ಥಾನಿಕ ಸ್ವರಾಜ್ಯ—** ಈ ದೇಶದ ಸುಶಿಕ್ಷಿತರಿಗೆ ರಾಜ್ಯಕಾರಭಾರದ ಶಿಕ್ಷಣವು ದೊರೆಯಲೆಂದು, ಮ್ಯುನಿಸಿಪಲ್ ಆಕ್ಟ, ಲೋಕಲ್ ಫಂಡ ಆಕ್ಟ ಎಂಬ ಕಾಯದೆಗಳನ್ನು ಪಾಸುಮಾಡಿ, ಮುನಿಸಿಪ್ಯಾಲಿಟಿಗಳನ್ನೂ ಜಿಲ್ಹೆಯ ಲೋಕಲ್ ಬೋರ್ಡುಗಳನ್ನೂ ಸ್ಥಾಪಿಸಿದನು. **೪. ಶಿಕ್ಷಣದ ಏಳ್ಗೆ—** ಹಂಟರ ಕಮಿಟಿಯನ್ನು ನಿಯಮಿಸಿ ಅದರ ಸೂಚನೆಯಂತೆ

ಶಿಕ್ಷಣದ ಸುಧಾರಣೆಯನ್ನೂ ವಿಸ್ತಾರವನ್ನೂ ಮಾಡಿದನು. ೫. **ಇಲ್ಬರ್ಟ ಬಿಲ್**-"ಯುರೋಪಿಯನ್ ಅಪರಾಧಿಗಳ ವಿಚಾರಣೆಯನ್ನು ವರಿಷ್ಠ ಹಿಂದೀ ನ್ಯಾಯಾಧೀಶರು ಮಾಡಬಹುದು" ಎಂಬರ್ಥದ ಒಂದು ಮಸೂದೆಯನ್ನು **ಇಲ್ಬರ್ಟ** ಎಂಬವನು ಕೌನ್ಸಿಲಿನ ಮುಂದೆ ಇಟ್ಟನು. ಆಗ ಯುರೋಪಿಯನರು ಬಹಳ ಅಸಂತುಷ್ಟರಾಗಿ ಈ ಮಸೂದೆಯನ್ನು ವಿರೋಧಿಸಿದರು. ಕೊನೆಗೆ ಹಿಂದೀನ್ಯಾಯಾಧೀಶರು ವಿಚಾರಣೆ ನಡೆಸಿದ್ದಲ್ಲಿ ಯುರೋಪಿಯನ್ ಅಪರಾಧಿಗಳಿಗೆ ಜ್ಯೂರಿಯನ್ನು ಬೇಡಿಕೊಳ್ಳುವ ಅಧಿಕಾರ ಇರಬೇಕೆಂಬ ಸೂಚನೆಯೊಂದಿಗೆ ಆ ಮಸೂದೆಯು ಪಾಸಾಯಿತು.



ಲಾರ್ಡ ರಿಪನ್

೫. **ರಿಪನನ ಆಳಿಕೆಯ ಕೊನೆಯೂ ಯೋಗ್ಯತೆಯೂ:**— ಇವನು ಕ್ರಿ. ಶ. ೧೮೮೪ರಲ್ಲಿ ತನ್ನ ದೇಶಕ್ಕೆ ತೆರಳಿದನು. ಹಿಂದೀ ಜನರ ಏಳ್ಗೆಗಾಗಿ ಮನಮುಟ್ಟಿ ಪ್ರಯತ್ನಿಸಿದ್ದರಿಂದ ಜನರು ಇವನನ್ನು ಒಳ್ಳೆಯ ಆದರದಿಂದ ಕಾಣುತ್ತಿದ್ದರು. ಇವನು ತನ್ನ ದೇಶಕ್ಕೆ ಹೊರಟಿರುವಾಗ ಹಿಂದೀ ಜನರಿಂದ ಅಂತಃಕರಣ ಪೂರ್ವಕವಾದ ಮರ್ಯಾದೆಯನ್ನು ಹೊಂದಿದನು; ಅಲ್ಲದೆ 'ಲೋಕಪ್ರಿಯ ವ್ಹಾಯಿಸರಾಯ' ಎಂದು ಎನಿಸಿಕೊಂಡನು.

೬. **ಲಾರ್ಡ ಡಫರೀನ್:**— ಕ್ರಿ ಶ. ೧೮೮೪–೧೮೮೮. ಲೋಕಪ್ರಿಯನಾದ ರಿಪನನ ತರುವಾಯ ಲಾರ್ಡ **ಡಫರೀನನು** ವ್ಹಾಯಿಸರಾಯನಾದನು. ಇವನ ಕಾಲವಲ್ಲಿ ನಡೆದ ಮಹತ್ವದ ಸಂಗತಿಗಳು. **೧. ಬ್ರಹ್ಮದೇಶದ ೩ನೆಯ ಯುದ್ಧ**– ೧೮೮೫-೧೮೮೬. **ಕಾರಣಗಳು** :— ಬ್ರಹ್ಮದೇಶದಲ್ಲಿ ತೆಂಗಿನ ಎಳೆ ಮುಂತಾದವುಗಳ ವ್ಯಾಪಾರ ಮಾಡುತ್ತಿದ್ದ ಇಂಗ್ಲಿಷರಿಗೆ ಅವಶ್ಯವಿದ್ದ ಅನುಕೂಲಗಳನ್ನು ಆವಾದ **ಥೀಬಾ** ಅರಸನು ಒದಗಿಸಿಕೊಡುತ್ತಿರಲಿಲ್ಲ. ಆಗ ಆ ವ್ಯಾಪಾರಸ್ಥರು ತಮ್ಮ ತಕರಾರುಗಳನ್ನು ಡಫರೀನನಿಗೆ ತಿಳಿಸಿದರು.

ಡಫರೀನನು ವ್ಯಾಪಾರಸ್ಥರ ಬೇಡಿಕೆಗಳನ್ನು ಪೂರೈಸುವ ವಿಚಾರ ಮಾಡಬೇಕೆಂದು ಧೀಬಾನಿಗೆ ತಿಳಿಸಿದುದಕ್ಕೆ ಅವನಿಂದ ಉತ್ತರ ಬರಲಿಲ್ಲ. ಅಲ್ಲದೆ, ಅವನು ಫ್ರೇಂಚರೊಡನೆ ಸ್ನೇಹ ಬೆಳಿಸುವ ಪ್ರ ಯ ತ್ನ ಮಾಡುತ್ತಿದ್ದನು. **ಯುದ್ಧ** :— ಆದದರಿಂದ ಡಫರೀನನು ದಂಡು ಕಳುಹಲು, ಧೀಬಾನು ಯುದ್ಧದ ಸಿದ್ಧತೆಯನ್ನೇ ಮಾಡದೆ ಇದ್ದುದರಿಂದ ಯುದ್ಧವಾಗದೆ ಅವನು ಇಂಗ್ಲಿಷರ ಕೈಯಲ್ಲಿ ಸಿಕ್ಕನು. ಬ್ರಹ್ಮದೇಶವು ಖಾಲಸಾ ಆಗಿ ಧೀಬಾನು ಹೆಂಡರು ಮಕ್ಕಳೊಂದಿಗೆ ರತ್ನಾಗಿರಿಗೆ ಕಳುಹಲ್ಪಟ್ಟನು **೨. ರಾಷ್ಟ್ರ ಮಹಾಸಭೆಯ (ಕಾಂಗ್ರೆಸದ) ಉದಯ.**— ಕ್ರಿ ಶ. **೧೮೮೫.** ಹಿಂದುಸ್ತಾನದ ಮುಂದಾಳುಗಳಿಂದ ಪ್ರತಿವರ್ಷ ನೆರೆಯಿಸಲ್ಪಡುತ್ತಿರುವ ರಾಷ್ಟ್ರಮಹಾಸಭೆಯ ಮೊದಲನೆಯ ಅಧಿವೇಶನವು ಲಾರ್ಡ ಡಫರೀನನ ಕಾಲದಲ್ಲಿ ಮುಂಬಯಿಯಲ್ಲಿ ನೆರೆಯಿತು ಇದರಿಂದ ಹಿಂದೀ ಜನರ ಆಕಾಂಕ್ಷೆಗಳು ಸರಕಾರದವರಿಗೆ ತಿಳಿಯಲು ಅನುಕೂಲವಾಯಿತು. **೩. ವಾಯುವ್ಯ ಗಡಿಸೀಮೆಯ ರಕ್ಷಣೆ**— ಅಫಗಾಣಿಸ್ತಾನದ ಅಮೀರ, ರ ಶಿ ಯಾ, ಇಂಗ್ಲಿಷ ಇವರಲ್ಲಿ ಒಪ್ಪಂದವಾಗಿ **ಆಕ್ಸಸ** ಹೊಳೆಯು ರಶಿಯಾ, ಅಫಗಾಣಿಸ್ತಾನ ಇವುಗಳ ಮೇರೆಯೆಂದು ಗೊತ್ತಾದದರಿಂದ ರಶಿಯದ ದಾಳಿಯ ಹೆದರಿಕೆ ಕಡಿಮೆಯಾಯಿತು ಆ ಮೇಲೆ ಡಫರೀನನು ವಾಯುವ್ಯ ಗಡಿಸೀಮೆಯ ರಕ್ಷಣೆಯ ಕೆಲಸ ಕೈಕೊಂಡನು ಅಫಗಾಣಿಸ್ತಾನ, ಹಿಂದುಸ್ತಾನ ಇವುಗಳ ನಡುವೆ ಇರುವ ( ಸುಮಾರು ೨॥ ಸಾವಿರ ಚೌರಸ ಮೈಲು ) ಪ್ರದೇಶದಲ್ಲಿಯ **ಅಫ್ರೀಡಿ** ಮತ್ತು **ವಹಾಬಿ** ಎಂಬ ಜನರು ಹೊತ್ತುನೋಡಿ ಆಗಾಗ್ಗೆ ದಂಗೆ ಮಾಡುತ್ತಿದ್ದರು ಆದದರಿಂದ ಇವನು ರಾಬರ್ಟ್ಸನನ್ನು ಸೈನ್ಯದೊಡನೆ ಕಳುಹಿ ಆ ಶೀಮೆಯಲ್ಲಿ ಶಾಂತತೆಯನ್ನು ಉಂಟುಮಾಡಿದನು. **೪.** ಬಂಡಾಯದ ಕಾಲದಲ್ಲಿ ಬಂಡುಗಾರರ ಕೈಸೇರಿದ್ದ **ಗ್ವಾಲ್ಹೇರ** ಕೋಟೆಯನ್ನು ಇಂಗ್ಲಿಷರು ಗೆದ್ದುಕೊಂಡಿದ್ದರು ಅದನ್ನು ಡಫರೀನನು ಮರಳಿ ಸಿಂಧೆಗೆ ಕೊಟ್ಟನು. ಕ್ರಿ ಶ. **೧೮೮೬. ೫.** ರೇಲ್ವೆ ಕಂಪನಿಗಳ ಅವಧಿಯು ಮುಗಿದ ಕೂಡಲೆ ಅವನ್ನು ಸರಕಾರದ ವಶಕ್ಕೆ ತೆಗೆದುಕೊಳ್ಳಬೇಕೆಂದು **ಗೊತ್ತಾ**ಯಿತು. **೬.** ಕ್ರಿ. ಶ ೧೮೮೬ರಲ್ಲಿ ರಾಣಿಯವರ ೫೦ ವರ್ಷ ಆಳಿಕೆಯ **ಸುವರ್ಣ ಮಹೋತ್ಸವವು** ಜರುಗಿತು **೭. ಲೇಡಿ ಡಫರೀನಳ** ಇಚ್ಛೆಯಂತೆ ಸಂಸ್ಥಾನಿಕರಿಂದಲೂ

ಧನಿಕರಿಂದಲೂ ಕೂಡಿದ ಹಣದಿಂದ ಸ್ತ್ರೀಯರಿಗೋಸುಗ **ಔಷಧಾಲಯು** ಗಳನ್ನು ಸ್ಥಾಪಿಸುವ ವ್ಯವಸ್ಥೆಯಾತು.

---

# ೨೩ ನೆಯ ಪಾಠ

## ಲಾರ್ಡ ಲ್ಯಾನ್ಸಡೌನ್. ಲಾರ್ಡ ಎಲ್ಗಿನ್.

( ಕ್ರಿ. ಶ. ೧೮೮೮-೧೮೯೪ ) ( ಕ್ರಿ. ಶ ೧೮೯೪-೧೮೯೯ )

## ಲಾರ್ಡ ಕರ್ಝನ್. ( ಕ್ರಿ. ಶ. ೧೮೯೯-೧೯೦೫ )

**೧. ಲಾರ್ಡ ಲ್ಯಾನ್ಸಡಾವುನ್ :—** ಕ್ರಿ. ಶ. **೧೮೮೮—೧೮೯೪.** ಡಫರೀನನು ಕೆಲಸದಿಂದ ಬಿಡುಗಡೆಯಾಗಲು ಲಾರ್ಡ ಲಾನ್ಸಡಾವುನನು ವ್ಹಾಯಿಸರಾಯನಾಗಿ ಬಂದನು. ಇವನ ಕಾಲದಲ್ಲಿ ಕೆಳಗಿನ ಸಂಗತಿಗಳು ಮುಖ್ಯವಾಗಿ ವರ್ತಿಸಿದವು. **೧. ಮಣಿಪುರದ ದಂಗೆ**- ಕ್ರಿ. ಶ. **೧೮೯೦.** ಮಣಿಪುರವು ಚಿಕ್ಕ ಸಂಸ್ಥಾನವು. ಇದು ಬಂಗಾಲದ ಪೂರ್ವಕ್ಕೆ ಆಸಾಮುದ ನೆರೆಯಲ್ಲಿ ಗುಡ್ಡಗಾಡಿನಲ್ಲಿ ಇರುವದು. ಅಲ್ಲಿಯ ಸೇನಾಪತಿಯು ದಂಗೆಮಾಡಿ ಅರಸನನ್ನು ಓಡಿಸಲು ಅಲ್ಲಿಯ ಬಹುಜನರು ಅವನನ್ನು ಕೂಡಿದರು. ಇದನ್ನು ಕಂಡು ಕ್ವಿಂಟನನು ಸೈನ್ಯದೊಡನೆ ಮಣಿಪುರಕ್ಕೆ ದಂಗೆಯುನ್ನು ಅಡಗಿಸಹೋಗಿ ಅಲ್ಲಿ ಅವನ ಕೊಲೆಯಾಯಿತು. ಬಳಿಕ ಇಂಗ್ಲಿಷರು ಆ ಸೇನಾಪತಿಯುನ್ನು ಸೆರೆಹಿಡಿದು ಗಲ್ಲಿಗೆ ಏರಿಸಿದರು. ಮತ್ತು ಅರಸನ ಚಿಕ್ಕ ವಯಸ್ಸಿನ ಮಗನನ್ನು ಪಟ್ಟಗಟ್ಟಿದರು. **೨. ಕೌನ್ಸಿಲ್ ಆಕ್ಟ**- ಕ್ರಿ. ಶ. **೧೮೯೨.** ಪಾರ್ಲಿಮೆಂಟಿನಲ್ಲಿ ಪಾಸಾದ ಈ ಕಾಯಿದೆಯಿಂದ **ವರಿಷ್ಠ** ಮತ್ತು **ಪ್ರಾಂತಿಕ** ಮಂಡಲದಲ್ಲಿಯು ಸರಕಾರಿ ನವಕರರಲ್ಲದ ಸಭಾಸದರಿಂದ ಆರಿಸಲ್ಪಟ್ಟ ಪ್ರತಿನಿಧಿಗಳು ವರಿಷ್ಠ ಮಂಡಲದಲ್ಲಿಯೂ, **ಮ್ಯುನಿಸಿಪಾಲಿಟಿ, ಲೋಕಲ್ ಬೋರ್ಡು, ವಿಶ್ವವಿದ್ಯಾಲಯ** ಈ ಸಂಸ್ಥೆಗಳಿಂದ ಆರಿಸಲ್ಪಟ್ಟ ಪ್ರತಿನಿಧಿಗಳು ಪ್ರಾಂತಿಕ ಮಂಡಲದಲ್ಲಿಯೂ ಇರಬೇಕೆಂದು ಗೊತ್ತಾಯಿತು. ಅಲ್ಲದೆ ರಾಜ್ಯಕಾರಭಾದ ಸಂಬಂಧದ ಪ್ರಶ್ನೆಗಳನ್ನು ಕೇಳುವ ಮತ್ತು ಸರಕಾರಿ ಅಂದಾಜಪತ್ರಿಕೆಯ ಸಂಬಂಧದಿಂದ ಚರ್ಚೆ ಮಾಡುವ ಅಧಿಕಾರವು ಸಭಾಸದ

ರಿಗೆ ಉಂಟಾಯಿತು. ೩. **ವಾಯುವ್ಯ ಸೀಮೆಯ ಭದ್ರತೆ**— ಬೋಲನದ ವರೆಗೆ ರೇಲ್ವೆಯು ಹಾಕಲ್ಪಟ್ಟಿತು. ಲ್ಯಾನ್ಸಡಾವುನನು ಕಾಶ್ಮೀರದ ಪಶ್ಚಿಮಕ್ಕಿರುವ **ಗಿಲ್ಗಿಟ, ಚಿತ್ರಳ** ಈ ಠಾಣ್ಯಗಳನ್ನು ಕೈಸೇರಿಸಿಕೊಂಡು **ಹಿಂದುಕುಶ** ಪರ್ವತದ ಮಾರ್ಗವನ್ನು ಭದ್ರಪಡಿಸಿದನು. ಬಳಿಕ ಅಮೀರನನ್ನು ಸಮಾಧಾನಬಡಿಸಿ. ಆವನ ಒಪ್ಪಿಗೆಯಿಂದ ಚಿತ್ರಳ, ಸ್ವಾಟ, ಖೂರ್ನುವ್ಹ್ಯಾಲ್ಲಿ ವಜರಿಸ್ಥಾನ ಈ ಠಾಣ್ಯಗಳನ್ನು ಇಂಗ್ಲಿಷರ ಅಧಿಕಾರಕ್ಕೆ ಒಳಪಡಿಸಿಕೊಂಡನು.

೨. **ಲಾರ್ಡ ಎಲ್ಗಿನ್** :— ಕ್ರಿ. ಶ **೧೮೯೪-೧೮೯೮.** ಇವನ ಕಾಲದ ಮಹತ್ವದ ಸಂಗತಿಗಳು **೧.** ಹಣದ ಕೊರತೆಯ ಮೂಲಕ ಬರುವ ಸರಕಿನ ಮೇಲೆಯೂ ಈ ದೇಶದ ಗಿರಣಿಯ ಬಟ್ಟೆಯ ಮೇಲೆಯೂ ೧೦೦ಕ್ಕೆ ೫ರಂತೆ ಕರವು ಇಡಲ್ಪಟ್ಟಿತು. **೨.** ಕ್ರಿ. ಶ. **೧೮೯೪**ರಲ್ಲಿ ಮುಂಬಯಿ-ಪುಣೆಗಳಲ್ಲಿ ವಾದ್ಯಗಳ ಸಂಬಂಧದ ಜಗಳಹತ್ತಿ ಹಿಂದು-ಮುಸಲ್ಮಾನರಲ್ಲಿ ದಂಗೆಗಳಾದವು ಮತ್ತು ಕ್ರಿ. ಶ. **೧೮೯೫**ರಲ್ಲಿ ಮಲಬಾರದಲ್ಲಿ **ಮೋಪಲಾ** ಜನರು ದಂಗೆಯೆಬ್ಬಿಸಿ ಬಹಳ ಅನರ್ಥವನ್ನುಂಟುಮಾಡಿದರು. **೩.** ಕ್ರಿ. ಶ. ೧೮೯೬ರಲ್ಲಿ ಹಿಂದುಸ್ಥಾನದಲ್ಲೆಲ್ಲ ಬರಬಿದ್ದಿತು; **ಮುಂಬಯಿ, ಮದ್ರಾಸ** ಪ್ರಾಂತಗಳಲ್ಲಿಯ ಬರವಂತು ಬಹಳ ಭೀಕರವಾಗಿತ್ತು. ಸರಕಾರವು ಬರಗಾಲದ ಕೆಲಸಗಳನ್ನು ಹಚ್ಚಿದರೂ ಈ ಪ್ರಸಂಗದಲ್ಲಿ ಹತ್ತು ಲಕ್ಷ ಜನರು ಮರಣಹೊಂದಿದರು. **೪.** ಅದೇ ವರುಷ ಮುಂಬಯಿಯಲ್ಲಿ ಪ್ಲೇಗುಬೇನೆಯು ಹುಟ್ಟಿ, ದೇಶವನ್ನೆಲ್ಲ ಮುಸಕಿ, ಲಕ್ಷಗಟ್ಟಲೆ ಜನರನ್ನು ನಾಶಗೊಳಿಸಿತು ಆಗ ಈ ಬೇನೆಯ ಸ್ವರೂಪವು ಬಹಳೇ ಭಯಂಕರವಾಗಿತ್ತು. **೫.** ಸರಕಾರದ ಕಾರಭಾರದ ಮೇಲೆ ವರ್ತಮಾನಪತ್ರಕರ್ತರು ಮಾಡುವ ಟೀಕೆಗಳ ಪರಿಣಾಮವು ವಿಪರೀತವಾಗುವುದೆಂದು ತಿಳಿದು ಆವರ ಸಂಬಂಧದಿಂದ ಹಲವು ನಿರ್ಬಂಧಗಳುಂಟಾದವು **೬. ಬಂಗಾಲ, ಆಸಾಮ** ಪ್ರಾಂತಗಳಲ್ಲ ಭೂಕಂಪವಾಗಿ ಬಹಳ ಹಾನಿಯಾಯಿತಲ್ಲದೆ ಎಷ್ಟೋ ಜನರು ಜೀವಕ್ಕೆ ಎರವಾದರು. **೭.** ಕ್ರಿ. ಶ. **೧೮೯೭**ಕ್ಕೆ ರಾಣಿಯವರ ಆಳಿಕೆಗೆ **೬೦** ವರ್ಷಗಳಾದುದರಿಂದ **ಹೀರಕೋತ್ಸವವು** ಜರುಗಿಸಲ್ಪಟ್ಟಿತು. **೮.** ಕ್ರಿ. ಶ. **೧೮೯೫**ರಲ್ಲಿ ವಾಯವ್ಯ ಗಡಿಸೀಮೆಯ **ಚಿತ್ರಳ** ಎಂಬಲ್ಲಿ ಬಂಡಾಯವೆದ್ದಿತು. ಮತ್ತು ಮುಂದೆ ೨ ವರ್ಷಗಳ ತರುವಾಯ ಗಡಿಸೀಮೆಯ ತುಂಬ ದಂಗೆಗಳೆದ್ದವು. ದಂಗೆಗಾರರು

ಗುಂಪುಗುಂಪಾಗಿ ಗಂಟುಬಿದ್ದು ಇಂಗ್ಲಿಷ ಸೈನ್ಯವನ್ನು ಬಹಳ ಕಾಡಿದರು. ಇವರನ್ನು ಹಣಿಯುವ ಕೆಲಸದಲ್ಲಿ ಇಂಗ್ಲಿಷರ ೯೫ ಸಾವಿರ ದಂಡು ತೊಡಗಿಕೊಂಡಿದ್ದಿತು. ಕೊನೆಗೆ ಒಂದು ವರ್ಷ ಕಾದಿ ದಂಗೆಗಾರರು ತಣ್ಣಗಾಗಿ ಒಡಂಬಡಿಕೆ ಮಾಡಿಕೊಂಡರು. ಕ್ರಿ. ಶ. **೧೮೯೮.**

೩. **ಲಾರ್ಡ ಕರ್ಝನ್** :— ಕ್ರಿ. ಶ. ೧೮೯೮—೧೯೦೫. ಇವನು ಎಲ್ಜಿನನ ನಂತರ ವ್ಹಾಯಿಸರಾಯನಾದನು. ಮೊದಲು ಇವನು ಭಾರತ ಮಂತ್ರಿಯ ಸಹಾಯಕನಾಗಿ ಕೆಲಸ ಮಾಡಿದುದರಿಂದಲೂ ಹಿಂದುಸ್ಥಾನಕ್ಕೆ ನಾಲ್ಕುಸರತಿ ಬಂದುಹೋಗಿದ್ದುದರಿಂದಲೂ ಈ ದೇಶದ ಸ್ಥಿತಿಯನ್ನು ಚೆನ್ನಾಗಿ ಬಲ್ಲವನಾಗಿದ್ದನು. ಅಲ್ಲದೆ ಹೆಸರಾದ ಮುತ್ಸದ್ದಿಯೂ ಹೆಚ್ಚಿನ ಸಾಮ್ರಾಜ್ಯಾಭಿಮಾನಿಯೂ ಹಟವುಳ್ಳವನೂ ಆಗಿದ್ದನು. ಇವನ ಕಾಲದಲ್ಲಿಯ ಮಹತ್ವದ ಸಂಗತಿಗಳು :- ೧. **ವಾಯುವ್ಯ ಸೀಮೇಯ ಸಂರಕ್ಷಣೆ**– ಪಂಜಾಬ ಪ್ರಾಂತದ ಪಶ್ಚಿಮದ ಸುಮಾರು ೪೦೦ ಮೈಲು ಉದ್ದವಾದ ಭಾಗವನ್ನು ಆ ಪ್ರಾಂತದಿಂದ ಬೇರೆಮಾಡಿ, ಅದಕ್ಕೆ **ವಾಯುವ್ಯ ಗಡಿಸೀಮೆಯ ಪ್ರಾಂತ** ಎಂಬ ಹೆಸರನ್ನಿಟ್ಟು ಚೀಫ ಕಮೀಶನರೆಂಬ ಅಧಿಕಾರಿಯನ್ನು ಅದರ ಮೇಲೆ ನಿಯಮಿಸಿದನು. **ಪೇಶಾವರವು** ಈ ಹೊಸ ಪ್ರಾಂತದ ಮುಖ್ಯ ಪಟ್ಟಣವಾಯಿತು. ಬಳಿಕ ಕರ್ಝನನು **ಚಿತ್ರಾಳ** ಮೊದಲಾದ ಠಾಣ್ಯಾಗಳಲ್ಲಿಯ ಇಂಗ್ಲಿಷರ ಸೈನ್ಯವನ್ನು ತೆಗೆದು, ಆ ನಾಡಿನ **ವಹಾಬಿ** ಜನರ ಸೈನ್ಯಗಳನ್ನು ಸಜ್ಜುಗೊಳಿಸಿ, ಅವನ್ನೇ ಆ ಠಾಣ್ಯಾಗಳ ಮೇಲೆ ಕಾವಲಿಗೆ ಇರಿಸಿದನು ಇದರಿಂದ ಗಡಿಸೀಮೆಯ ಸಂರಕ್ಷಣೆಯ ಕೆಲಸವು ಹಗುರೆನಿಸಿತು. **೨. ಪರರಾಷ್ಟ್ರಗಳ ಸಂಬಂಧ— (ಅ) ಅಫಗಾಣಿಸ್ಥಾನ** :— ಕ್ರಿ. ಶ. ೧೯೦೧ ರಲ್ಲಿ ಅಫಗಾಣಿಸ್ಥಾನದ ಅಮೀರ ಅಬದುಲ್ ರಹಿಮಾನನು ಮರಣಹೊಂದಲು, ಅವನ ಮಗ **ಹಬೀಬುಲ್ಲಾನು** ಪಟ್ಟಕ್ಕೆ ಬಂದನು ಕರ್ಝನನು ಅವನಿಗೆ ಹಿಂದಿನ ಕರಾರವನ್ನು ಒಪ್ಪಿಕೊಳ್ಳಬೇಕೆಂದು ತಿಳಿಸಲು ಅವನು ಅನುಮಾನಿಸಹತ್ತಿದನು. ಕೊನೆಗೆ ಕರ್ಝನನು ಅಮೀರನ ಸ್ವಾತಂತ್ರ್ಯವನ್ನು ಮನ್ನಿಸಲು ಅವನು ಒಪ್ಪಂದ ಮಾಡಿಕೊಂಡನು. ಕ್ರಿ. ಶ ೧೯೦೪. **(ಆ) ಇರಾಣದ ಷಾಹನೊಡನೆ ಒಪ್ಪಂದ** :— ರಶಿಯಾದವರು, ಜರ್ಮನರು, ಫ್ರೇಂಚರು ಇವರು ಇರಾಣೀ ಅಖಾತದಲ್ಲಿ ತಮ್ಮ ವರ್ಚಸ್ಸನ್ನು ನೆಲೆಗೊಳಿಸುವ ಹವಣಿಕೆಯಲ್ಲಿದ್ದರು. ಆದವರಿಂದ ಕರ್ಝನನು

ತಾನೆ ಇರಾಣದ ತನಕ ಹೋಗಿ ಷಾಹನೊಡನೆ ಮಿತ್ರತ್ವದ ಒಪ್ಪಂದ ಮಾಡಿಕೊಂಡು ಬಂದನು. **(ಇ) ತಿಬೇಟ:—** ಲಾರ್ಡ ಕರ್ಝನನು ತಿಬೇಟದ **ದಲಾಯಿಲಾಮಾನ** ಕಡೆಗೆ ಕಳುಹಿದ ಮೂರು ಪತ್ರಗಳನ್ನು ಅವನು ತಿರುಗಿ ಕಳಿಸಿದನು. ಇಂಗ್ಲಿಷರನ್ನು ತಮ್ಮಲ್ಲಿ ಕಾಲಿಕ್ಕಗೊಡಬಾರದೆಂದು ಅವನ ಸಂಕಲ್ಪವಿದ್ದಿತು. ಅಲ್ಲದೆ ಅವನು ರಶಿಯದವರ ಸಂಗಡ ಸಂಧಾನ ನಡೆಸಿದ್ದನು. ಆದವರಿಂದ ಕರ್ಝನನು **ಯಂಗ ಹಜಬಂಡ**ನನ್ನು ಸೈನ್ಯದೊಂದಿಗೆ ಸಿಕಿಮದ ಮಾರ್ಗವಾಗಿ ತಿಬೇಟದ ಮೇಲೆ ಸಾಗಿಸಿದನು. ಆದರೆ ಹಿಂದುಸ್ಥಾನ ಸರಕಾರವು ಹೀಗೆ ತಿಬೇಟದ ಮೇಲೆ ಕೈಯೆತ್ತಿದುದಕ್ಕಾಗಿ **ಚೀನ, ರಶಿಯಾ** ಈ ದೇಶಗಳ ಸರಕಾರದವರು ಇಂಗ್ಲಂಡದ ಕಡೆಗೆ ತಮ್ಮ ತಕರಾರು ಒಯ್ದರು. ಆಗ ಇಂಗ್ಲಂಡದ ಅಪ್ಪಣೆಯ ಮೇರೆಗೆ ಕರ್ಝನನು ತಿಬೇಟದಿಂದ ಸೈನ್ಯವನ್ನು ಕರೆಯಿಸಿಕೊಳ್ಳಬೇಕಾಯಿತು. ಈ ರೀತಿ ಜಯವುಂಟಾಗಿಯೂ ತಿಬೇಟದ ದಾಳಿಯು ನಿರರ್ಥಕವಾಯಿತು. **೩. ಸಂಸ್ಥಾನಿಕರ ಸಂಬಂಧದ ವ್ಯವಹಾರಗಳು :—** ೧. ಕರ್ಝನನು ಅರಸುಮಕ್ಕಳಿಗೆ ಯುದ್ಧಕಲೆಯ ಶಿಕ್ಷಣವು ದೊರೆಯಬೇಕೆಂದು **“ ಇಂಡಿಯನ್ ಕ್ಯಾಡೆಟ್ ಕೋಅರ ”** ಎಂಬ ಸಂಸ್ಥೆಯನ್ನು ಸ್ಥಾಪಿಸದನು. **೨.** ನಿಜಾಮನಿಂದ ಬರತಕ್ಕ ಹಣವೆಲ್ಲ ಮುಟ್ಟದುದರಿಂದ **ವರ್ಹಾಡ** ಪ್ರಾಂತವನ್ನು ಮರಳಿ ಕೊಡಬೇಕಾಯಿತು. ಆದರೆ ಕರ್ಝನನು ಕ್ರಿ. ಶ. ೧೯೦೨ರಲ್ಲಿ ನಿಜಾಮನಲ್ಲಿಗೆ ಹೋಗಿ ವರ್ಹಾಡಕ್ಕೆ ಪ್ರತಿಯಾಗಿ ವರ್ಷಕ್ಕೆ ೨೫ ಲಕ್ಷ ರೂಪಾಯಿಗಳನ್ನು ಅವನಿಗೆ ಕೊಡಲೊಪ್ಪಿ ಆ ಪ್ರಾಂತವನ್ನು ಮಧ್ಯಪ್ರಾಂತಕ್ಕೆ ಕೂಡಿಸಿಕೊಂಡನು. **೩.** ಕ್ರಿ. ಶ. ೧೯೦೧ರಲ್ಲಿ ವ್ಹಿಕ್ಟೋರಿಯಾ ಮಹಾರಾಣಿಯವರು ಮರಣ ಹೊಂದಲು **೭ನೆಯ ಎಡ್ವರ್ಡ**ರವರು ಪಟ್ಟಕ್ಕೆ ಕುಳಿತರು. ಆ ಸಂಬಂಧದ ಸಮಾರಂಭವು ಕ್ರಿ. ಶ **೧೯೦೩ರ ಜನೇವರಿ ೧ನೆಯ** ತಾರೀಖಿಗೆ ದಿಲ್ಲಿಯಲ್ಲಿ ನೆರೆಯಿಸಲ್ಪಟ್ಟಿತು. ಕರ್ಝನನು ಅಲ್ಲಿ ಕೂಡಿದ ಸಂಸ್ಥಾನಿಕರನ್ನು, ಅವರು ಮಾಡಿದ ನೆರವಿಗಾಗಿ ಅಭಿನಂದಿಸಿದನಲ್ಲದೆ ನೀವು ಮನಮುಟ್ಟಿ ಮಾಡುವ ನೆರವಿನಿಂದ ಬ್ರಿಟಿಷ ಸಾಮ್ರಾಜ್ಯವು ಹೆಚ್ಚು ಘನತೆಯನ್ನು ಪಡೆಯುವದು. ಎಂಬರ್ಥದ ಅಭಿಪ್ರಾಯವನ್ನು ವ್ಯಕ್ತಪಡಿಸಿದನು. ಬಾದಷಾಹರು ತಮ್ಮ ಹಿಂದೀ ಪ್ರಜೆಗಳಿಗಾಗಿ ಅಂತಃಕರುಣಪೂರ್ವಕವಾದ

ಸಂದೇಶವನ್ನು ಕಳುಹಿದರು. **೪. ರಾಜ್ಯಕಾರಭಾರದಲ್ಲಿಯ ಸುಧಾರಣೆಗಳು**— ಕ್ರಿ. ಶ. ೧೯೦೦ರಲ್ಲಿ ಮತ್ತೆ ಬರವು ಬಿದ್ದಿತು ಪ್ಲೇಗು ಬೇನೆಯೂ ದೇಶದಲ್ಲಿ ಹೆಚ್ಚುತ್ತ ನಡೆಯಿತು. ಅದೇ ಮೇರೆಗೆ ರಾಜ್ಯ ಕಾರಭಾರದ ಹಲವು ಖಾತೆಗಳ ಸುಧಾರಣೆಯಾಗುವದು ಅವಶ್ಯವೆಂದು ಕಂಡುಬಂದಿತು. ಆದದರಿಂದ ಕರ್ಝನನು ಮಹತ್ವದ ಪ್ರಶ್ನೆಗಳ ವಿಚಾರಣೆಗಾಗಿ ಬೇರೆಬೇರೆ ಸಮಿತಿಗಳನ್ನು ನಿಯಮಿಸಿ, ಅವುಗಳ ಸೂಚನೆಯ ಮೇರೆಗೆ ಹಲವು ಸುಧಾರಣೆಗಳನ್ನು ಮಾಡಿದನು. ೧ ಇದರಿಂದ ಪ್ಲೇಗಿನ ಕಾಲದಲ್ಲಿ ಜನರ ಮೇಲಾಗುವ ಒತ್ತಾಯವು ಕಡಿಮೆಯಾಯಿತು. ೨. ಹೊಸ ಹೊಸ ಕಾಲುವೆಗಳ ಕೆಲಸಗಳು ಆರಂಭವಾಗಿ ಒಕ್ಕಲತನಕ್ಕೆ ಉಪಯೋಗವಾಯಿತು. ಒಕ್ಕಲತನದ ಖಾತೆಯವರು ಬೆಳೆಗಳ ಸಂಬಂಧದ ಪ್ರಯೋಗಗಳನ್ನು ಮಾಡಿ ಒಕ್ಕಲಿಗರಿಗೆ ಲಾಭಕರವಾದ ಸಂಗತಿಗಳನ್ನು ತಿಳಿಸಹತ್ತಿದರು. ಒಕ್ಕಲಿಗರಿಗೆ ಕಡಿಮೆ ಬಡ್ಡಿಯಂತೆ ಸಾಲ ಸಿಗುವದಕ್ಕೆ ಅನುಕೂಲವಾಗುವಂತೆ **ಸಹಕಾರಿ ಸಂಘ**ಗಳು ಸ್ಥಾಪಿತವಾದವು. ೩. ಉಪ್ಪಿನ ಮತ್ತು ಉತ್ಪನ್ನದಮೇಲಿನ ಕರಗಳಪ್ರಮಾಣವು ಕಡಿಮೆಯಾಯಿತು. **ವ್ಯಾಪಾರೋದ್ಯೋಗಗಳ ಖಾತೆ** ಮತ್ತು **ಪುರಾಣ ವಸ್ತುಸಂಶೋಧನ ಖಾತೆ** ಎಂಬ ಸ್ವತಂತ್ರ ಖಾತೆಗಳುಂಟಾದವು. ೫. **ಬಂಗಾಲದಲ್ಲಿಯ ಅಸಂತೋಷ**— ರಾಜ್ಯಕಾರಭಾರದ ಅನುಕೂಲತೆಗಾಗಿ ಬಂಗಾಲ ಪ್ರಾಂತದ ಪೂರ್ವಭಾಗವನ್ನು ಆ ಪ್ರಾಂತದಿಂದ ಬೇರ್ಪಡಿಸಿ ಅದನ್ನೊಂದು ಸ್ವತಂತ್ರ ಪ್ರಾಂತವನ್ನಾಗಿ ಮಾಡುವ ವಿಚಾರವು ಬಹಳ ದಿನಗಳಿಂದ ನಡೆದಿತ್ತು. ಆದರೆ ಬಂಗಾಲದ ಜನರಿಗೆ ಈ ವಿಚಾರವು ಒಪ್ಪಿರಲಿಲ್ಲ. ಕರ್ಝನನ ಕಾಲದಲ್ಲಿ ಕ್ರಿ. ಶ. ೧೯೦೫ರ ಆಕ್ಟೋಬರದಿಂದ ಪೂರ್ವ ಬಂಗಾಲದ ಕಾರಭಾರವು ಸ್ವತಂತ್ರವಾಗಿ ಸಾಗುವದು ನಿಶ್ಚಿತವಾಯಿತು. ಆಗ ಬಂಗಾಲದ ಜನರು ಬಲವಾದ ಚಟುವಟಿಕೆಯನ್ನು ಹೂಡಿ ೨ ಸಾವಿರ ಸಭೆಗಳನ್ನು ನೆರೆಯಿಸಿಯೂ ೭೦ ಸಾವಿರ ಸಹಿಗಳ ಬೇಡಿಕೆಗಳನ್ನು ಕಳುಹಿಸಿಯೂ ಬಂಗಾಲವನ್ನು ಒಡೆಯಬಾರದೆಂದು ಕೇಳಿಕೊಂಡರು. ಆದರೆ ಕರ್ಝನನ ಆಳಿಕೆಯಲ್ಲಿ ಜನರ ಬೇಡಿಕೆಯು ಪೂರೈಸಲ್ಪಡಲಿಲ್ಲ. ಆಗ **ಪಂಚಮಜಾರ್ಜ ಬಾದಷಾಹ**ರವರು ಕ್ರಿ. ಶ. ೧೯೧೧ರಲ್ಲಿ ರಾಜ್ಯಾರೋಹಣಕ್ಕಾಗಿ ಈದೇಶಕ್ಕೆ ಬಂದಿರಲು, ಬಂಗಾಲ ಪ್ರಾಂತವು ಒಟ್ಟಾದುದನ್ನು ತಿಳಿಯಪಡಿಸಿ, ಜನರನ್ನು ತೃಪ್ತಗೊಳಿಸಿದರು. **೬. ಕರ್ಝನನ ಆಳಿಕೆಯ**

**ಕೊನೆ:**— ಕ್ರಿ. ಶ. ೧೯೦೫. ಹಿಂದುಸ್ತಾನದ ಸೇನಾಪತಿಯು ವ್ಹಾಯಿಸರಾಯ ನಿಗೆ ಅಂಕಿತನಾಗಿ ಕೆಲಸ ಮಾಡುತ್ತಿರುವದು ಆಗಿನ ಸೇನಾಪತಿಯಾದ ಲಾರ್ಡ **ಕಿಚನರ್** ಎಂಬವನಿಗೆ ಸರಿಯೆನಿಸಲಿಲ್ಲ. ಆವನು "ಸೈನ್ಯವಿಷಯದಲ್ಲಿ ಅನಭಿಜ್ಞ ನಾದ ವ್ಹಾಯಿಸರಾಯನು ಆ ಕೆಲಸದಲ್ಲಿ ಕೈ ಹಾಕಕೂಡದು" ಎಂದು ಪ್ರತಿಪಾದಿಸತೊಡಗಿದನು. ಕಿಚನರರ ಈ ಮತವನ್ನು ಸ್ಟೇಟ ಸೆಕ್ರೆಟರಿಯು ಎತ್ತಿಹಿಡಿದುದರಿಂದ ಕರ್ಝನನು ರಾಜೀನಾಮೆಯನ್ನು ಕೊಟ್ಟು ಹೊರಟು ಹೋದನು.

---

## ೨೪ ನೆಯ ಪಾಠ

**ಲಾರ್ಡ ಮಿಂಟೋ** (ಕ್ರಿ. ಶ. ೧೯೦೫–೧೯೧೦) **ಲಾರ್ಡ ಹಾರ್ಡಿಂಜ** (ಕ್ರಿ ಶ. ೧೯೧೦-೧೯೧೬)

**ಲಾರ್ಡ ಚೇಮ್ಸಫರ್ಡ** (ಕ್ರಿ ಶ ೧೯೧೬ ೧೯೨೧)

೧. **ಲಾರ್ಡ ಮಿಂಟೋ :— ೧೯೦೫ - ೧೯೧೦. ಮಿಂಟೋನು ಬಂದ ಕಾಲದ ಪರಿಸ್ಥಿತಿ:**— ಸುಮಾರು ಇಪ್ಪತ್ತು ವರ್ಷಗಳಿಂದ ನೆರೆಯುತ್ತ ಲಿದ್ದ ರಾಷ್ಟ್ರಸಭೆಯಲ್ಲಿಯ ಚರ್ಚೆಯ ಮೂಲಕ ಸುಶಿಕ್ಷಿತರ ರಾಜಕೀಯ ಆಕಾಕ್ಷೆಗಳು ಮೊದಲೇ ಬಲಿಯುತ್ತಲಿದ್ದವು. ಬಂಗಾಲ ಪ್ರಾಂತವು ಇಬ್ಭಾಗಿಸ ಲ್ಪಟ್ಟಂದಿನಿಂದಂತು, ರಾಜ್ಯಕಾರಭಾರದಲ್ಲಿ ತಮ್ಮ ಕೈಯು ಅವಶ್ಯವಾಗಿ ಸೇರಿರ ಬೇಕೆಂದು ಜನರಿಗೆ ಜನಿಸಹತ್ತಿತ್ತು. **ರಾಷ್ಟ್ರಸಭೆ,ಮುಸ್ಲೀಮಲೀಗ ಇವುಗಳ ಸಾಹಚರ್ಯ**— ಅದು ವರೆಗೆ ಮುಸಲ್ಮಾನರು ರಾಷ್ಟ್ರ ಸಭೆಯ ಕೆಲಸದಲ್ಲಿ ಹೆಚ್ಚಾಗಿ ಮನಸ್ಸು ಹಾಕದೆಯಿದ್ದದರಿಂದ ಅವರ ಆಕಾಂಕ್ಷೆಗಳು ಬೆಳೆದಿರಲಿಲ್ಲ. ಆಗಿನ ರಾಷ್ಟ್ರಸಭೆಯ ಪ್ರಗತಿಯನ್ನು ನೋಡಿ ಮುಸಲ್ಮಾನರು ತಮ್ಮ ಸಮಾಜ ವನ್ನು ಸುಧಾರಿಸುವದಕ್ಕಾಗಿ ಕ್ರಿ. ಶ. **೧೯೦೬**ರಲ್ಲಿ **ಮುಸ್ಲೀಮ ಲೀಗ** ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಈ ಸಂಸ್ಥೆಯು ಕೆಲ ದಿನಗಳ ವರೆಗೆ ಶಿಕ್ಷಣದ ಪ್ರಗತಿಗಾಗಿ ಯತ್ನಿಸುತ್ತಲಿದ್ದಿತು. ಕ್ರಿ. ಶ. ೧೯೦೭ ರಲ್ಲಿ ರಾಷ್ಟ್ರಸಭೆಯ ಅನುಯಾಯಿಗಳಲ್ಲಿ **ಪ್ರಾಗತಿಕ, ರಾಷ್ಟ್ರೀಯ** ಎಂಬೆರಡು ಬಣಗಳಾಗಿ ಆ ಸಭೆಯ ಸೂತ್ರಗಳು ಪ್ರಾಗತಿಕರ ಕೈಸೇರಿದವು. ಅಂದಿನಿಂದ ರಾಷ್ಟ್ರಸಭೆ-ಮುಸ್ಲೀಮ ಲೀಗುಗಳ ಅಧಿವೇಶನಗಳು ಒಂದೇ ಪಟ್ಟಣದಲ್ಲಿ ಒಂದೇ ಕಾಲಕ್ಕೆ

ನೆರೆಯುಹತ್ತಿದವು. ಇದರಿಂದ ಪ್ರಾಗತಿಕ ಮತ್ತು ಮುಸಲ್ಮಾನ ಇವರಲ್ಲಿ ಸಾಹಚರ್ಯವು ಉಂಟಾಯಿತು. ರಾಷ್ಟ್ರೀಯ ಬಣದವರು ಲೇಖ, ವ್ಯಾಖ್ಯಾನ ಮುಂತಾದವುಗಳ ಮೂಲಕ ಜನರಲ್ಲಿ ಜಾಗ್ರತೆಯುನ್ನುಂಟುಮಾಡಿ ಅವರನ್ನು ತಮ್ಮಕಡೆಗೆ ಒಲಿಸಿಕೊಂಡು ರಾಷ್ಟ್ರಸಭೆಯನ್ನು ತಮ್ಮ ಕೈವಶಮಾಡಿಕೊಳ್ಳುವ ಪ್ರಯತ್ನ ನಡೆಸಿದರು. **ಪ್ರೆಸ್ ಆಕ್ಟ ಮತ್ತು ಸಭಾಬಂದಿಯ ಕಾಯದೆ**--- ಕ್ರಿ. ಶ. ೧೯೦೮ರಲ್ಲಿ ಬಂಗಾಲದಲ್ಲಿ **ಅರಾಜಕರ** ಸಂಘಗಳು ಇರುವವೆಂದು ಗೊತ್ತಾಯಿತು. ಈ ಅರಾಜಕರ ಪ್ರಯತ್ನದಿಂದಲೆ ಬಂಗಾಲ-ಪಂಜಾಬ-ಮಹಾರಾಷ್ಟ್ರಗಳಲ್ಲಿ ಕೆಲ ಇಂಗ್ಲಿಷ ಅಧಿಕಾರಿಗಳ ಕೊಲೆಯಾಯಿತು. ಆಗ ಸರಕಾರದವರು ಅರಾಜಕರನ್ನು ಕಂಡುಹಿಡಿದು, ತಪ್ಪುಗಾರರನ್ನು ತಕ್ಕ ರೀತಿಯಿಂದ ಶಿಕ್ಷಿಸಿದರು, ವರ್ತಮಾನಪತ್ರಗಳಲ್ಲಿಯ ಲೇಖಗಳಿಂದಲೂ ಸಭೆಗಳಲ್ಲಿಯ ಭಾಷಣಗಳಿಂದಲೂ ಅರಾಜಕರಿಗೆ ಉತ್ತೇಜನ ದೊರೆಯುವ ಸಂಭವವಿದ್ದುದರಿಂದ ಸರಕಾರದವರು **ಪ್ರೆಸ್ ಆಕ್ಟ** ಮತ್ತು **ಸಂಬಂಧಿಯ ಕಾಯದೆ** ಎಂಬೆರಡು ಕಾಯದೆಗಳನ್ನು ಮಾಡಿದರು. ರಾಜದ್ರೋಹದ ಆರೋಪಕ್ಕಾಗಿ ಹಲವರು ಸೆರೆಮನೆಗೆ ಕಳುಹಲ್ಪಟ್ಟರು.

**ಮೋರ್ಲೆ-ಮಿಂಟೋ ಸುಧಾರಣೆಗಳು**:— ಕ್ರಿ. ಶ. ೧೯೦೯. ಈ ಸಮಯಕ್ಕೆ ಭಾರತ ಮಂತ್ರಿಯಾಗಿದ್ದ **ಮೋರ್ಲೆ** ಮತ್ತು **ಮಿಂಟೋ** ಇವರು ಜನರ ಬೇಡಿಕೆಗಳನ್ನು ಸಹಾನುಭೂತಿಯಿಂದ ವಿಚಾರಿಸಿ ರಾಜ್ಯ ಕಾರಭಾರದಲ್ಲಿ ಅವರ ಅಧಿಕಾರಗಳನ್ನು ಹೆಚ್ಚಿಸುವ ಕೆಲವು ಸುಧಾರಣೆಗಳನ್ನು ಸೂಚಿಸಿದರು. ಇದಕ್ಕನುಸಾರವಾಗಿ ಪಾರ್ಲಮೆಂಟಿನವರು **ಮೋರ್ಲೆ-ಮಿಂಟೋ ಸುಧಾರಣೆ** ಎಂಬ ಕಾಯದೆಯನ್ನು ಪಾಸುಮಾಡಿದರು. ಇದರಿಂದ ೧ ಭಾರತಮಂತ್ರಿ, ವ್ಹಾಯಿಸರಾಯ, ಗವ್ಹರ್ನರ ಇವರ ಕಾರ್ಯಕಾರೀ ಮಂಡಲಗಳಲ್ಲಿ ಹಿಂದೀ ಜನರ ಸೇರ್ಪಡೆಯಾಯಿತು. ೨. ವರಿಷ್ಠ ಮತ್ತು ಪ್ರಾಂತಿಕ ಕಾಯದೆ ಮಂಡಲಗಳ ಸಭಾಸದರ ಸಂಖ್ಯೆಯು ಹೆಚ್ಚಿಸಲ್ಪಟ್ಟಿತು. ೩. ಪ್ರಾಂತಿಕ ಮಂಡಲಗಳಲ್ಲಿ ಮಾತ್ರ ಸರಕಾರಿ ನೌಕರರಲ್ಲದ ಸಭಾಸದರ ಬಹುಮತವಾಯಿತು. ೪. ಅಲ್ಪಸಂಖ್ಯಾಕರಿಗಾಗಿ ಸ್ಥಳಗಳು ಕಾದಿಡಲ್ಪಟ್ಟವು. ೫ ಠರಾವುಗಳನ್ನು ಪಾಸುಮಾಡಿಕೊಳ್ಳುವ, ಅಂದಾಜ ಪತ್ರಿಕೆಯನ್ನು ಚರ್ಚಿಸುವ ಮುಂತಾದ ಅಧಿಕಾರಗಳು ಸಭಾಸದರಿಗೆ ದೊರೆತವು.

**೨. ಲಾರ್ಡ ಹಾರ್ಡಿಂಜ:**— ಕ್ರಿ. ಶ ೧೯೧೦-೧೯೧೬ ಮಿಂಟೋನ ತರುವಾಯ **ಲಾರ್ಡ ಹಾರ್ಡಿಂಜನು** ವ್ಹಾಯಿಸರಾಯನಾದನು. ಇವನು ಒಳ್ಳೆಯ ಶಾಂತನೂ ಉದಾರನೂ ಆಗಿದ್ದನು. ಇವನ ಕಾಲದಲ್ಲಿ ಒದಗಿದ ಸಂಗತಿಗಳು— **೧. ಬಾದಶಹರ ಆಗಮನ**— ಕ್ರಿ ಶ. ೧೯೧೧. **೫ನೆಯ**



**ಸಾರ್ವಭೌಮ**
**ಪಂಚಮ ಜಾರ್ಜ ಬಾದಷಾಹರು**

**ಎಡ್ವರ್ಡ** ಬಾದಶಹರು ಕ್ರಿ ಶ ೧೯೧೦ರಲ್ಲಿ ತೀರಿಕೊಳ್ಳಲು **೫ನೆಯಜಾರ್ಜ** ರವರು ಇಗ್ಲಂಡದ ಸಿಂಹಾಸನವನ್ನೇರಿದರು. ಮತ್ತು ಮರುವರುಷ **ಮೇರಿ ಮಹಾರಾಣಿ**ಯವರೊಡನೆ ಈ ದೇಶಕ್ಕೆ ಬಂದರು ಇವರ ರಾಜ್ಯಾರೋಹಣ

ಸಮಾರಂಭವು ಕ್ರಿ. ಶ ೧೯೧೧ರ **ಡಿಸೆಂಬರ ೧೨ನೆಯ ತಾರೀಖಿನ ದಿನ** ದಿಲ್ಲಿಯಲ್ಲಿ ಒಳ್ಳೆಯ ಸಡಗರದಿಂದ ಆಯಿತು. ಆ ಸಮಯದಲ್ಲಿ ಎಲ್ಲ ಸಂಸ್ಥಾನಿಕರೂ ಪ್ರಾಂತಪ್ರಾಂತಗಳ ಪ್ರತಿಷ್ಠಿತ ಸದ್ಗೃಹಸ್ಥರೂ ನಿಮಂತ್ರಿತರಾಗಿದ್ದರು. ಆಗ ಬಾದಶಾಹರು- ೧. **ದಿಲ್ಲಿಯು** ಹಿಂದುಸ್ಥಾನದ ರಾಜಧಾನಿಯಾಯಿತು. ೨ ಬಂಗಾಲ ಪ್ರಾಂತವು ಮೊದಲಿನಂತೆ ಒಂದು ಮಾಡಲ್ಪಟ್ಟಿತು. ೩ ಶಿಕ್ಷಣ ಕಾರ್ಯಕ್ಕಾಗಿ ೫೦ ಲಕ್ಷ ರೂ ಗಳು ವೆಚ್ಚ ಮಾಡಲ್ಪಡುವವು ೪ ಹಿಂದೀ ವೀರರಿಗೂ **ವಿಕ್ಟೋರಿಯಾ ಕ್ರಾಸ್** ಎಂಬ ಬಹುಮಾನದ ಪದಕವು ಕೊಡಲ್ಪಡುವದು ಎಂದು ಜಾಹೀರಪಡಿಸಿ ಜನರ ಮನಸ್ಸನ್ನು ಸಂತೈಸಿದರು. **೨. ಹಾರ್ಡಿಂಜನ ಸಮಾಧಾನವೃತ್ತಿ**— ಕ್ರಿ. ಶ. **೧೯೧೨**ರಲ್ಲಿ ಹಾರ್ಡಿಂಜನು ಹೊಸ ದಿಲ್ಲಿಯ ಪ್ರವೇಶ ಸಮಾರಂಭಕ್ಕಾಗಿ ಆನೆಯಸ್ವಾರಿ ಹೊರಟಿರಲು ತಲೆತಿರುಕನೊಬ್ಬನು ಅವನ ಮೇಲೆ ಬಾಂಬು ಒಗೆದನು ಆದರೆ ಸುದೈವದಿಂದ ಹಾರ್ಡಿಂಜನ ಜೀವಕ್ಕೆ ಅಪಾಯವಾಗಲಿಲ್ಲ. ಈ ಪ್ರಸಂಗದಲ್ಲಿ ಹಾರ್ಡಿಂಜನು ತಳೆದ ಸಮಾಧಾನ ವೃತಿಯು ವರ್ಣಿಸುವಂಥದಿದ್ದಿತು. ಇಷ್ಟೇ ಅಲ್ಲ; ಅವನು ತನ್ನ ಆಳಿಕೆಯ ಕೊನೆಯ ವರೆಗೂ ಪ್ರಜೆಗಳೊಡನೆ ಸಹಾನಭೂತಿಯಿಂದಲೇ ನಡೆದನು. **೩ ಶಿಕ್ಷಣದ ಪ್ರಗತಿ**— ಬಾದಶಾಹರ ಇಚ್ಛೆಯಂತೆ ೫೦ ಲಕ್ಷ ರೂಪಾಯಿಗಳು ಪ್ರಾಥಮಿಕ ಶಿಕ್ಷಣದ ಪ್ರಸಾರಕ್ಕಾಗಿ ವೆಚ್ಚಮಾಡಲ್ಪಡಹತ್ತಿದವು **ಡಾಕಾ, ಪಾಟಣಾ** ಪಟ್ಟಣಗಳಲ್ಲಿ ಹೊಸ ವಿಶ್ವವಿದ್ಯಾಲಯಗಳು ಸ್ಥಾಪಿಸಲ್ಪಟ್ಟವು ಪಂಡಿತ **ಮಾಲವೀಯ** ಇವರು ಸ್ಥಾಪಿಸಿದ **ಬನಾರಸ ಹಿಂದು ವಿಶ್ವವಿದ್ಯಾಲಯಕ್ಕೆ** ಸರಕಾರದ ಮಾನ್ಯತೆಯು ದೊರೆಯಿತು. **೪. ದಕ್ಷಿಣ ಆಫ್ರಿಕೆದಲ್ಲಿಯ ನಿಶಸ್ತ್ರ ಪ್ರತಿಕಾರ**— ನಿಯಮಿತ ಅವಧಿಯ ಕೂಲಿಕಾರರಾಗಿಯೂ ವ್ಯಾಪಾರ-ಉದ್ಯೋಗಗಳ ನೆವದಿಂದಲೂ ಎಷ್ಟೋ ಹಿಂದೀ ಜನರು ದಕ್ಷಿಣ ಆಫ್ರಿಕಕ್ಕೆ ಹೋಗಿ ಅಲ್ಲಿಯೆ ನೆಲೆಗೊಂಡಿದ್ದರು ಆದರೆ ಅಲ್ಲಿ ವಸಹಾತು ಮಾಡಿದ್ದ ಯುರೋಪಿಯನರು ಹಿಂದೀ ಜನರಿಗೆ ನಾಗರಿಕತೆಯ ಹಕ್ಕುಗಳನ್ನು ಕೊಡುತ್ತಿರಲಿಲ್ಲ ಆಗ **ಜೋಹಾನ್ಸಬರ್ಗದಲ್ಲಿ ಬ್ಯಾರಿಷ್ಟ**ರರಾಗಿದ್ದ **ಗಾಂಧಿ** (ಈಗಿನ ಮಹಾತ್ಮಾ ಗಾಂಧಿ) ಯವರು ನಾಗರಿಕತೆಯ ಹಕ್ಕುಗಳನ್ನು ಪಡೆದುಕೊಳ್ಳುವದಕ್ಕಾಗಿ ನಿಶಸ್ತ್ರ ಪ್ರತಿಕಾರ ಮಾಡಹತ್ತಿದರು. ಅವರ ಪ್ರಯತ್ನದಿಂದ ಅಲ್ಲಿಯ ಹಿಂದೀ ಜನರಿಗೆ ಕೆಲಮಟ್ಟಿಗೆ ಅಧಿಕಾರಗಳು ದೊರೆತವು.

**೫. ಯುರೋಪದ ಮಹಾ ಯುದ್ಧ**— ಕ್ರಿ. ಶ. ೧೯೧೪ರ ಜೂನ ೨೮ನೆಯ ದಿನ **ಸಿರಾಜಿವೊ** ಎಂಬಲ್ಲಿ ಒಬ್ಬ ಸರ್ವಿಯನನಿಂದ **ಆಸ್ಟ್ರಿಯದ** ಅರಸುಮಗನ **ಕೊಲೆಯಾಯಿತು**. ಸರ್ವಿಯನ್ ಸರಕಾರದ ಬೆಂಬಲದಿಂದಲೆ ಈ ಕೊಲೆಯಾಯಿತೆಂದು ತಿಳಿದು ಆಸ್ಟ್ರಿಯದವರು **ಸರ್ವಿಯದೊಡನೆ** ಯುದ್ಧವನ್ನು ಸಾರಿದರು. **ಕೂಡಲೆ** ಜರ್ಮನರು ಆಸ್ಟ್ರಿಯಾದವರನ್ನೂ ರಶಿಯನರು ಸರ್ವಿಯದವರನ್ನೂ ಕೂಡಿಸಿಕೊಂಡರು. **ರಶಿಯಾ, ಫ್ರಾನ್ಸ, ಇಂಗ್ಲಂಡ** ಈ ದೇಶಗಳ ನಡುವೆ ಸ್ನೇಹದ ಒಡಂಬಡಿಕೆಯಾಗಿದ್ದುದರಿಂದ ಫ್ರಾನ್ಸ-ಇಂಗ್ಲಂಡಗಳು ರಶಿಯದ ಪಕ್ಷವನ್ನು ವಹಿಸಿದವು. ಇತ್ತ **ಅಮೇರಿಕಾ, ಇತಲಿ** ಈ ದೇಶಗಳು ಕೂಡ ಇಂಗ್ಲಂಡ-ಫ್ರಾನ್ಸಗಳ ಬೆನ್ನುಕಟ್ಟಿದವು. ಅತ್ತ **ಬಲ್ಗೇರಿಯಾ, ತುರ್ಕಸ್ಥಾನ**ಗಳು ಜರ್ಮನರ ಕಡೆಗೆ ಆದವು.

ಇಂಗ್ಲಂಡವು ಈ ಯುದ್ಧದಲ್ಲಿ ತೊಡಗಿದ್ದುದರಿಂದ ಸಾಮ್ರಾಜ್ಯದೊಳಗಿನ **ಕಾನಡಾ, ಆಸ್ಟ್ರೇಲಿಯಾ** ಮೊದಲಾದ ದೇಶಗಳಂತೆ **ಹಿಂದುಸ್ಥಾನವೂ** ಆದರ ನೆರವಿಗೆ ಸಜ್ಜಾಯಿತು. ಈ ಮಹಾ ಯುದ್ಧಕ್ಕಾಗಿ ಹಿಂದುಸ್ಥಾನದಿಂದ ಲಕ್ಷಗಟ್ಟಲೆ ಸೈನಿಕರೂ ಕೋಟಿಗಟ್ಟಲೆ ರೂಪಾಯಿಗಳೂ ಪೂರೈಸಲ್ಪಟ್ಟವು ಈ ನೆರವಿನಿಂದಲೆ ಫ್ರಾನ್ಸದಲ್ಲಿ **ಮಾರ್ನೆ** ನದಿಯ ಬಳಿಯ ಯುದ್ಧದಲ್ಲಿಯೂ **ಮೆಸೊಪೋಟೋಮಿಯಾ, ಪೂರ್ವ ಆಫ್ರಿಕಾ** ಮುಂತಾದ ಕಡೆಗಳಲ್ಲಿಯೂ ಇಂಗ್ಲಿಷರಿಗೆ ಜಯದೊರೆಯಿತು. **ದರಬಾನಸಿಂಗ, ಖುದಾದಾದಖಾನ, ಗೋವಿಂದಸಿಂಗ** ಮೊದಲಾದ ಹಿಂದೀ ವೀರರು ತಾವು ತೋರ್ಪಡಿಸಿದ ಪರಾಕ್ರಮಕ್ಕಾಗಿ **ವ್ಹಿಕ್ಟೋರಿಯಾ ಕ್ರಾಸ್** ಎಂಬ ಪದಕವನ್ನು ಪಡೆದರು.

ಯುದ್ಧವು ಇನ್ನೂ ಮುಗಿದಿರಲಿಲ್ಲ. ಕ್ರಿ. ಶ. **೧೯೧೬**ರಲ್ಲಿ ರಿಪನನಂತೆ ಲೋಕಪ್ರಿಯನೆನಿಸಿದ್ದ ಲಾರ್ಡ ಹಾರ್ಡಿಂಜನ ಆಳಿಕೆಯ ಅವಧಿಯು ಮುಗಿಯಲು **ಲಾರ್ಡ ಚೇಮ್ಸಫರ್ಡ**ನು ವ್ಹಾಯಿಸರಾಯನಾಗಿ ಬಂದನು.

**೩. ಲಾರ್ಡ ಚೇಮ್ಸಫರ್ಡ**:— ಕ್ರಿ ಶ. ೧೯೧೬—೧೯೨೧. **೧. ಹಿಂದುಸ್ತಾನಕ್ಕೆ ಉಂಟಾದ ಮಹತ್ವ**:— ಮಹಾಯುದ್ಧವು ನಡೆದಿರುವಾಗಲೆ ಕ್ರಿ. ಶ. **೧೯೧೭**ರಲ್ಲಿ ಕೂಡಿದ **ಸಾಮ್ರಾಜ್ಯ ಪರಿಷತ್ತಿಗೆ** ಹಿಂದುಸ್ತಾನದ ಪರವಾಗಿಯೂ ಪ್ರತಿನಿಧಿಗಳನ್ನು ಕರೆಯಿಸಿಕೊಳ್ಳುವದು ಅಗತ್ಯವೆನಿಸಿತು. ಆ ಮೇರೆಗೆ

**ಬಿಕಾನೇರದ ಮಹಾರಾಜರೂ** ನಾಮದಾರ **ಸತ್ಯೇಂದ್ರ ಪ್ರಸನ್ನ** †ಸಿಂಹ ಇವರೂ ಆ ಪರಿಷತ್ತಿಗೆ ಪ್ರತಿನಿಧಿಗಳಾಗಿ ಹೋಗಿದ್ದರು. ಕ್ರಿ. ಶ. **೧೯೧೮**ರಲ್ಲಿ ಜರ್ಮನಿಯು ಸೋತು **ವ್ಹರ್ಸೇಲಿಸ್** ಎಂಬಲ್ಲಿ ಒಪ್ಪಂದ ಮಾಡಿಕೊಳ್ಳಲು ನಾಲ್ಕೈದು ವರ್ಷಗಳವರೆಗೆ ನಡೆದ ಮಹಾಯುದ್ಧವು ಶಾಂತವಾಯಿತು. ವರ್ಸೇಲಿಸದಲ್ಲಾದ ಒಪ್ಪಂದದ ಕರಾರುಗಳಿಗೂ ಮೇಲ್ಕಾಣಿಸಿದ ಹಿಂದೀ ಪ್ರತಿನಿಧಿಗಳ ಸಹಿಯಾಯಿತು. ಮತ್ತು ಮುಂದೆ, ಜಗತ್ತಿನಲ್ಲಿ ಶಾಂತತೆಯನ್ನು ನೆಲೆಗೊಳಿಸಲು ಉಂಟಾದ **ರಾಷ್ಟ್ರಸಂಘ**ದಲ್ಲಿಯೂ ಹಿಂದೀ ಪ್ರತಿನಿಧಿಗಳ ಸೇರ್ಪಡೆಯಾಯಿತು. ಮಹಾಯುದ್ಧದ ಪ್ರಸಂಗದಲ್ಲಿ ಸಾಮ್ರಾಜ್ಯ ಸರಕಾರಕ್ಕೆ ಹಿಂದುಸ್ಥಾನವು ಮನಮುಟ್ಟಿ ನೆರವಾದುದರಿಂದ ಹೆಚ್ಚಿನ ಯೋಗ್ಯತೆಯನ್ನು ಪಡೆಯಿತು **೨.** ಕ್ರಿ. ಶ. **೧೯೧೭ರ ಜಾಹೀರನಾಮೆ**—ಮಹಾಯುದ್ಧವು ಆರಂಭವಾದಂದಿನಿಂದ ಹಿಂದುಸ್ಥಾನದಲ್ಲಿ ಜಾಗ್ರತೆಯುಂಟಾಯಿತು **ಸ್ವಯಂನಿರ್ಣಯದ** ಅಧಿಕಾರವು ಎಲ್ಲ ರಾಷ್ಟ್ರಗಳಿಗೂ ಇರುವದೆಂಬ ತತ್ವವು ಸರ್ವಸಮ್ಮತವಾದುದರಿಂದ ಈ ದೇಶದ ರಾಜಕೀಯ ಚಟುವಟಿಕೆಯು ಮತ್ತೆ ತಲೆಯತ್ತಿತು. ಕ್ರಿ. ಶ **೧೯೧೬** ರಲ್ಲಿ **ಪ್ರಾಗತಿಕ** ಪಕ್ಷವು ಹಿಮ್ಮೆಟ್ಟಿ, ರಾಷ್ಟ್ರಸಭೆಯ ಸೂತ್ರಗಳು **ರಾಷ್ಟ್ರೀಯ** ಪಕ್ಷದ ಕೈಸೇರಿದವು **ಲೋಕಮಾನ್ಯ ಬಾಳ ಗಂಗಾಧರ ಟಿಳಕ**ರವರು ಈ ರಾಷ್ಟ್ರೀಯ ಪಕ್ಷದ ಮುಖಂಡರಾಗಿದ್ದರು ಇಷ್ಟು ಹೊತ್ತಿಗೆ ಮುಸಲ್ಮಾನರಲ್ಲಿಯು ಜಾಗ್ರತೆಯುಂಟಾಗಿದ್ದಿತು. ಅವರು ತಮ್ಮ **ಮುಸ್ಲೀಮ ಲೀಗಿ**ನಲ್ಲಿ ರಾಷ್ಟ್ರಸಭೆಯಂತೆಯೆ ಠರಾವುಗಳನ್ನು ಪಾಸುಮಾಡಿದರು. ರಾಷ್ಟ್ರದ ಈ ಬಗೆಯ ಒಕ್ಕಟ್ಟಿನ ಬೇಡಿಕೆಗಳಿಗೆ ಇಂಗ್ಲಿಷ ಜನಾಂಗದ ಬೆಂಬಲವೂ ದೊರೆಯಿತು. ಇವೆಲ್ಲ ಸಂಗತಿಗಳ ಪರಿಣಾಮವಾಗಿ, ಆಗಿನ ಭಾರತಮಂತ್ರಿಯಾದ **ಮಾಂಟೆಗ್ಯೂನು** ಕ್ರಿ ಶ. **೧೯೧೭**ರಲ್ಲಿ "ಹಿಂದುಸ್ಥಾನದಲ್ಲಿ ಕ್ರಮಕ್ರಮವಾಗಿ ಜವಾಬದಾರಿಯುಳ್ಳ ಸ್ವರಾಜ್ಯವು ಸ್ಥಾಪಿಸಲ್ಪಡುವದು." ಎಂದು ಜಾಹೀರ ಮಾಡಿದನು **೩. ಮಾಂಟೆಗ್ಯೂ-ಚೇಮ್ಸ್‌ಫರ್ಡ (ಮಾಂಟಫರ್ಡ) ಆಕ್ಟ**—ಕ್ರಿ. ಶ. **೧೯೧೯.** ಈ

---

† ನಾಮದಾರ ಸಿಂಹ ಇವರಿಗೆ ಕ್ರಿ ಶ. ೧೯೧೯ ರಲ್ಲಿ ಲಾರ್ಡ ಎಂಬ ಪದವಿಯೂ ಸಹಾಯಕ ಭಾರತ ಮಂತ್ರಿಪದವೂ ದೊರೆತವು. ಅಲ್ಲದೆ, ಕ್ರಿ. ಶ. ೧೯೨೧-೨೨ರಲ್ಲಿ ಇವರು ಒರಿಸಾ ಪ್ರಾಂತದ ಗವ್ಹರ್ನರರಾದರು. ಈ ಗೌರವದ ಅಧಿಕಾರವನ್ನು ಪಡೆದ ಮೊದಲನೆಯ ಹಿಂದೀ ಗೃಹಸ್ಥರು ಇವರೇ.

ಜಾಹೀರನಾಮೆಯು ಪ್ರಸಿದ್ಧವಾದ ವುರುವರುಷ ಎಂದರೆ, ಕ್ರಿ ಶ. ೧೯೧೮ರಲ್ಲಿ ಮಾಂಟೆಗ್ಯೂನು ಈ ದೇಶಕ್ಕೆ ಬಂದು, ವ್ಹಾಯಿಸರಾಯನಾದ ಚೇಮ್ಸಫರ್ಡ ನೊಡನೆ ಮುಖ್ಯ ಮುಖ್ಯ ಭಾಗಗಳಲ್ಲಿ ತಿರುಗಾಡಿ,ಪ್ರಮುಖರಾದ ಹಿಂದೀಯರ ವಿಚಾರಗಳನ್ನು ಅರಿತುಕೊಂಡನು ಮತ್ತು ಚೇಮ್ಸಫರ್ಡನ ನೆರವಿನಿಂದ ಸುಧಾರಣೆಗಳ ಮಸೂದೆಯೊಂದನ್ನು ಬರೆದು ಅದನ್ನು ಪಾರ್ಲಮೆಂಟಿನ



**ಲೋಕಮಾನ್ಯ ಟಿಳಕ**

ಮುಂದಿಟ್ಟು ಪಾಸುಮಾಡಿಸಿಕೊಂಡನು ಈ ಕಾಯದೆಗೆ **ಮಾಂಟಫರ್ಡ ಆಕ್ಟ್** ಎಂಬ ಹೆಸರುಂಟಾಯಿತು. ಈ ಕಾಯಿದೆಯಿಂದ, ವ್ಹಾಯಿಸರಾಯನ (ವರಿಷ್ಠ) ಕಾರ್ಯಕಾರೀ ಮಂಡಲದಲ್ಲಿಯ ಮೂರು ಸ್ಥಳಗಳು ಹಿಂದೀ ಸಭಾಸದರಿಗೆ ಸಿಕ್ಕವು. ವ್ಹಾಯಿಸರಾಯನ ನೆರವಿಗೆ ಲೋಕ ಪ್ರತಿನಿಧಿಗಳ ಬಹುಮತವಿರುವ **ವರಿಷ್ಠ ಕಾಯದೆ ಮಂಡಲ** (ಲೆಜಿಸ್ಲೆಟಿವ್ಹ ಆಸೆಂಬ್ಲಿ) ಮತ್ತು **ಕೌನ್ಸಿಲ್ ಆಫ್**

**ಸ್ಟೇಟಿ** ಎಂಬೆರಡು ಸಭೆಗಳುಂಟಾದವು. ಕಾಯದೆ ಮಂಡಲದಲ್ಲಿ ಪಾಸಾದ ಠರಾವುಗಳು ಕೌನ್ಸಿಲ್ ಆಫ್ ಸ್ಟೇಟದಲ್ಲಿಯೂ ಪಾಸಾಗಬೇಕಾಯಿತು. ಪರರಾಷ್ಟ್ರ ಮತ್ತು ಸಂಸ್ಥಾನಿಕರ ಸಂಬಂಧವ ವ್ಯವಹಾರ; ಸೈನ್ಯ ಮತ್ತು ಹಡಗುಪಡೆ, ಉಗೆಬಂಡಿ, ಪೋಸ್ಟ ಮತ್ತು ತಂತಿ, ಅಫು ಮತ್ತು ಕರ, ಟಂಕಸಾಲೆ, ಸಾಲ ಈ ಖಾತೆಗಳು ವರಿಷ್ಠ ಸರಕಾರದ ಕಡೆಗೂ, ಉಳಿದ ಖಾತೆಗಳು ಪ್ರಾಂತಿಕ ಸರಕಾರದ ಕಡೆಗೂ ಕೊಡಲ್ಪಟ್ಟವು. ಪ್ರಾಂತಿಕ ಸರಕಾರದ ಖಾತೆಗಳಲ್ಲಿ **ಕಾದಿಟ್ಟ ಖಾತೆ**ಗಳು, **ಒಪ್ಪಿಸಲ್ಪಟ್ಟ ಖಾತೆ**ಗಳು ಎಂಬ ಭಾಗಗಳು. ಪ್ರಾಂತಿಕ ಕಾರ್ಯಕಾರೀ ಮಂಡಲದ **ಸರಕಾರೀ ಸಭಾಸದರ** ಕಡೆಗೆ ಕಾದಿಟ್ಟ (ಕಂದಾಯ, ಲೆಕ್ಕಪತ್ರ, ನ್ಯಾಯ, ಪೋಲೀಸ ಸೆರೆಮನೆ) ಈ ಖಾತೆಗಳೂ, ಉಳಿದ **ಲೋಕನಿಯುಕ್ತ ಸಭಾಸದರ** ಕಡೆಗೆ ಒಪ್ಪಿಸಲ್ಪಟ್ಟ (ಶಿಕ್ಷಣ, ಆರೋಗ್ಯ, ಒಕ್ಕಲತನ, ವ್ಯಾಪಾರೋದ್ಯೋಗ, ಸ್ಥಾನಿಕ ಸ್ವರಾಜ್ಯ.) ಈ ಖಾತೆಗಳೂ ಕೊಡಲ್ಪಟ್ಟವು. ಕಾರ್ಯಕಾರೀ ಮಂಡಲದ ಲೋಕ ನಿಯುಕ್ತ ಸಭಾಸದರನ್ನು ಎಂದರೆ **ಮಂತ್ರಿ**ಗಳನ್ನು ಗವ್ಹರ್ನರನು ತನ್ನ ಪ್ರಾಂತಿಕ ಕಾಯದೆ ಮಂಡಲದಲ್ಲಿಯ ಬಹುಮತವಿರುವ ಪಕ್ಷದಿಂದ ಆರಿಸಬೇಕಾಯಿತು ಮತದಾರರ ಸಂಖ್ಯೆಯು ಹೆಚ್ಚಾಯಿತು. ಅಪ್ರತ್ಯಕ್ಷ ಆರಿಸುವಿಕೆಯು ನಿಂತುಹೋಗಿ ಮತದಾರರು ಉಮೇದವಾರರಿಗೆ ಪ್ರತ್ಯಕ್ಷ ಮತಕೊಡುವ ಪದ್ಧತಿಯು ಆರಂಭವಾಯಿತು. ಪ್ರಸಂಗವಿಶೇಷವಲ್ಲಿ **ಗವ್ಹರ್ನರ ಜನರಲ**ನು ಮತ್ತು **ಗವ್ಹರ್ನರ**ರು ತಮ್ಮ ತಮ್ಮ ಕಾಯದೆ ಮಂಡಲಗಳಲ್ಲಿ ಪಾಸಾದ ಕಾಯದೆಗಳನ್ನು ನಾಪಾಸು ಮಾಡುವ, ಮತ್ತು ನಾಪಾಸಾದ ಠರಾವುಗಳನ್ನು ಪಾಸುಮಾಡುವ ವಿಶೇಷ ಅಧಿಕಾರವನ್ನು ಪಡೆದರು. **೪. ಇನ್‌ಫ್ಲೂಎಂಝಾ ರೋಗದ ಹಾವಳಿ—** ಮಹಾಯುದ್ಧವು ಮುಗಿಯುತ್ತಿರಲು ಜಗತ್ತಿನಲ್ಲೆಲ್ಲ ಇನ್‌ಫ್ಲೂಎಂಝಾ ಎಂಬ ಬೇನೆಯು ಹಬ್ಬಿತು. ಆಗ ಕ್ರಿ. ಶ. ೧೯೧೭-೧೮ರ ವರೆಗೆ ಈ ಬೇನೆಯಿಂದ ಹಿಂದುಸ್ತಾನದಲ್ಲಿ ಅರವತ್ತು ಲಕ್ಷ ಜನರು ಸತ್ತರು. **೫. ಅಸಹಕಾರ ಚಟುವಟಿಕೆಯ ಆರಂಭ—** ಮಾಂಟೆಗ್ಯೂ-ಚೇಮ್ಸ್‌ಫರ್ಡ ಸುಧಾರಣೆಗಳಿಂದ ಜನರ ಸಮಾಧಾನವಾಗಲಿಲ್ಲ. ಆಗ ಲೋಕಪಕ್ಷದ ಮುಂದಾಳುಗಳಾದ **ಮಹಾತ್ಮಾ ಗಾಂಧಿ**ಯವರು **ಸತ್ಯಾಗ್ರಹ** ಎಂಬ ಚಟುವಟಿಕೆಯನ್ನು ಆರಂಭಿಸಿದರು. ಮಹಾ ಯುದ್ಧದ ಕೊನೆಗೆ ಆದ ಒಪ್ಪಂದ

ದಿಂದ ತುರ್ಕಸ್ತಾನದ ಸುಲ್ತಾನನ ಅಧಿಕಾರಕ್ಕೆ ಕುಂದು ಬರುವ ಲಕ್ಷಣವು ತೋರಿತು. ಆ ಸುಲತಾನನು ಧಾರ್ಮಿಕ ದೃಷ್ಟಿಯಿಂದ **ಖಲೀಫ** ಎಂದರೆ **ಧರ್ಮಾಧಿಕಾರಿ**ಯಾಗಿದ್ದನು. ಆದುದರಿಂದ ಅವನ ಯೋಗ್ಯತೆಗೆ ಕುಂದು ಬರಬಾರದೆಂದು ಹಿಂದೀ ಮುಸಲ್ಮಾನರು **ಖಿಲಾಫತ್** ಎಂಬ ಚಟುವಟಿಕೆಯನ್ನು ಮಾಡಹತ್ತಿದರು ಮುಂದೆ ಮ. ಗಾಂಧಿಯವರು ಈ ಖಿಲಾಫತದ



**ಮಹಾತ್ಮಾ ಗಾಂಧಿ**

ಚಟುವಟಿಕೆಗೆ ಸಹಾಯಕರಾದುದರಿಂದ **ಮೌ. ಮಹಮ್ಮದಅಲಿ** ಮೊದಲಾದ ಮುಸಲ್ಮಾನ ಮುಖಂಡರು ಹಿಂದುಗಳೊಡನೆ ಒಂದಾಗಿ ಅಸಹಕಾರ ಚಟುವಟಿಕೆಯನ್ನು ಕೈಕೊಂಡರು ಇದೇ ಸಮಯಕ್ಕೆ ದೇಶದಲ್ಲಿ ಅರಾಜಕರ ಸುಳಿದಾಟವೂ ತಲೆದೋರಿತು. ಆಗ ಸರಕಾರದವರು ಶಾಂತತೆಯನ್ನು ಕಾದುಕೊಳ್ಳುವದಕ್ಕಾಗಿ **ರೌಲೆಟ್** ಆಕ್ಟ ಎಂಬ ಕಾಯದೆಯನ್ನು ಪಾಸು

ಮಾಡಿಕೊಂಡರು. ಈ ಕಾಯದೆಯ ನಿಷೇಧಕ್ಕಾಗಿ ಅಮೃತಸರದ **ಜಾಲಿಯನ್ ವಾಲಾಬಾಗ** ಎಂಬಲ್ಲಿ ಜಾಹೀರ ಸಭೆಯೊಂದು ಕೂಡಿರಲು, ಅದನ್ನು ತಡೆಯುವದಕ್ಕಾಗಿ ಜನರಲ್ **ಡಾಯರ** ಎಂಬ ದಂಡಿನ ಅಧಿಕಾರಿಯು ಅದರ ಮೇಲೆ ಗುಂಡುಹಾರಿಸಿದನು ಆದರಿಂದ ಬಹು ಜನರು ಜೀವಕ್ಕೆ ಎರವಾದರು. ಈ ಕೃತ್ಯದ ಮೂಲಕ ದೇಶದಲ್ಲಿ ತೀವ್ರವಾದ ಅಸಂತೋಷವು ಉಂಟಾಯಿತು.


ಮೌ. ಮಹಮ್ಮದ ಅಲಿ

**೫. ಉಳಿದ ಕೆಲಸಗಳು**-- ಈ ಕಾಲದಲ್ಲಿ ಸೈನ್ಯದ ಹೆಚ್ಚಿನ ಅಧಿಕಾರದ ಸ್ಥಳಗಳು ಹಿಂದೀಯರಿಗೆ ಸಿಗಹತ್ತಿದವು. ಸೆರೆಮನೆಗಳ ಸುಧಾರಣೆಯಾಯಿತಲ್ಲದೆ ಕರಿನೀರಿನ ಶಿಕ್ಷೆ ಹೊಂದಿದವರನ್ನು **ಅಂದಮಾನಕ್ಕೆ** ಕಳುಹುವುದು ಕಟ್ಟಾಯಿತು. ದೇಶೀಯ ಸಂಸ್ಥಾನಿಕರ ಹಿತ ಸಂಬಂಧವನ್ನು ಕಾದುಕೊಳ್ಳುವದಕ್ಕೋಸ್ಕರ **ನರೇಂದ್ರ ಮಂಡಲ** ಎಂಬ ಸಂಸ್ಥೆಯು ಸ್ಥಾಪಿಸಲ್ಪಟ್ಟಿತು. ದಕ್ಷಿಣ ಮತ್ತು ಪೂರ್ವ ಆಫ್ರಿಕೆಗಳಲ್ಲಿಯ ಹಿಂದೀಯರ ಹಕ್ಕುಗಳ ಸಂರಕ್ಷಣೆಯು ಪ್ರಯತ್ನವಾಯಿತು ಕ್ರಿ. ಶ ೧೯೨೧ರ ಮಾರ್ಚ ತಿಂಗಳಲ್ಲಿ ಚೇಮ್ಸಫರ್ಡನು ಹೋಗಿ, **ಲಾರ್ಡ ರೀಡಿಂಗನು** ವ್ಹಾಯಿಸರಾಯನಾಗಿ ಬಂದನು.

---

## ೨೫ ನೆಯ ಪಾಠ

### ಲಾರ್ಡ ರೀಡಿಂಗ (ಕ್ರಿ. ಶ. ೧೯೨೧-೧೯೨೬) ಲಾರ್ಡ ಆಯರ್ವಿನ್. (ಕ್ರಿ ಶ ೧೯೨೬-೧೯೩೧)

### ಲಾರ್ಡ ವಿಲಿಂಗ್ಡನ್ (ಕ್ರಿ ಶ ೧೯೩೧-೧೯೩೬)

**೧. ಲಾರ್ಡ ರೀಡಿಂಗ**:— ಕ್ರಿ. ಶ **೧೯೨೧-೧೯೨೬** ಇವನು ಇಂಗ್ಲಂಡದ ಮುಖ್ಯ ನ್ಯಾಯಾಧೀಶನೂ ಮಂತ್ರಿಮಂಡಲದ ಒಬ್ಬಮಂತ್ರಿಯೂ

ಅಮೇರಿಕೆಯಲ್ಲಿಯ ಇಂಗ್ಲಂಡದ ವಕೀಲನೂ ಆಗಿ, ಬಹಳ ಅನುಭವಿಕನಾದ್ದನು. **ಇವನ ಕಾಲದಲ್ಲಿ ಸಂಭವಿಸಿದ ಸಂಗತಿಗಳು— ೧. ಹೊಸ ಕೌನ್ಸಿಲುಗಳ ಆರಂಭ** — ಕ್ರಿ. ಶ. ೧೯೨೧ ಮಾಂಟಫರ್ಡ ಸುಧಾರಣೆ-ಗಳಿಂದುಂಟಾದ ಹೊಸ ಕೌನ್ಸಿಲುಗಳನ್ನು ತೆರೆಯುವ ಕೆಲಸವು **ಡ್ಯೂಕ್ ಆಫ್ ಕನಾಟ್** ಅವರಿಂದ ಜರುಗಿತು. **೨. ಪ್ರಿನ್ಸ ಆಫ್ ವೇಲ್ಸರವರ ಆಗಮನ**— ಇದೇ ವರ್ಷದ ಕೊನೆಗೆ ಬಾದಶಹರ ಹಿರಿಯ ಮಕ್ಕಳಾದ **ಎಡ್ವರ್ಡ ಅಲ್ಬರ್ಟ**ರವರು ಈ ದೇಶಕ್ಕೆ ಬಂದು, ಮುಖ್ಯ ಮುಖ್ಯ ಪಟ್ಟಣಗಳನ್ನು ಸಂದರ್ಶಿಸಿದರು. **ಪುಣೆ** ಪಟ್ಟಣದಲ್ಲಿಯ **ಶ್ರೀ ಶಿವಾಜಿ ಸ್ಮಾರಕದ** ಆರಂಭವು ಇವರ ಕೈಯಿಂದಲೆ ಆಯಿತು. **೩. ಸಾಮ್ರಾಜ್ಯ ಪರಿಷತ್ತು**— ಬ್ರಿಟಿಶ ಸಾಮ್ರಾಜ್ಯದ ವಸಹಾತುಗಳಲ್ಲಿ ಹಿಂದೀಯರಿಗೆ ಸಮಾನತೆಯ ಹಕ್ಕುಗಳು ಇರಲಿಲ್ಲ. ಅಲ್ಲಿಯವರು, ಹಿಂದೀ ಜನರು ವಸಾಹತುಗಳನ್ನು ಬಿಟ್ಟುಹೋಗಬೇಕಾಗುವಂಥ ಕಾಯದೆಗಳನ್ನು ಮಾಡಿದ್ದರು ಆದದರಿಂದ ಈ ಕಾಯದೆಗಳ ವಿರುದ್ಧವಾಗಿ ಸಾಮ್ರಾಜ್ಯ ಪರಿಷತ್ತಿನಲ್ಲಿ ತಕರಾರು ನಡೆ-ಯಿತು. ಪರಿಷತ್ತಿನಲ್ಲಿ ಹಿಂದೀಯರಿಗೆ ಸಮಾನತೆಯ ಹಕ್ಕುಗಳು ಇರಬೇಕೆಂಬ ಮಾತು ಸಮ್ಮತವಾಗಿ **ನಾ. ಶಾಸ್ತ್ರಿ**ಯವರು ಸಾಮೋಪಾಯದ ಪ್ರಯತ್ನಗಳಿಗಾಗಿ ಕಾನಡಾ, ಆಸ್ಟ್ರೇಲಿಯಾ ಈ ವಸಹಾತುಗಳಿಗೆ ಕಳುಹಲ್ಪಟ್ಟರು. **೪. ಮೋಪಲಾ ಜನರ ದಂಗೆ**— ಮಲಬಾರ ಸೀಮೆಯ **ಮೋಪಲಾ** ಎಂಬ ಮುಸಲ್ಮಾನರು ಮದಾಂಧರಾಗಿ ಅಲ್ಲಿಯ ಹಿಂದುಗಳನ್ನು ಬಲಾತ್ಕಾರದಿಂದ ಕುಲಗೆಡಿಸುತ್ತ ಕೊಳ್ಳೆ-ಕೊಲೆ-ಸುಲಿಗೆಗಳನ್ನು ಮಾಡುತ್ತ ಭಯಂಕರವಾದ ಸ್ಥಿತಿಯನ್ನುಂಟುಮಾಡಿದರು. ಆಗ ಸರಕಾರದವರು ಸೈನ್ಯವನ್ನು ಕಳುಹಿ ಅಲ್ಲಿ ಶಾಂತತೆಯನ್ನು ನೆಲೆಸಿದರು. **೫ ರಾಜಕೀಯ ಚಟುವಟಿಕೆಯ ಸ್ವರೂಪ— ಪಕ್ಷ-ಉಪಪಕ್ಷಗಳು**— ರೀಡಿಂಗನ ಆಳಿಕೆಯ ಮಧ್ಯದವರೆಗೆ ಅಸಹಕಾರ ಚಟುವಟಿಕೆಯು ಭರದಿಂದ ಸಾಗಿತ್ತು. ಹೊಸ ಕಾಯದೆ ಕೌನ್ಸಿಲುಗಳೊಡನೆ ರಾಷ್ಟ್ರೀಯ ಸಭೆಯ ಅನುಯಾಯಿಗಳು ತಮ್ಮ ಸಂಬಂಧವನ್ನಿಡಲಿಲ್ಲ. ಅವರು ಕೌನ್ಸಿಲು, ಶಾಲೆ, ಕಾಲೇಜು, ಪದವಿ ಇವುಗಳನ್ನು ತ್ಯಜಿಸಹೇಳಿ ಖಾದಿಯ ಪ್ರಸಾರ, ರಾಷ್ಟ್ರೀಯ ಶಿಕ್ಷಣ, ಅಸ್ಪೃಶ್ಯತೆಯ ನಿವಾರಣೆ ಈ ಕಾರ್ಯಗಳನ್ನು ಕೈಕೊಂಡರು ಈ ಅಸಹಕಾರ ಚಟುವಟಿಕೆಯನ್ನು ತಡೆಯಲು ಸರಕಾರವು

ಎಷ್ಟೋ ಲೋಕನಾಯಕರನ್ನು ಸೆರೆಮನೆಗೆ ಕಳುಹಿತು. ಈ ಪ್ರಸಂಗದಲ್ಲಿ ಮ. ಗಾಂಧಿಯವರಿಗೂ ರಾಜದ್ರೋಹದ ಆರೋಪದಿಂದ ೬ ವರ್ಷದ ಶಿಕ್ಷೆಯಾಯಿತು. ಆದರೆ ಅವರ ಆರೋಗ್ಯವು ಕುಂದಿದ್ದರಿಂದ ಬೇಗ ಬಿಡುಗಡೆ ಹೊಂದಿದರು. ಕ್ರಿ. ಶ. ೧೯೨೪ರಲ್ಲಿ ತುರ್ಕಸ್ಥಾನದಲ್ಲಿ ರಾಜ್ಯಕ್ರಾಂತಿಯಾಗಿ **ಮುಸ್ತಫಾ ಕಮಾಲ ಪಾಚ್ಛಾನ** ಅಧ್ಯಕ್ಷತೆಯಲ್ಲಿ ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಯು



**ಶ್ರೀ. ವಿಠ್ಠಲಭಾಯಿ ಪಟೇಲ**

ಆರಂಭವಾಯಿತು. ಅಂದಿನಿಂದ ಹಿಂದುಸ್ಥಾನದಲ್ಲಿ ನಡೆದಿದ್ದ ಖಿಲಾಫತ್ ಚಟುವಟಿಕೆಯು ಸಹಜವಾಗಿಯೆ ನಿಂತುಹೋಯಿತು. ಮತ್ತು ಈ ಚಟುವಟಿಕೆಯ ನೆವದಿಂದ ಹಿಂದು-ಮುಸಲ್ಮಾನರಲ್ಲಿ ಉಂಟಾಗಿದ್ದ ಒಕ್ಕಟ್ಟು ಕಡಿಮೆಯಾಯಿತು. ಮುಂದೆ ಅಸಹಕಾರ ಚಟುವಟಿಕೆಯು ಕುಗ್ಗಿ. **ದೇ. ಚಿತ್ತರಂಜನ ದಾಸ ಇವರ** ಮುಂದಾಳುತನದಲ್ಲಿ **ಸ್ವರಾಜ್ಯ ಪಕ್ಷವು** ಸ್ಥಾಪಿತವಾಯಿತು. ಈ ಪಕ್ಷದ ಬಹುಮತದ ಬೆಂಬಲದಿಂದ **ಶ್ರೀಯುತ ವಿಠ್ಠಲಭಾಯಿ ಪಟೇಲರು ಲೇ.**

**ಅಸೆಂಬ್ಲಿಯ** ಅಧ್ಯಕ್ಷರಾದರು. ಈ ಸ್ವರಾಜ್ಯ ಪಕ್ಷವಲ್ಲದೆ **ಪ್ರಯೋಗಿ ಸಹಕಾರ** ಎಂಬ ಒಂದು ಉಪಪಕ್ಷವು ಉಂಟಾಯಿತು. ಹೀಗೆ ಪಕ್ಷೋಪಪಕ್ಷಗಳು ಹುಟ್ಟಿ ಅಸಹಕಾರ ಚಟುವಟಿಕೆಯು ಕಳೆಗುಂದಿತು. **೬. ಉಳಿದ ಕೆಲಸಗಳು—** ಕ್ರಿ. ಶ. ೧೯೨೫ರಲ್ಲಿ ನಿಜಾಮನು ವರ್‍ಹಾಡ ಪ್ರಾಂತವನ್ನು ಬಿಟ್ಟುಕೊಡಬೇಕೆಂದು ಕೇಳಲು ರೀಡಿಂಗನು ಅದು ಮರಳಿ ದೊರೆಯಲಾರದೆಂದು ತಿಳಿಸಿದನು. ಇಂಚಕೇಪ್ ಕಮಿಟಿಯು ವರ್ಷದ ವೆಚ್ಚವನ್ನು ೧೯॥ ಕೋಟಿ ರೂ. ಕಡಿಮೆ ಮಾಡಬಹುದೆಂದು ಸೂಚಿಸಿತು. ಆ ಮೇರೆಗೆ ಬೇರೆ ಬೇರೆ ಖಾತೆಗಳ ವೆಚ್ಚವು ಕಡಿಮೆ ಮಾಡಲ್ಪಟ್ಟಿತು **ಸ್ಯಂಡರ್ಸ್ಟ್ಯದ ಲಷ್ಕರೀ ಕಾಲೇಜಿಗೆ** ಹಿಂದೀ ತರುಣರನ್ನು ಕಳುಹಲು ಆರಂಭವಾಯಿತು. ಮಾಂಟಫರ್ಡ ಸುಧಾರಣೆಗಳ ಗುಣಾವಗುಣಗಳನ್ನು ಚರ್ಚಿಸಿ **ಮುಡಿಮನ್** ಕಮಿಟಿಯು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿತು. ಬಳಿಕ ರೀಡಿಂಗನು ವಿಲಾಯತಿಗೆ ಹೋಗಿ ಭಾರತ ಮಂತ್ರಿಗಳೊಡನೆ ಮುಂದಿನ ಧೋರಣೆಯ ವಿಷಯವನ್ನು ಆರೆದಾಡಿ ಮರಳಿ ಬಂದನು. ಆಗ ಭಾರತ ಮಂತ್ರಿಗಳಾಗಿದ್ದ **ಬರ್ಕನ್ ಹೆಡ್** ಅವರು ' ಎಲ್ಲ ಪಕ್ಷದವರು ಒಮ್ಮನಸ್ಸಿನಿಂದ ಬೇಡಿಕೆಯನ್ನು ಸಿದ್ಧಗೊಳಿಸಿದಲ್ಲಿ ಅದರ ವಿಚಾರಣೆಗಾಗಿ ಸರಕಾರವು ಕಮಿಶನವನ್ನು ನಿಯಮಿಸಬಹುದು ; ' ಎಂದು ತಿಳಿಸಿದರು. ಇದೇ ಹೊತ್ತಿಗೆ ರೀಡಿಂಗನ ಅವಧಿ ಮುಗಿದುದರಿಂದ **ಲಾರ್ಡ ಆಯರ್ವಿನ್** ಎಂಬವನು ವ್ಹಾಯಿಸರಾಯನಾದನು.

**೨. ಲಾರ್ಡ ಆಯರ್ವಿನ್** :— ಕ್ರಿ. ಶ. ೧೯೨೬ — ೧೯೩೧. **೧. ಒಕ್ಕಲತನದ ಸುಧಾರಣೆ—** ಇವನ ಒಕ್ಕಲತನದ ಸುಧಾರಣೆಯ ವಿಷಯದಲ್ಲ ಹೆಚ್ಚಾಗಿ ಮನಸ್ಸುಹಾಕಿದನು. ಮತ್ತು ಅದರ ಸುಧಾರಣೆಗಾಗಿ ಒಂದು ಕಮಿಶನವನ್ನು ಗೊತ್ತುಮಾಡಿದನು. ಕ್ರಿ. ಶ. ೧೯೨೬ರಲ್ಲಿ ಮುಂಬಯಿ ಇಲಾಖೆಯ ಒಕ್ಕಲತನದ ಪ್ರದರ್ಶನವು ಪುಣೆಯಲ್ಲಿ ಆಯಿತು. **೨. ಹಿಂದೂ-ಮುಸಲ್ಮಾನರ ದಂಗೆ—** ಇದೇ ವರ್ಷ ಅಲ್ಲಲ್ಲಿ ಹಿಂದೂ-ಮುಸಲ್ಮಾನರಲ್ಲಿ ದಂಗೆಗಳಾದವು. ಹಿಂದುಗಳು **ಶುದ್ಧಿ** ಮತ್ತು **ಸಂಘಟನೆ** ಈ ಕೆಲಸಗಳನ್ನು ಆರಂಭಿಸಿದರು. ಈ ವರ್ಷದ ಕೊನೆಯಲ್ಲಿ ಹಿಂದು ಸಂಘಟನೆಯ ಮುಂದಾಳುಗಳಾದ **ಸ್ವಾಮಿ ಶ್ರದ್ಧಾನಂದರ** ಕೊಲೆಯಾಯಿತು. **೩. ಸಾಯಮನ್ ಕಮಿಶನ್**—ಕ್ರಿ ಶ. ೧೯೨೭-೨೮. ಸುಧಾರಣಾ ಕಾಯದೆಯ ವಿಚಾರಣೆಗಾಗಿ

ಪಾರ್ಲಮೆಂಟಿನವನರು **ಸರ್ ಸಾಯಮನ್** ಎಂಬವನು ಅಧ್ಯಕ್ಷನಾಗಿರುವಂತೆ ಏಳು ಜನರ ಒಂದು ಕಮಿಶನವನ್ನು ಗೊತ್ತುಮಾಡಿದರು ಇದರಲ್ಲಿ ಹಿಂದೀ ಸಭಾಸದನೊಬ್ಬನೂ ಇರಲಿಲ್ಲ. ಕಮಿಶನದ ಈ ರಚನೆಯು ಸದೋಷವೆನಿಸಿದ್ದರಿಂದ ಹಿಂದೀ ಮುಂದಾಳುಗಳು ಇದರೊಡನೆ ಸಂಬಂಧವನ್ನಿಡಲಿಲ್ಲ. ಈ ಕಮಿಶನವು ಎರಡು ಸರತಿ ಹಿಂದುಸ್ಥಾನಕ್ಕೆ ಬಂದು ಹೋಗಿ ತನ್ನ ವರದಿಯನ್ನು ಪ್ರಸಿದ್ಧಿಸಿತು. ೪. **ನೆಹರು ರಿಪೋರ್ಟ**– ೧೯೨೮. ಸಾಯಮನ್ ಕಮಿಶನ್‌ದಲ್ಲಿ ಹಿಂದೀ ಪ್ರತಿನಿಧಿಗಳನ್ನು ಸೇರಿಸಿಕೊಳ್ಳಬೇಕೆಂಬಬೇಡಿಕೆಯನ್ನು ಪಾರ್ಲಿಮೆಂಟಿನವರು ಅಲ್ಲಗಳೆಯಲು, ಹಿಂದುಸ್ಥಾನದಲ್ಲಿಯ ಎಲ್ಲರಾಜಕೀಯ ಪಕ್ಷವವರು ಒಂದಾಗಿ ತಮ್ಮ ಸಂಯುಕ್ತ ಪರಿಷತ್ತನ್ನು ಲಖನೌದಲ್ಲಿ ನೆರೆಯಿಸಿದರು. ಈ ಪರಿಷತ್ತಿನಲ್ಲಿ ಹಿಂದೀ ಜನರ ಒಮ್ಮನಸ್ಸಿನ ಬೇಡಿಕೆಗಳನ್ನು ಸಜ್ಜುಗೊಳಿಸುವದಕ್ಕಾಗಿ **ಪಂಡಿತ ಮೋತಿಲಾಲ ನೆಹರು** ಇವರು ಅಧ್ಯಕ್ಷರಾಗಿರುವ ಒಂದು ಕಮಿಟಿಯು ಗೊತ್ತುಮಾಡಲ್ಪಟ್ಟಿತು ಈ ಕಮಿಟಿಯವರು ಹಿಂದುಸ್ಥಾನಕ್ಕೋಸ್ಕರ ವಸಹಾತುಗಳಲ್ಲಿಯಂತಹ ಸ್ವರಾಜ್ಯದ ಯೋಜನೆಯನ್ನು ಸಿದ್ಧಪಡಿಸಿದರು. ಈ ಯೋಜನೆಯು **ನೆಹರು ರಿಪೋರ್ಟ** ಎಂಬ ಹೆಸರಿನಿಂದ ಪ್ರಸಿದ್ಧಿಯನ್ನು ಪಡೆಯಿತು ೫. **ಮೊದಲನೆಯ ರಾವುಂಡ್ ಟೇಬಲ್ ಕಾನ್ಫರನ್ಸ** (ದುಂಡುಮೇಜಿನ ಪರಿಷತ್ತು)—ಕ್ರಿ ಶ. **೧೯೩೦.** ಸಾಯಮನ್ ಕಮಿಶನದ ವರದಿಯು ಪ್ರಸಿದ್ಧವಾದ ಬಳಿಕ ಅದರ ವಿಚಾರಣೆಗಾಗಿ ಲಂಡನ ಪಟ್ಟಣದಲ್ಲಿ ದುಂಡುಮೇಜಿನ ಪರಿಷತ್ತು ನೆರೆಯಿಸಲ್ಪಟ್ಟಿತು. ಮುಖ್ಯ ಮಂತ್ರಿಗಳಾದ



**ಲಾರ್ಡ ಆಯರ್ವಿನ್**

ಇಂಗ್ಲಂಡದ **ಮಿ.ರ್‍ಯಾಮ್ಸೆಮ್ಯಾಕ್‌ಡೋನಾಲ್ಡರು** ಈ ಪರಿಷತ್ತಿನಲ್ಲಿ ಮಹತ್ವದ ಕಾರ್ಯ ಭಾಗವನ್ನು ವಹಿಸಿದ್ದರು. ಈ ಪರಿಷತ್ತಿನಲ್ಲಿ ಹೊಸ ರಾಜ್ಯಘಟನೆಯಲ್ಲಿ ಬ್ರಿಟಿಷ ಹಿಂದುಸ್ಥಾನದ ಪ್ರತಿನಿಧಿಗಳೊಂದಿಗೆ ಸಂಸ್ಥಾನಿಕರ ಪ್ರತಿನಿಧಿಗಳೂ ಸೇರಿಕೊಳ್ಳಬೇಕೆಂದು ಗೊತ್ತಾಯಿತು. ಆದರೆ ಹಿಂದೀ ರಾಷ್ಟ್ರೀಯ ಪಕ್ಷದ ಮುಂದಾಳುಗಳು ಈ ಪರಿಷತ್ತಿಗೆ

**ಮ್ಯಾಕಡೋನಾಲ್ಡರು**



ಹೋಗಲಿಲ್ಲ. ಇಷ್ಟೇ ಅಲ್ಲ; ಲಾಹೋರದಲ್ಲಿ ಪಂ. **ಜವಾಹರಲಾಲ ನೆಹರು** ಇವರ ಅಧ್ಯಕ್ಷತೆಯಲ್ಲಿ ಅಖಿಲಭಾರತ ರಾಷ್ಟ್ರೀಯ ಸಭೆಯು ಸೆರೆದು ಅದರಲ್ಲಿ 'ಪೂರ್ಣ ಸ್ವಾತಂತ್ರ್ಯವೇ ಕಾಂಗ್ರೇಸದ ಹೆಗ್ಗುರಿ' ಎಂದು ಸಾರಲಾಯಿತು. ಇಷ್ಟೇ ಅಲ್ಲ: ಅವರು ಮಹಾತ್ಮಾ ಗಾಂಧಿಯವರ ನೇತೃತ್ವದಲ್ಲಿ ಕಾಯದೇಭಂಗದ ಚಟುವಟಿಕೆಯನ್ನಾರಂಭಿಸಿದರು ಈ ಚಟುವಟಿಕೆಯು ದೇಶದ ಹಳ್ಳಿಪಳ್ಳಿಗಳಲ್ಲಿಯೂ ಹೆಚ್ಚಾಗಿ



**ಪಂಡಿತ ಜವಾಹರಲಾಲರು**

ಹಬ್ಬಿತು. ಆಗ ಸರಕಾರದವರು ಕೆಲವು **ಆರ್ಡಿನನ್ಸ** (ಒಟ್ಟು ಹುಕುಮು) ಗಳನ್ನು ಹೊರಡಿಸಿ ದೇಶದಲ್ಲಿಯ ಅಸ್ವಸ್ಥತೆಯನ್ನು ಅಡಗಿಸುವ ಪ್ರಯತ್ನ ಮಾಡಿದರು ಈ ಪ್ರಸಂಗದಲ್ಲಿ ಎಷ್ಟೋ ಮುಂದಾಳುಗಳೂ ಸಹಸ್ರಾವಧಿ ಜನರೂ ಸೆರೆಮನೆಗೆ ಕಳುಹಲ್ಪಟ್ಟರು. **೨ನೇಯ ರೌಂಡ ಟೇಬಲ್ ಕಾನ್ಫರನ್ಸ**— ಕ್ರಿ. ಶ ೧೯೩೧ ಒಂದನೆಯ ರಾವುಂಡ ಟೇಬಲ್ ಕಾನ್ಫರನ್ಸಿನ ಕೆಲಸವು ಮುಗಿದಬಳಿಕ ಅನುಕೂಲವಾದ ಪರಿಸ್ಥಿತಿಯನ್ನುಂಟುಮಾಡುವದಕ್ಕೋಸ್ಕರ ಸರಕಾರವು **ಮ. ಗಾಂಧಿ** ಮೊದಲಾದ ಮುಂದಾಳುಗಳನ್ನು



**ಡಾ. ಅನಸಾರಿ**

ಸೆರೆಮನೆಯಿಂದ ಬಿಟ್ಟಿತು ಮುಂದೆ **ಸರ್ ಸಪ್ರೂ, ಬ್ಯಾರಿಸ್ಟರ ಜಯಕರ** ಇವರ ವಿಶೇಷ ಪ್ರಯತ್ನದಿಂದ ಮಹಾತ್ಮಾ ಗಾಂಧಿಯವರು **ಲಾರ್ಡ ಅಯ-ರ್ವಿನ್** ಇವರ ಕೂಡ ರಾಜಕೀಯ ಪರಿಸ್ಥಿತಿಯ ಸಂಬಂಧ ಚರ್ಚೆ ಮಾಡಲೊಪ್ಪಿ ವರ್ಕಿಂಗ ಕಮೀಟಿಯ ಮೆಂಬರರನ್ನು ದಿಲ್ಲಿಗೆ ಬರಲು ತಿಳಿಸಿದರು. **ಡಾ. ಅನಸಾರಿ** ಇವರ ಮನೆಯಲ್ಲಿ ವರ್ಕಿಂಗ ಕಮೀಟಿಯ ಸಭೆಸೇರಿ ಚರ್ಚೆ

ಯಾಗಿ ಗಾಂಧಿ-ಆಯರ್ವಿನರ ಕರಾರುಗಳಾದವು. ಇದರಿಂದ ದೇಶದಲ್ಲಿ ಶಾಂತತೆಯ ವಾತಾವರಣವು ಉಂಟಾಯಿತು. ಮತ್ತು ರಾಜ್ಯ ಘಟನೆಯ ವಿಚಾರಣೆಗಾಗಿ ೨ನೆಯ ರಾವುಂಡ್ ಟೇ. ಕಾನ್ಫರನ್ಸ ನೆರೆಯುವದು ಗೊತ್ತಾಯಿತು. ಇದೇ ಸಮಯಕ್ಕೆ ಎಂದರೆ ಎಪ್ರಿಲ್ ೧೯೩೧ರಲ್ಲಿ ಲಾರ್ಡ -ಆಯರ್ವಿನನ ಸ್ಥಳದಲ್ಲಿ **ಲಾರ್ಡ ವಿಲಿಂಗ್ಡನನು** ವ್ಹಾಯಿಸರಾಯನಾದನು.

**ಲಾರ್ಡ ವಿಲಿಂಗ್ಡನ್** :— ಕ್ರಿ. ಶ. **೧೯೩೧–೧೯೩೬.** ಇವನು ಈ ಮೊದಲು ಕ್ರಿ. ಶ. ೧೯೧೪-೧೮ರ ವರೆಗೆ ನಮ್ಮ ಮುಂಬಯಿ ಇಲಾಖೆಯ ಗವ್ಹರ್ನರನಾಗಿ ಕೆಲಸ ಮಾಡಿದ್ದರಿಂದ ಇವನು ಈ ದೇಶದ ಪರಿಸ್ಥಿತಿಯನ್ನು ಚನ್ನಾಗಿ ಅರಿತವನಾಗಿದ್ದನು. ಅಲ್ಲದೆ ಇವನು ವಸಾಹತಿಯಲ್ಲಿಯಂತಹ **( ಡೋಮಿನಿಯನ್ ಸ್ಟೇಟ್ಸ )** ರಾಜ್ಯ ಪದ್ಧತಿಯು ಹಿಂದುಸ್ತಾನದಲ್ಲಿ ಸ್ಥಾಪಿತವಾಗಬೇಕೆಂಬ ಅಭಿಪ್ರಾಯ ಉಳ್ಳವನಾಗಿದ್ದನು. ಗೊತ್ತಾದ ಮೇರೆಗೆ ಕ್ರಿ. ಶ. **೧೯೩೧**ರ ಕೊನೆಯ ಸುಮಾರಕ್ಕೆ ೨ನೆಯ ರಾ. ಟೇ. ಕಾನ್ಫರನ್ಸ ಆರಂಭವಾಯಿತು. ಮ. ಗಾಂಧಿಯವರು ವಿಲಾಯತಿಗೆ ಹೋಗಿ ಈಕಾನ್ಫರನ್ಸಿನ ಕೆಲಸವು ಉಪಯುಕ್ತವಾಗುವದಕ್ಕೋಸ್ಕರ ಮನಃಪೂರ್ವಕವಾಗಿ ಪ್ರಯತ್ನ ಮಾಡಿದರು ಆಗ ಅಲ್ಲಿ ರಾಜ್ಯಘಟನೆಯ ಬಹುತರ ಎಲ್ಲ ಅಂಗಗಳ ಸಾಮಾನ್ಯ ಸ್ವರೂಪವು ನಿಶ್ಚಿತವಾಯಿತು. ಆದರೆ ಹಿಂದು-ಮುಸಲ್ಮಾನ ಮೊದಲಾದ ಪಂಗಡಗಳ ಹಕ್ಕುಗಳ ಪ್ರಮಾಣವು ಮಾತ್ರ ನಿಶ್ಚಯಿಸಲ್ಪಡಲಿಲ್ಲ. ಆದುದರಿಂದ ಮುಖ್ಯ ಮಂತ್ರಿಗಳು ಆ ಅಧಿಕಾರವನ್ನು ತಮ್ಮ ಕಡೆಗಿಟ್ಟುಕೊಂಡು ಕಾನ್ಫರನ್ಸನ್ನು ಮುಗಿಸಿದರು.

ಇತ್ತ ಹಿಂದುಸ್ತಾನದಲ್ಲಿ ಲಾರ್ಡವಿಲಿಂಗ್ಡನನ ಆಳಿಕೆಯಲ್ಲಿಯೂ ಕೆಲವು ಆರ್ಡಿನನ್ಸುಗಳು ಹೊರಟವು. ಕಾಯದೆಭಂಗದ ಚಟುವಟಿಕೆಯನ್ನು ಅಡಗಿಸುವದಕ್ಕೋಸ್ಕರ ಮ. ಗಾಂಧಿಯವರೇ ಮೊದಲಾದ ಸಾವಿರಾರುಜನರು ಸೆರೆಮನೆಗೆ ಕಳುಹಲ್ಪಟ್ಟರು.

ಮುಂದೆ ಕ್ರಿ. ಶ. ೧೯೩೨ರಲ್ಲಿ ಮುಖ್ಯಮಂತ್ರಿಗಳು ಜಾತಿನಿರ್ಣಯವನ್ನು ಪ್ರಸಿದ್ಧಿಸಿದರು. ಆದರಲ್ಲಿ ಅವರು ಅಸ್ಪೃಶ್ಯರಿಗಾಗಿಯೂ ಸ್ವತಂತ್ರ ಮತದಾರ ಸಂಘವಿರಬೇಕೆಂದು ಸೂಚಿಸಿದ್ದರು. ಆದರೆ ಅಸ್ಪೃಶ್ಯರ ಏಳ್ಗೆಗಾಗಿ ಹಗಲಿರುಳು ಯತ್ನಿಸುವ ಮಹಾತ್ಮಾ ಗಾಂಧಿಯವರಿಗೆ ಈ ಮಾತು ಸರಿಬರಲಿಲ್ಲ. ಅವರು

ಅಸ್ಪೃಶ್ಯರ ಮುಂದಾಳುಗಳಾದ **ಡಾ. ಅಂಬೇಡಕರರನ್ನು** ಸಮಾಧಾನಗೊಳಿಸಿ ಅವರ ಒಪ್ಪಿಗೆಯೊಂದಿಗೆ "ಹಿಂದು ಮಾತ್ರರಿಗೆಲ್ಲ ಒಂದೇ ಮತದಾರ ಸಂಘವಿರಬೇಕು." ಎಂದು ತಿಳುಹಿಸಿದರು. ಅದಕ್ಕನುಸಾರವಾಗಿ ಮುಖ್ಯ ಮಂತ್ರಿಗಳು ತಮ್ಮ ನಿರ್ಣಯದಲ್ಲಿ ತಕ್ಕ ಬದಲಾವಣೆಯನ್ನು ಮಾಡಿದರು. **೩ನೆಯ ರಾವುಂಡ್ ಟೇಬಲ್ ಕಾನ್ಫರನ್ಸ**— ಕ್ರಿ. ಶ ೧೯೩೨ರ ಕೊನೆಯ ಸುಮಾರಿಗೆ ೩ನೆಯ ರಾ. ಟೆ. ಕಾನ್ಫರನ್ಸು ನೆರೆದು ಅದರಲ್ಲಿ ರಾಜ್ಯಘಟನೆಯ ವಿಚಾರಣೆಯ ಕೆಲಸವು ಮುಗಿಸಲ್ಪಟ್ಟಿತು. ಬಳಿಕ ಕ್ರಿ ಶ. ೧೯೩೩ರ ಮಾರ್ಚ ತಿಂಗಳಿನಲ್ಲಿ ಬ್ರಿಟಿಷ ಸರಕಾರದವರು ಹೊಸ ರಾಜ್ಯಘಟನೆಯ ಸ್ವರೂಪವನ್ನು ವ್ಯಕ್ತಪಡಿಸುವ **ಶುಭ್ರಪತ್ರಿಕೆ (ವ್ಹಾಯಿಟ್ ಪೇಪರ್)** ಯನ್ನು ಪ್ರಸಿದ್ಧಿಸಿದರು. ಮತ್ತು ಈ ಪತ್ರಿಕೆಯ ಚರ್ಚೆಗಾಗಿ ಪಾರ್ಲಮೆಂಟಿನ **ಜಾಯಿಂಟ್ ಸಿಲೆಕ್ಟ ಕಮಿಟಿಯನ್ನು** ಗೊತ್ತುಮಾಡಿರುವರು.

ಈ ಕಮಿಟಿಯವರು ಸುಮಾರು ಒಂದುವರೆ ವರ್ಷದವರೆಗೆ ವಿಚಾರಣೆಯ ಕೆಲಸವನ್ನು ಸಾಗಿಸಿ ಒಂದು ವರದಿಯನ್ನು ಸಿದ್ಧಪಡಿಸಿದರು. ಈ ವರದಿಯು ಕ್ರಿ. ಶ. ೧೯೩೪ರ ನವ್ಹಂಬರ ೨೨ನೆಯ ತಾರೀಖಿನ ದಿನ ಇಂಗ್ಲಂಡ-ಹಿಂದುಸ್ಥಾನಗಳಲ್ಲಿ ಒಮ್ಮೆಲೆ ಪ್ರಸಿದ್ಧವಾಯಿತು. ಬಳಿಕ ಈ ವರದಿಯ ಆಧಾರದಿಂದ ಮಂತ್ರಿಮಂಡಲದವರು ಹೊಸ ರಾಜ್ಯಘಟನೆಯ ಮಸೂದೆಯೊಂದನ್ನು ಸಿದ್ಧಪಡಿಸಿ ಪಾರ್ಲಿಮೆಂಟಿನ ಮುಂದೆ ಇರಿಸಿದರು. ಪಾರ್ಲಿಮೆಂಟಿನವರು ಈ ಮಸೂದೆಯಲ್ಲಿ ಕೆಲವು ತಿದ್ದುಪಡೆಮಾಡಿ ೧೯೩೫ರ ಹಿಂದುಸ್ಥಾನದ ಕಾಯದೆಯನ್ನು ಪಾಸುಮಾಡಿದರು. ಈ ಕಾಯ್ದೆಯ ಮೇರೆಗೆ ಸುಧಾರಣೆಯು ಅಮಲಿನಲ್ಲಿ ತರಬೇಕೆಂದು ಬಾದಷಾಹರು ೧೨೮೧೯೩೫ನೆಯ ದಿವಸ ಜಾಹೀರಪಡಿಸಿದರು. ಆಗ ಈ ಕಾಯ್ದೆಯು ಅಸಮಾಧಾನಕರವಾಗಿರುವದೆಂದು ಭಾರತೀಯ ಮುಖಂಡರು ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸಿದರು. ಆದರೂ ಸರಕಾರದವರು ೧೯೩೭ರ ಎಪ್ರಿಲ ೧ನೆಯ ತಾರೀಖಿನಿಂದ ಈ ಹೊಸ ಕಾಯ್ದೆಯನ್ನು ಅಮಲಿನಲ್ಲಿ ತರಬೇಕೆಂದು ನಿಶ್ಚಯಿಸಿದರು.

ಈ ಕಾಲದಲ್ಲಿ ಬಿಹಾರ ಪ್ರಾಂತದಲ್ಲಿಯೂ ಕ್ವೇಟಾ ಪಟ್ಟಣದಲ್ಲಿಯೂ ಉಗ್ರಸ್ವರೂಪದ ಭೂಕಂಪವಾಗಿ ವರ್ಣಿಸಲು ಅಸಾಧ್ಯವಾದ ಅನಾಹುತಕ್ಕೆ ಜನರು ಸಿಲುಕಿದ್ದರಿಂದ ಜೀವಿತ ವಿತ್ತಗಳ ಅಪಾರವಾದ ಹಾನಿಯೊದಗಿತು.

ಯಾಗಿ ಗಾಂಧಿ-ಆಯರ್ವಿನರ ಕರಾರುಗಳಾದವು. ಇದರಿಂದ ದೇಶದಲ್ಲಿ ಶಾಂತತೆಯ ವಾತಾವರಣವು ಉಂಟಾಯಿತು. ಮತ್ತು ರಾಜ್ಯ ಘಟನೆಯ ವಿಚಾರಣೆಗಾಗಿ ೨ನೆಯ ರಾವುಂಡ್ ಟೇ. ಕಾನ್ಫರನ್ಸು ನೆರೆಯುವದು ಗೊತ್ತಾಯಿತು. ಇದೇ ಸಮಯಕ್ಕೆ ಎಂದರೆ ಎಪ್ರಿಲ್ ೧೯೩೧ರಲ್ಲಿ ಲಾರ್ಡ ಆಯರ್ವಿನನ ಸ್ಥಳದಲ್ಲಿ **ಲಾರ್ಡ ವಿಲಿಂಗ್ಡನನು** ವ್ಹಾಯಿಸರಾಯನಾದನು.

**ಲಾರ್ಡ ವಿಲಿಂಗ್ಡನ್** :— ಕ್ರಿ. ಶ. **೧೯೩೧—೧೯೩೬.** ಇವನು ಈ ಮೊದಲು ಕ್ರಿ. ಶ. ೧೯೧೩-೧೮ರ ವರೆಗೆ ನಮ್ಮ ಮುಂಬಯಿ ಇಲಾಖೆಯ ಗವ್ಹರ್ನರನಾಗಿ ಕೆಲಸ ಮಾಡಿದ್ದರಿಂದ ಇವನು ಈ ದೇಶದ ಪರಿಸ್ಥಿತಿಯನ್ನು ಚನ್ನಾಗಿ ಅರಿತವನಾಗಿದ್ದನು. ಅಲ್ಲದೆ ಇವನು ವಸಾಹತಿಯಲ್ಲಿಯಂತಹ **( ಡೋಮಿನಿಯನ್ ಸ್ಟೇಟ್ಸ )** ರಾಜ್ಯ ಪದ್ಧತಿಯು ಹಿಂದುಸ್ತಾನದಲ್ಲಿ ಸ್ಥಾಪಿತವಾಗಬೇಕೆಂಬ ಅಭಿಪ್ರಾಯ ಉಳ್ಳವನಾಗಿದ್ದನು. ಗೊತ್ತಾದ ಮೇರೆಗೆ ಕ್ರಿ. ಶ. **೧೯೩೧**ರ ಕೊನೆಯ ಸುಮಾರಕ್ಕೆ ೨ನೆಯ ರಾ. ಟೇ. ಕಾನ್ಫರನ್ಸು ಆರಂಭವಾಯಿತು. ಮ. ಗಾಂಧಿಯವರು ವಿಲಾಯತಿಗೆ ಹೋಗಿ ಈ ಕಾನ್ಫರನ್ಸಿನ ಕೆಲಸವು ಉಪಯುಕ್ತವಾಗುವದಕ್ಕೋಸ್ಕರ ಮನಃಪೂರ್ವಕವಾಗಿ ಪ್ರಯತ್ನ ಮಾಡಿದರು ಆಗ ಅಲ್ಲಿ ರಾಜ್ಯಘಟನೆಯ ಬಹುತರ ಎಲ್ಲ ಅಂಗಗಳ ಸಾಮಾನ್ಯ ಸ್ವರೂಪವು ನಿಶ್ಚಿತವಾಯಿತು. ಆದರೆ ಹಿಂದು ಮುಸಲ್ಮಾನ ಮೊದಲಾದ ಪಂಗಡಗಳ ಹಕ್ಕುಗಳ ಪ್ರಮಾಣವು ಮಾತ್ರ ನಿಶ್ಚಯಿಸಲ್ಪಡಲಿಲ್ಲ. ಆದುದರಿಂದ ಮುಖ್ಯ ಮಂತ್ರಿಗಳು ಆ ಅಧಿಕಾರವನ್ನು ತಮ್ಮ ಕಡೆಗಿಟ್ಟುಕೊಂಡು ಕಾನ್ಫರನ್ಸನ್ನು ಮುಗಿಸಿದರು.

ಇತ್ತ ಹಿಂದುಸ್ತಾನದಲ್ಲಿ ಲಾರ್ಡವಿಲಿಂಗ್ಡನನ ಆಳಿಕೆಯಲ್ಲಿಯೂ ಕೆಲವು ಆರ್ಡಿನನ್ಸುಗಳು ಹೊರಟವು. ಕಾಯದೆಭಂಗದ ಚಟುವಟಿಕೆಯನ್ನು ಅಡಗಿಸುವದಕ್ಕೋಸ್ಕರ ಮ. ಗಾಂಧಿಯವರೇ ಮೊದಲಾದ ಸಾವಿರಾರು ಜನರು ಸೆರೆಮನೆಗೆ ಕಳುಹಲ್ಪಟ್ಟರು.

ಮುಂದೆ ಕ್ರಿ. ಶ. ೧೯೩೨ರಲ್ಲಿ ಮುಖ್ಯಮಂತ್ರಿಗಳು ಜಾತಿನಿರ್ಣಯವನ್ನು ಪ್ರಸಿದ್ಧಿಸಿದರು. ಆದರಲ್ಲಿ ಅವರು ಅಸ್ಪೃಶ್ಯರಿಗಾಗಿಯೂ ಸ್ವತಂತ್ರ ಮತದಾರ ಸಂಘವಿರಬೇಕೆಂದು ಸೂಚಿಸಿದ್ದರು. ಆದರೆ ಅಸ್ಪೃಶ್ಯರ ಏಳ್ಗೆಗಾಗಿ ಹಗಲಿರುಳು ಯತ್ನಿಸುವ ಮಹಾತ್ಮಾ ಗಾಂಧಿಯವರಿಗೆ ಈ ಮಾತು ಸರಿಬರಲಿಲ್ಲ. ಅವರು

ಅಸ್ಪೃಶ್ಯರ ಮುಂದಾಳುಗಳಾದ **ಡಾ. ಅಂಬೇಡಕರರನ್ನು** ಸಮಾಧಾನಗೊಳಿಸಿ ಅವರ ಒಪ್ಪಿಗೆಯೊಂದಿಗೆ "ಹಿಂದು ಮಾತ್ರರಿಗೆಲ್ಲ ಒಂದೇ ಮತದಾರ ಸಂಘವಿರಬೇಕು." ಎಂದು ತಿಳುಹಿಸಿದರು. ಅದಕ್ಕನುಸಾರವಾಗಿ ಮುಖ್ಯ ಮಂತ್ರಿಗಳು ತಮ್ಮ ನಿರ್ಣಯದಲ್ಲಿ ತಕ್ಕ ಬದಲಾವಣೆಯನ್ನು ಮಾಡಿದರು. **೩ನೆಯ ರಾವುಂಡ್ ಟೇಬಲ್ ಕಾನ್ಫರನ್ಸ**— ಕ್ರಿ. ಶ ೧೯೩೨ರ ಕೊನೆಯ ಸುಮಾರಿಗೆ ೩ನೆಯ ರಾ. ಟಿ. ಕಾನ್ಫರನ್ಸು ನೆರೆದು ಅದರಲ್ಲಿ ರಾಜ್ಯಘಟನೆಯ ವಿಚಾರಣೆಯ ಕೆಲಸವು ಮುಗಿಸಲ್ಪಟ್ಟಿತು. ಬಳಿಕ ಕ್ರಿ ಶ. ೧೯೩೩ರ ಮಾರ್ಚ ತಿಂಗಳಿನಲ್ಲಿ ಬ್ರಿಟಿಷ ಸರಕಾರದವರು ಹೊಸ ರಾಜ್ಯಘಟನೆಯ ಸ್ವರೂಪವನ್ನು ವ್ಯಕ್ತಪಡಿಸುವ **ಶುಭ್ರಪತ್ರಿಕೆ (ವ್ಹಾಯಿಟ್ ಪೇಪರ್)** ಯನ್ನು ಪ್ರಸಿದ್ಧಿಸಿದರು. ಮತ್ತು ಈ ಪತ್ರಿಕೆಯ ಚರ್ಚೆಗಾಗಿ ಪಾರ್ಲಮೆಂಟಿನ **ಜಾಯಿಂಟ್ ಸಿಲೆಕ್ಟ ಕಮಿಟಿಯನ್ನು** ಗೊತ್ತುಮಾಡಿರುವರು.

ಈ ಕಮಿಟಿಯವರು ಸುಮಾರು ಒಂದುವರೆ ವರ್ಷದವರೆಗೆ ವಿಚಾರಣೆಯ ಕೆಲಸವನ್ನು ಸಾಗಿಸಿ ಒಂದು ವರದಿಯನ್ನು ಸಿದ್ಧಪಡಿಸಿದರು. ಈ ವರದಿಯು ಕ್ರಿ. ಶ. ೧೯೩೪ರ ನವ್ಹಂಬರ ೨೨ನೆಯ ತಾರೀಖಿನ ದಿನ ಇಂಗ್ಲಂಡ-ಹಿಂದು ಸ್ಥಾನಗಳಲ್ಲಿ ಒಮ್ಮೆಲೆ ಪ್ರಸಿದ್ಧವಾಯಿತು. ಬಳಿಕ ಈ ವರದಿಯ ಆಧಾರದಿಂದ ಮಂತ್ರಿಮಂಡಲದವರು ಹೊಸ ರಾಜ್ಯಘಟನೆಯ ಮಸೂದೆಯೊಂದನ್ನು ಸಿದ್ಧ ಪಡಿಸಿ ಪಾರ್ಲಿಮೆಂಟಿನ ಮುಂದೆ ಇರಿಸಿದರು. ಪಾರ್ಲಿಮೆಂಟಿನವರು ಈ ಮಸೂದೆಯಲ್ಲಿ ಕೆಲವು ತಿದ್ದುಪಡೆಮಾಡಿ ೧೯೩೫ರ ಹಿಂದುಸ್ಥಾನದ ಕಾಯದೆ ಯನ್ನು ಪಾಸುಮಾಡಿದರು. ಈ ಕಾಯ್ದೆಯ ಮೇರೆಗೆ ಸುಧಾರಣೆಯು ಅಮಲಿ ನಲ್ಲಿ ತರಬೇಕೆಂದು ಬಾದಷಾಹರು ೧೨ ಲ ೧೯೩೫ನೆಯ ದಿವಸ ಜಾಹೀರ ಪಡಿಸಿದರು. ಆಗ ಈ ಕಾಯ್ದೆಯು ಅಸಮಾಧಾನಕರವಾಗಿರುವದೆಂದು ಭಾರತೀಯ ಮುಖಂಡರು ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸಿದರು. ಆದರೂ ಸರಕಾರದವರು ೧೯೩೭ರ ಎಪ್ರಿಲ ೧ನೆಯ ತಾರೀಖಿನಿಂದ ಈ ಹೊಸ ಕಾಯ್ದೆಯನ್ನು ಅಮಲಿನಲ್ಲಿ ತರಬೇಕೆಂದು ನಿಶ್ಚಯಿಸಿದರು.

ಈ ಕಾಲದಲ್ಲಿ ಬಿಹಾರ ಪ್ರಾಂತದಲ್ಲಿಯೂ ಕ್ವೇಟಾ ಪಟ್ಟಣದಲ್ಲಿಯೂ ಉಗ್ರಸ್ವರೂಪದ ಭೂಕಂಪವಾಗಿ ವರ್ಣಿಸಲು ಅಸಾಧ್ಯವಾದ **ಅನಾಹುತಕ್ಕೆ** ಜನರು ಸಿಲುಕಿದ್ದರಿಂದ ಜೀವಿತ ವಿತ್ತಗಳ ಅಪಾರವಾದ **ಹಾನಿಯೊದಗಿತು.**

ಸರಕಾರದವರೂ ರಾಷ್ಟ್ರಸಭೆಯುವರೂ ದೊಡ್ಡ ನಿಧಿಯನ್ನು ಸಂಗ್ರಹಿಸಿ ಅನಾಥರಿಗೆ ಸಹಾಯವನ್ನು ಮಾಡಿ ಜನರಿಗೊದಗಿದ ಕಷ್ಟಗಳನ್ನು ಕೆಲವು ಮಟ್ಟಿಗೆ ಕಡಿಮೆ ಮಾಡಿದರು.

ಲಾರ್ಡ ವಿಲಿಂಗ್ಡನ್ನರ ಆಳಿಕೆಯಲ್ಲಿ ಬಾದಶಹರಾದ ಪಂಚಮ ಜಾರ್ಜ ಚಕ್ರವರ್ತಿಗಳವರ ೨೫ ವರ್ಷದ ಆಳಿಕೆಯ ರಜತ ಮಹೋತ್ಸವವು ಒಳ್ಳೇ



**೮ನೆಯ ಎಡ್ವರ್ಡ ಬಾದಷಾಹರು**

ಸಡಗರದಿಂದ ಎಲ್ಲೆಡೆಗಳಲ್ಲಿ ನೆರವೇರಿಸಲ್ಪಟ್ಟಿತು. ಆದರೆ ಮುಂದೆ ತುಸು ದಿವಸಗಳಲ್ಲಿಯೇ ಜನೆವರಿ ೧೯೩೬ ರಲ್ಲಿ ನಮ್ಮ ಪೂಜ್ಯ ಪಂಚಮಜಾರ್ಜ ಬಾದಷಾಹರವರು ದಿವಂಗತರಾದುದರಿಂದ ಸಕಲ ಪ್ರಜೆಗಳು ದುಃಖಸಾಗರದಲ್ಲಿ ಮುಳುಗಿದರು. ದಿವಂಗತರಾದ ಪಂಚಮಜಾರ್ಜ ಬಾದಷಹರ ತರುವಾಯ ಯುವರಾಜರಾಗಿದ್ದ **೮ನೆಯ ಎಡ್ವರ್ಡ**ರವರು ಆಡಳಿತದ ಸಾರ್ವಭೌಮರಾಗಿ ತಮ್ಮ ಪೂಜ್ಯ ತಂದೆಯವರ ಪದ್ಧತಿಯನ್ನೇ ತಾವೂ ಅನುಸರಿಸುವೆವೆಂದು

ಸಾರಿದರು. ಕ್ರಿ. ಶ. ೧೯೩೬ರ ಎಪ್ರೀಲದಲ್ಲಿ ಲಾರ್ಡ ವಿಲಿಂಗ್ಡನ್ನರು ಹೋಗಿ ಅವರ ಸ್ಥಳದಲ್ಲಿ **ಲಾರ್ಡ ಲಿನ್‌ಲಿಥ್‌ಗೋ** ಇವರು ವ್ಹಾಯಿಸರಾಯರಾದರು.

**೪. ಲಾರ್ಡ ಲಿನ್‌ಲಿಥ್‌ಗೋ** (೧೯೩೬-ಸಾಗಿದೆ):- ಇವರು ಮೊದಲು ಲಾರ್ಡ ಅಯರ್ವಿನ್ನರ ಕಾಲದಲ್ಲಿ ಹಿಂದುಸ್ತಾನದ ಒಕ್ಕಲತನದ ವಿಚಾರಣಾ ಮಂಡಲದ ಅಧ್ಯಕ್ಷರಾಗಿದ್ದರು. ಜಾಯಿಂಟ ಪಾರ್ಲಿಮೆಂಟರಿ ಕಮಿಟಿಯ ಅಧ್ಯಕ್ಷಸ್ಥಾನವನ್ನು ಕೂಡ ಇವರೇ ಮಂಡಿಸಿದ್ದರು. ಈ ರೀತಿಯಾಗಿ ಹಿಂದುಸ್ತಾನದ ರಾಜ್ಯತಂತ್ರದಲ್ಲಿ ಇವರು ಒಳ್ಳೆಯ ಅನುಭವವನ್ನು ಹೊಂದಿದವರಾಗಿ



**ಲಾರ್ಡ ಲಿನ್‌ಲಿಥಗೋ**

ರುವರು. ಇವರ ಕಾಲದಲ್ಲಿ ಘಟಿಸಿದ ಮಹತ್ವದ ಸಂಗತಿಯೆಂದರೆ- ಕ್ರಿ. ಶ. ೧೯೩೭ರಲ್ಲಿ ಆದ **ಕಾಯ್ದೆ ಮಂಡಲಗಳ ಚುನಾವಣೆಯು.** ಈ ಚುನಾವಣೆಯ ಕೆಲಸದಲ್ಲಿ ಎಲ್ಲ ಪಕ್ಷದವರು ತಮ್ಮ ತಮ್ಮ ಪ್ರತಿನಿಧಿಗಳನ್ನು ಹೆಚ್ಚಾಗಿ ಆರಿಸಿ ತರಬೇಕೆಂದು ಬಹಳ ಪ್ರಯತ್ನಿಸಿದರು. ಮುಂಬೈ ಇಲಾಖೆ, ಮದ್ರಾಸ ಇಲಾಖೆ, ಸಂಯುಕ್ತ ಪ್ರಾಂತ, ಬಿಹಾರ, ಓಡಿಸಾ, ಮಧ್ಯಪ್ರಾಂತ ಈ ಪ್ರಾಂತಗಳಲ್ಲಿ ರಾಷ್ಟ್ರಸಭೆಯ ಪ್ರತಿನಿಧಿಗಳ ಬಹುಮತವಾಯಿತು. ಕಾಯದೆಗನುಸರಿಸಿ ಈ ಮೇಲಿನ ಪ್ರಾಂತಗಳ ಗವ್ಹರ್ನರರು ಬಹುಮತವಿದ್ದ ರಾಷ್ಟ್ರಪ್ರತಿನಿಧಿಗಳ

ಪ್ರಮುಖರನ್ನು ಮಂತ್ರಿ ಮಂಡಲವನ್ನು ರಚಿಸಲು ಕರೆಯಿಸಿದರು. ಆಗ ಎಲ್ಲ ಪ್ರಾಂತಗಳ ಕಾಂಗ್ರೆಸ ಪ್ರತಿನಿಧಿಗಳ ಪ್ರಮುಖರು ಗವ್ಹರ್ನರರು ತಮಗಿರುವ ವಿಶೇಷಾಧಿಕಾರಗಳನ್ನು ಉಪಯೋಗಿಸುವ ಸಂಬಂಧವಾದ ಕೆಲವು ಅಭಿವಚನ ಗಳನ್ನು ಕೊಡಬೇಕೆಂದು ಕೇಳಿಕೊಂಡರು. ಆದರೆ ಎಲ್ಲ ಪ್ರಾಂತಗಳ ಗವ್ಹರ್ನ



**ಸುಭಾಸಚಂದ್ರ ಭೋಸರು**

ರರು ಈ ರೀತಿ ಅಭಿವಚನಗಳನ್ನು ಕೊಡುವದು ಅಶಕ್ಯವೆಂದು ಹೇಳಿದರು. ಆದಕ್ಕಾಗಿ ರಾಷ್ಟ್ರಸಭೆಯ ಪ್ರಮುಖರು **ಹರಿಪುರದಲ್ಲಿ ಸುಭಾಸಚಂದ್ರ ಬೋಸ** ಇವರ ಅಧ್ಯಕ್ಷತೆಯಲ್ಲಿ ಮಂತ್ರಿಮಂಡಲಗಳನ್ನು ರಚಿಸುವದನ್ನು ಅಲ್ಲಗಳೆದರು. ಆಗ ಗವ್ಹರ್ನರರು ಉಳಿದಪಕ್ಷದ ಮುಖಂಡರನ್ನು ಕರೆಸಿ ಅವರ ಸಹಾಯದಿಂದ ತಾತ್ಪೂರ್ತಿಕ ಮಂತ್ರಿ ಮಂಡಲವನ್ನು ರಚಿಸಿಕೊಂಡು ಕಾರಭಾರವನ್ನು ಸಾಗಿಸಿದರು.

ಹೀಗೆ ಪರಿಸ್ಥಿತಿಯಿರುವಾಗ ಸರ್ **ಸಪ್ರೂ** ರವರ ಪ್ರಯತ್ನದಿಂದ ಸರಕಾರ ಮತ್ತು ರಾಷ್ಟ್ರಸಭೆಯ ಮುಂದಾಳುಗಳು ಇವರಲ್ಲಿ ವಿಚಾರ ವಿನಿಮಯವು ನಡೆಯಿತು. ವ್ಹಾಯಿಸರಾಯರಾದ ಲಾರ್ಡ ಲಿನ್‌ಲಿಥಗೋ ಇವರು "ಪ್ರಾಂತಿಕ ಗವ್ಹರ್ನರರಿಗೆ ವಿಶೇಷಾಧಿಕಾರಗಳಿದ್ದರೂ ಅವುಗಳಿಂದ ರಾಷ್ಟ್ರೀಯ (ಕಾಂಗ್ರೇಸ) ಮಂತ್ರಿಮಂಡಲದ ಕಾರಭಾರಕ್ಕೆ ತೊಂದರೆಯಾಗಲಾರದು" ಎಂದು ಆಶ್ವಾಸನವನ್ನಿತ್ತರು. ಆಗಿನಿಂದ ರಾಷ್ಟ್ರ ಸಭೆಯವರು ಮುಂಬಯಿ ಮದ್ರಾಸ, ಸಂಯುಕ್ತಪ್ರಾಂತ, ಮೊದಲಾದ ಎಂಟು ಪ್ರಾಂತಗಳಲ್ಲಿ ತಮ್ಮ ಮಂತ್ರಿ-ಮಂಡಲಗಳನ್ನು ರಚಿಸಿಕೊಂಡು ಕಾರಭಾರವನ್ನು ಸಾಗಿಸಹತ್ತಿದರು. ನಮ್ಮ ಮುಂಬಯಿ ಪ್ರಾಂತದ ಕಾಂಗ್ರೇಸ ಮಂತ್ರಿಮಂಡಲವ ಮುಖ್ಯರಾದ ಮಾನ್ಯವರ **ಬಾಳ ಗಂಗಾಧರ ಖೇರ**ರವರು ತಮ್ಮ ಸಹಕಾರಿಗಳಾದ ಮಂತ್ರಿಗಳೊಂದಿಗೆ ಜನಹಿತವ ಹಲವು ಸುಧಾರಣೆಗಳನ್ನು ಆಸ್ಥೆಯಿಂದಲೂ ಸಾಹಸದಿಂದಲೂ ಕೈಕೊಂಡರು. ಪ್ರಾಥಮಿಕ ಶಿಕ್ಷಣ ಪ್ರಸಾರ, ಪ್ರೌಢಶಿಕ್ಷಣ, ವರ್ಧಾ ಶಿಕ್ಷಣ, ಗ್ರಾಮಸುಧಾರಣೆ, ಮದ್ಯಪಾನ ಪ್ರತಿಬಂಧ, ಹರಿಜನಸುಧಾರಣೆ ಮುಂತಾದ ಕಾರ್ಯಗಳು ಭರದಿಂದ ಸಾಗುತ್ತಿರುವವೆಂಬುದು ಎಲ್ಲರಿಗೆ ಒಡಿದು ಕಾಣುವ ಮಾತಾಗಿದೆ ಈಗ ಅಪೂರ್ಣ ಅಧಿಕಾರಗಳು ದೊರೆತಿರುವಾಗಲೇ, ಜನಹಿತದಕ್ಷರಾದ ನಮ್ಮ ಮಹನೀಯರು ಇಷ್ಟು ಪ್ರಗತಿಯನ್ನು ಸಾಧಿಸುವರೆಂದ ಮೇಲೆ ಸಂಪೂರ್ಣ ಅಧಿಕಾರಗಳು ದೊರೆತರೆ ಇವರು ಭಾರತವನ್ನು ಉತ್ಕರ್ಷ



ಮುಖ್ಯಮಂತ್ರಿ ಖೇರರು

ಶಿಖರಕ್ಕೆ ಮುಟ್ಟಿಸುವರೆಂಬಲ್ಲಿ ಸಂಶಯವಿಲ್ಲ! ದೇವರು ಭಾರತದ ಹಂಬಲ-ವನ್ನು ಈಡೇರಿಸಲಿ !! ಸ್ವತಂತ್ರ ಭಾರತವು ಅಭಿಮಾನದಿಂದ ಜಗತ್ತಿನಲ್ಲಿ ಬೆಳಗಲಿ !!!

ದಿವಂಗತರಾದ ಐವದೆಯ ಜಾರ್ಜ ಬಾದಷಾಹರವರ ತರುವಾಯ ಎಂಟನೆಯ ಎಡ್ವರ್ಡರವರು ನಮ್ಮ ಬಾದಷಾಹರಾದ ಸಂಗತಿಯು ಒಂದೆ



**ಸಾರ್ವಭೌಮರಾದ ೬ನೆಯ ಜಾರ್ಜರವರು**

ಹೇಳಿದೆ. ಆದರೆ ಈ ಬಾದಷಾಹರು ನಮ್ಮನ್ನು ಬಹುಕಾಲ ಆಳಬೇಕೆಂದು ದೇವರ ಸಂಕೇತವಿರಲಿಲ್ಲ ೮ನೆಯ ಎಡ್ವರ್ಡ ಬಾದಷಾಹರವರಿಗೂ ಮಂತ್ರಿ-ಮಂಡಲದವರಿಗೂ ಕಾರಣಾಂತರಗಳಿಂದ ಮತಭೇದಉಂಟಾಗಿ ಕೊನೆಗೆ ಈ ಬಾದಷಾಹರು ರಾಜ್ಯಭಾರವನ್ನು ೧೦-೧೨ ೧೯೩೬ರಲ್ಲಿ ಬಿಟ್ಟುಕೊಟ್ಟರು. ಕೂಡಲೆ ಇವರ ತಮ್ಮಂದಿರಾದ **ಡ್ಯೂಕ ಆಫ್ ಯಾರ್ಕ**ರವರು **೬ನೆಯ ಜಾರ್ಜ**ರೆಂಬ ಅಭಿಧಾನದಿಂದ ನಮ್ಮ ಬಾದಷಾಹರಾದರು. ಇವರ ಸಿಂಹಾಸನಾ

ರೋಹಣ ಸಮಾರಂಭವು ೧೯೩೭ರ ಮೇ ೧೨ನೆಯ ದಿವಸ ವೈಭವದಿಂದ ನೆರವೇರಿತು.

**೮. ಹೊಸ ರಾಜ್ಯಘಟನೆಯೂ ಕರ್ನಾಟಕದ ಏಕೀಕರಣವೂ :—** ಕನ್ನಡನಾಡು, ಮುಂಬಯಿ ಇಲಾಖೆ, ಮದ್ರಾಸ ಇಲಾಖೆ, ಕೊಡಗುಪ್ರಾಂತ, ಮೈಸೂರ ರಾಜ್ಯ, ನಿಜಾಮ ರಾಜ್ಯ ಅಲ್ಲದೆ ಬೇರೆ ಕೆಲವು ಸಣ್ಣ ಸಂಸ್ಥಾನಗಳು ಹೀಗೆ ಆರು ಕಡೆಗಳಲ್ಲಿ ಹಂಚಿಹೋಗಿದೆ. ಒಂದು ಭಾಷೆಯನ್ನಾಡುವವರ ಸೀಮೆಗಳೆಲ್ಲ ಒಟ್ಟುಗೂಡಿ ಒಂದು ಪ್ರಾಂತವಾಗಿರುವದು, ಆ ನಾಡಿನ ಏಳ್ಗೆಯ ದೃಷ್ಟಿಯಿಂದ ಮಹತ್ವವುಳ್ಳದ್ದಾಗಿದೆ. ಹಾಗೆ ಕನ್ನಡ ನಾಡೆಲ್ಲ ಒಂದಾಗುವದು ಅವಶ್ಯವಾಗಿದ್ದರೂ ಬೇರೆ ಬೇರೆ ಒಡೆತನಗಳಿಗೆ ಸೇರಿದ ಭಾಗವನ್ನು ಒಂದು-ಮಾಡುವದು ಅಶಕ್ಯವು. ಆದಪರಿಂದ ಇಂಗ್ಲಿಷರ ಒಡೆತನವುಳ್ಳ ಕನ್ನಡ ಸೀಮೆಗಳನ್ನಾದರೂ ಒಟ್ಟುಗೂಡಿಸಿ ಒಂದು ಪ್ರಾಂತವಾಗಿ ಮಾಡಲ್ಪಡ-ಬೇಕೆಂದು ನಮ್ಮ ಜನರು ಪ್ರಯತ್ನಿಸಿದರು. ಆದರೆ ಹೊಸ ರಾಜ್ಯಘಟನೆ ಯಲ್ಲಿ ಕರ್ನಾಟಕದ ಏಕೀಕರಣದ ಕಾರ್ಯವು ಸಾಧಿಸಲಿಲ್ಲ. ಇನ್ನಾದರೂ ಆದಷ್ಟು ಬೇಗ ಈ ಕಾರ್ಯವು ಕೈಗೂಡಬೇಕೆಂದು ಕನ್ನಡಿಗರೆಲ್ಲರೂ ಸಾಹಸಪಡುತ್ತಲಿರುವರು.

**೯. ದೇಶೀಯ ಸಂಸ್ಥಾನಿಕರೂ ಅವರ ಪ್ರಜೆಗಳೂ :—** ಅಖಿಲ ಭಾರತದ ಸುಮಾರು ಒಂದು ಮೂರನೆಯಂಶದಷ್ಟು ಪ್ರದೇಶವು ದೇಶೀಯ ಸಂಸ್ಥಾನಿಕರ ಅಧಿಕಾರಕ್ಕೆ ಸೇರಿರುವದು. ಈ ಎಲ್ಲ ಚಿಕ್ಕ ದೊಡ್ಡ ಸಂಸ್ಥಾನ-ಗಳ ಸಂಖ್ಯೆಯು ಆರುವರೆ ನೂರಕ್ಕಿಂತ ಹೆಚ್ಚಾಗಿದೆ. ಎಲ್ಲ ದೇಶೀಯ ಸಂಸ್ಥಾನಗಳ ಒಟ್ಟು ಜನಸಂಖ್ಯೆಯು ಸುಮಾರು ಏಳು ಕೋಟಿ ಆದೆ. ತಮ್ಮ ಸುತ್ತು ಮುತ್ತಲಿರುವ ಬ್ರಿಟಿಷ ಹಿಂದುಸ್ಥಾನದ ಜನಾಂಗವು ಸ್ವಾಯತ್ತತೆಗಾಗಿ ಸಾಹಸ ಬಡುತ್ತಿರುವಾಗ ಸಂಸ್ಥಾನಗಳ ಪ್ರಜೆಗಳು ಕಣ್ಣುಮುಚ್ಚಿಕೊಂಡು ಸುಮ್ಮನಿರುವದು ಅಶಕ್ಯವು. ಅವರಾದರೂ ರಾಷ್ಟ್ರಸಭೆಯ ಕ್ರಮದಂತೆಯೇ ಚಟುವಟಿಕೆಗಳನ್ನು ನಡೆಯಿಸಿ ತಮ್ಮ ಒಡೆಯರಲ್ಲಿ ಹೊಣೆಗಾರಿಕೆಯುಳ್ಳ ಅಧಿಕಾರಗಳನ್ನು ಬೇಡುತ್ತಲಿರುವರು. ಸಂಸ್ಥಾನಿಕರಾದರೂ ತಮ್ಮ ಪ್ರಜೆಗಳ ನ್ಯಾಯವಾದ ಈ ಬೇಡಿಕೆಗಳನ್ನು ಪೂರೈಸಲೇ ಬೇಕಾಗುವದು. ಪ್ರಗತಿಪ್ರಿಯ



ಶ್ರೀ ಕೃಷ್ಣರಾಜ ಒಡೆಯರು



ಮೀರ ಉಸ್ಮಾನ ಅಲೀಖಾನರು

ರಾದ ಹಲವರು. ಸಂಸ್ಥಾನಿಕರು ಪ್ರಜೆಗಳ ಬೇಡಿಕೆಗಳನ್ನು ವಿಚಾರಿಸಿ ತಮ್ಮ ತಮ್ಮ ಯೋಜನೆಗಳನ್ನು ಸಜ್ಜುಗೊಳಿಸುತ್ತಿರುವರು. ಔಂಧ ಸಂಸ್ಥಾನದ ಒಡೆಯರಂತೂ ಮಹಾತ್ಮಾ ಗಾಂಧಿಯವರ ಒಪ್ಪಿಗೆಯಂತೆ ಒಂದು ಯೋಜನೆ-ಯನ್ನು ಸಿದ್ಧಪಡಿಸಿ, ಅದರಂತೆ ತಮ್ಮ ಪ್ರಜೆಗಳಿಗೆ ಅಧಿಕಾರಗಳನ್ನು ಕೊಟ್ಟು ಬಿಟ್ಟಿರುವರು. ಹೈದರಾಬಾದ, ಮೈಸೂರು, ಕೊಲ್ಹಾಪುರ ಮೊದಲಾದ ನಮ್ಮ ನೆರೆಯ ಸಂಸ್ಥಾನಗಳಲ್ಲಿ ಈಗ ಪ್ರಜಾಪಕ್ಷದ ಚಟುವಟಿಕೆಗಳು ಭರದಿಂದ ಸಾಗಿರುತ್ತವೆ.

**೭. ಎರಡನೆಯ ಮಹಾ ಯುದ್ಧ :—** (ಸಪ್ಟಂಬರ **೧೯೩೯**ರಲ್ಲಿ ಪ್ರಾರಂಭವಾಗಿ ಸಾಗಿದೆ). ೧೯೧೪ ರಿಂದ ೧೯೧೮ರ ವರೆಗೆ ಮೊದಲನೆಯ ಮಹಾ ಯುದ್ಧವು ಸಾಗಿ, ವರ್ಸೇಲೀಸ ಒಪ್ಪಂದದಿಂದ ಅದು ಮುಗಿದು ಹೋದ ಸಂಗತಿ ೧೮೯ನೆಯ ಪುಟದಲ್ಲಿ ಹೇಳಿದೆ. ಅದರಲ್ಲಿ ಜರ್ಮನಿಯು ಸಂಪೂರ್ಣವಾಗಿ ಸೋತು ಮಿತ್ರರಾಷ್ಟ್ರದವರ ಕರಾರುಗಳಿಗೆಲ್ಲ ಒಪ್ಪಬೇಕಾ ಯಿತು. ಆಗ ಜರ್ಮನಿಯ ಡಾಂಝಿಗ ಬಂದರವು ಪೋಲಂಡದವರಿಗೆ ಕೊಡಲ್ಪಟ್ಟಿತು. ಜರ್ಮನಿಗೆ ಈ ಬಂದರವು ಕೈಬಿಟ್ಟದ್ದು ಶಲ್ಯದಂತೆ ನಡುವ ಸಂಗತಿಯಾಗಿತ್ತು. ಅದು ಈ ಸಂಗತಿಯನ್ನು ಮನಸ್ಸಿನಲ್ಲಿಟ್ಟು ತನ್ನ ಸಿದ್ಧತೆ ಯನ್ನು ಮಾಡುವದರಲ್ಲಿಯೇ ತೊಡಗಿದ್ದಿತು. ಮುಂದೆ ಅದು **ಹರ ಹಿಟ್ಲರ** ಎಂಬವನನ್ನು ತನ್ನ ಸರ್ವಾಧಿಕಾರಿಯನ್ನಾಗಿ ಮಾಡಿಕೊಂಡು, ಸರ್ವ ವಿಧ ದಿಂದಲೂ ಸಿದ್ಧತೆಯನ್ನು ಮಾಡಿಕೊಂಡಿತು. ಮತ್ತು ಕಡೆಗೆ ಕ್ರಿ. ಶ. ೧೯೩೯ನೇ ಅಗಸ್ಟ ೩೧ನೇ ತಾರೀಖಿನ ದಿನ "ಡಾಂಝಿಗ ಬಂದರವನ್ನು ೨೪ ತಾಸಿನಲ್ಲಿ ಬಿಟ್ಟುಕೊಡದಿದ್ದರೆ ಜರ್ಮನಿಯು ದಾಳಿ ಮಾಡುವದು" ಎಂದು ನೋಟೀಸು ಕೊಟ್ಟಿತು! ಪೋಲಂಡದವರು ಡಾಂಝಿಗವನ್ನು ಕೊಡಲೊಪ್ಪಲಿಲ್ಲ!! ಯುದ್ಧವು ತಾ. ೧-೯-೩೯ಕ್ಕೆ ಆರಂಭವಾಯಿತು!!! ಬ್ರಿಟನ್, ಫ್ರಾನ್ಸ ರಾಷ್ಟ್ರಗಳು ಇದನ್ನು ವಿಚಾರಿಸಿ ತಾ. ೩-೯-೩೯ಕ್ಕೆ ತಮ್ಮ ಮಿತ್ರನಾದ ಪೋಲಂಡದ ರಕ್ಷಣೆಗಾಗಿ ಜರ್ಮನಿಯ ವಿರುದ್ಧ ಯುದ್ಧವನ್ನು ಸಾರಿದವು.

ಮುಂದೆ ಜರ್ಮನಿಯು ಪೋಲಂಡವನ್ನು ತಡವಿಲ್ಲದೆ ಆಕ್ರಮಿಸಿ ಅದರ ಪೂರ್ವದ ಭಾಗವನ್ನು ರಶಿಯಕ್ಕೆ ಕೊಡಮಾಡಿ ಅದನ್ನು ತನ್ನ ಕಡೆಗೆ

ಒಲಿಸಿಕೊಂಡಿತು. ಬಳಿಕ ಫಿನಲಂಡ, ನಾರ್ವೆ, ಸ್ವೀಡನ್, ಡೆನ್ಮಾರ್ಕ, ಹಾಲಂಡ, ಬೆಲಜಮ್ ಈ ದೇಶಗಳನ್ನು ಒಂದರಹಿಂದೊಂದು ವಶಮಾಡಿಕೊಂಡು, ಜರ್ಮನಿಯು ಫ್ರಾನ್ಸದಲ್ಲಿ ನುಗ್ಗಿತು. ಕಡೆಗೆ ಫ್ರಾನ್ಸವೂ ಜರ್ಮನಿಯ ವಶವಾಯಿತು. ಇಟಲಿಯು ಜರ್ಮನಿಯ ಪಕ್ಷವನ್ನು ವಹಿಸಿತು.

ಬ್ರಿಟನವು ಅಮೇರಿಕೆಯ ನೆರವನ್ನು ಪಡೆದು ಯುದ್ಧದ ಸಿದ್ಧತೆಯನ್ನು ಭರದಿಂದ ನಡೆಸಿತು. ಎರಡೂ ಪಕ್ಷದವರು ವೈರಿದೇಶಗಳ ಮೇಲೆ ಬಾಂಬುಗಳನ್ನು ಎಸೆಯುವದು, ಸಾಗರಗಳಲ್ಲಿ ಹಡಗಗಳನ್ನು ಮುಳುಗಿಸುವದು, ಕೊಡೆ ವಿಮಾನಗಳಿಂದ ಇಳಿದು ಶತ್ರುಪ್ರದೇಶವನ್ನು ಆಕ್ರಮಿಸುವದು ಇವು ಈ ಮಹಾ ಯುದ್ಧದ ವೈಶಿಷ್ಟ್ಯಗಳಾಗಿವೆ. ಫ್ರಾನ್ಸವನ್ನು ವಶಪಡಿಸಿಕೊಂಡ ಬಳಿಕ ಜರ್ಮನಿಯು ಸ್ಪೇನವನ್ನು ತನ್ನ ಕೈಗೊಂಬೆಯನ್ನಾಗಿ ಮಾಡಿಕೊಂಡು ಪೂರ್ವಕ್ಕೆ ಹೊರಳಿ ಆಸ್ಟ್ರಿಯಾ, ಹಂಗರಿ, ರುಮಾನಿಯಾ, ಝೆಕೊಸ್ಲೋವ್ಹಾಕಿಯಾ ಈ ದೇಶಗಳನ್ನು ತನ್ನ ಅಧಿಕಾರಕ್ಕೆ ಒಳಪಡಿಸಿಕೊಂಡಿತು. ಬಳಿಕ ಗ್ರೀಸದ ಮೇಲೆ ಸಾಗಲು ಅಲ್ಲಿ ಘನಘೋರ ಸಂಗ್ರಾಮವಾಗಿ ಆದೂ ಜರ್ಮನಿಯ ಕೈಸೇರಿತು.

ಇಷ್ಟರಲ್ಲಿ ೧೯೪೧ನೇ ಇಸವಿಯು ಮುಗಿಯುತ್ತ ಬಂದಿದ್ದಿತು. ಅತಿಪೂರ್ವದಲ್ಲಿ ಜಪಾನವು ತಲೆಯೆತ್ತಿ (ಡಿಶೆಂಬರ ೭ನೇ ತಾರೀಖಿಗೆ) ಅಮೇರಿಕೆ, ಬ್ರಿಟನಗಳ ಮೇಲೆ ಯುದ್ಧವನ್ನು ಸಾರಿತು. ಬಳಿಕ ತಾ ೮-೧೨-೪೧ನೇ ದಿನ ಅಮೇರಿಕೆಯೂ ಬ್ರಿಟನವೂ ಜಪಾನದ ವಿರುದ್ಧ ಯುದ್ಧವನ್ನು ಸಾರಿದವು. ಜಪಾನವು ಫಿಲಿಪಾಯಿನ, ಪೇನಾಂಗ, ಹಾಂಗಕಾಂಗ, ಸಯಾಮ, ಇಂಡೊ ಚಾಯಿನಾ ಇವುಗಳ ಮೇಲೆ ತನ್ನ ವರ್ಚಸ್ಸನ್ನು ನೆಲೆಸಿ, ಸಿಂಗಾಪುರದ ಬಲವಾದ ಬ್ರಿಟಿಷ ಠಾಣ್ಯಾದ ಕಡೆಗೆ ಸಾಗಿತು. ಕಡೆಗೆ ಸಿಂಗಾಪುರವೂ ಜಪಾನರ ವಶವಾಯಿತು. ಅಲ್ಲಿಂದ ಜಪಾನದ ದೃಷ್ಟಿಯು ಬ್ರಹ್ಮದೇಶದ ಮೇಲೆ ಬಿದ್ದಿತು. ನಮ್ಮ ದೇಶದ ಪೂರ್ವ ದಂಡೆಗಿರುವ ಬ್ರಹ್ಮದೇಶವೂ ಜಪಾನರ ಕೈಸೇರಿತು. ಬಳಿಕ ಜಪಾನಿಗಳು ಕೋಕೋನಾಡ, ವಿಶಾಖಪಟ್ಟಣ ಇವುಗಳ ಮೇಲೆ ಬಾಂಬುಗಳನ್ನೆಸೆದರು. ಹೀಗಾಗಿ ಸದ್ಯಕ್ಕೆ ಮಹಾಯುದ್ಧವು ಹಿಂದುಸ್ಥಾನದ ಪೂರ್ವ ಮೇರೆಗೆ ಬಂದು ನಿಂತಿದೆ.

ಜರ್ಮನ ರಶಿಯನರಲ್ಲಿ ಪರಸ್ಪರ ಅವಿಶ್ವಾಸವುಂಟಾಗಿ ಜರ್ಮನಿಯು ರಶಿಯದ ಮೇಲೆ ಯುದ್ಧ ಸಾರಿತು. ಕಪ್ಪು ಸಮುದ್ರದಲ್ಲಿಯ ಬಲವಾದ ಸೆಬಾಸ್ಟಪೊಲ ಎಂಬ ರಶಿಯನ ರಾಜ್ಯವನ್ನು ವಶಪಡಿಸಿಕೊಂಡು, ಕಾಕೆಸಸದ ಕಡೆಗೆ ಮುನ್ನುಗ್ಗಹತ್ತಿದೆ. ಜರ್ಮನಿಯ ಇನ್ನೊಂದು ಸೈನ್ಯವು ರೋಮೇಲನ ಕೈಕೆಳಗೆ ಲಿಬಿಯಾದ ಮೇಲೆ ನುಗ್ಗಿ ಉತ್ತರ ಆಫ್ರಿಕಾದ ಮಹತ್ವದ ರಾಜ್ಯವಾದ ತೊಬ್ರುಕವನ್ನು ಹಿಡಿದುಕೊಂಡಿದೆ. ಈ ರೀತಿ ಜರ್ಮನಿಯು ಯುರೋಪದಲ್ಲಿಯೂ, ಜಪಾನವು ಏಶಿಯಾದಲ್ಲಿಯೂ ಅಟ್ಟಹಾಸದಿಂದ ಮೇರವಪ್ಪಿ ಹೆಜ್ಜೆಯನ್ನು ಮುಂದಿಡುತ್ತಲಿವೆ.

ಇತ್ತ ಬ್ರಿಟನ್, ಅಮೇರಿಕಾ, ರಶಿಯಾ, ಚೀನ ಮುಂತಾದ ಮಿತ್ರ ರಾಷ್ಟ್ರಗಳು ಜರ್ಮನಿ ಜಪಾನವನ್ನು ಬಲವಾಗಿ ತಡೆಯಲು ಯೋಗ್ಯ ಯುದ್ಧ ಸಾಮಗ್ರಿಗಳ ಸಿದ್ಧತೆಯನ್ನು ಒತ್ತರದಿಂದ ನಡೆಸಿದೆ. ಬ್ರಿಟಿಷ ಮುಖ್ಯ ಮಂತ್ರಿಗಳಾದ **ಚರ್ಚಿಲ**ರವರು ೧೯೪೨ ನೇ ವರ್ಷವು ನಮಗೆ ಕಷ್ಟದಾಯಕವೆನಿಸಿದರೂ ೧೯೪೩ ರಲ್ಲಿ ನಾವು ಮಿತ್ರಪಕ್ಷದವರು ನಿಜವಾಗಿ ಜಯವನ್ನು ಪಡೆಯುವೆವು, ಎಂದು ವಿಶ್ವಾಸವನ್ನು ಈಗ ವ್ಯಕ್ತಪಡಿಸಿರುವರು. ಹಿಂದುಸ್ಥಾನದಲ್ಲಿಯೂ ಸೈನ್ಯ ಹಾಗೂ ಯುದ್ಧ ಸಾಹಿತ್ಯಗಳನ್ನು ಸಿದ್ಧಗೊಳಿಸುವ ಕಾರ್ಯವು ಒತ್ತರದಿಂದ ನಡೆದಿದೆ.

ಮಿತ್ರಪಕ್ಷದ ಸಿದ್ಧತೆ ಪೂರ್ಣವಾಗಿ ಈ ಜಗತ್ತಿನ ಮಹಾ ಯುದ್ಧವು ಜಾಗತಿಕ ಶಾಂತತೆಗೆ ಸಹಾಯಕವಾಗುವಂತೆ ಒಮ್ಮೆ ಮುಗಿಯಲೆಂದು ಎಲ್ಲರೂ ಬಯಸುತ್ತಿರುವರು.

೮ ಈಗಿನ ಮಹಾ ಯುದ್ಧವು ಪ್ರಾರಂಭವಾದ ಬಳಿಕ ತಮ್ಮ ಒಪ್ಪಿಗೆಯಿಲ್ಲದೆ ಹಿಂದುಸ್ಥಾನವನ್ನು ಯುದ್ಧದಲ್ಲಿ ಸೇರಿಸಿದ್ದಕ್ಕಾಗಿ ಕಾಂಗ್ರೆಸ ಮಂತ್ರಿಮಂಡಲದವರು ರಾಜೀನಾಮೆ ಕೊಟ್ಟು ಕಡೆಗಾದರು. ಆಗ ಪ್ರಾಂತಗಳ ಗವ್ಹರ್ನರರೇ ಸಹಾಯಕ ಮಂತ್ರಿಗಳನ್ನು ನಿಯಮಿಸಿಕೊಂಡು ಕಾರಭಾರವನ್ನು ಸಾಗಿಸಹತ್ತಿದರು.

ಹೊಣೆಗಾರ ಮಧ್ಯವರ್ತಿ ಸರಕಾರವನ್ನು ನಿರ್ಮಿಸಿದರೆ, ಈ ದೇಶದ ಸಹಾಯವು ದೊರೆಯುವದು. ಅಂಥ ಮಧ್ಯವರ್ತಿ ಸರಕಾರವನ್ನು ಕೂಡಲೆ

ನಿರ್ಮಿಸಬೇಕೆಂದು ಮುಖಂಡರೆಲ್ಲರು ಪ್ರಯತ್ನಿಸಹತ್ತಿದರು. ೧೯೪೨ ನೇ ಇಸವಿ ಮಾರ್ಚ ತಿಂಗಳಲ್ಲಿ ಪಾರ್ಲಿಮೆಂಟಿನವರು **ಸರ್ ಸ್ಟ್ಯಾಫೋರ್ಡ ಕ್ರಿಪ್ಸ** ಎಂಬ ಮುತ್ಸದ್ದಿಗಳನ್ನು ಹಿಂದುಸ್ಥಾನದ ಬೇರೆ ಬೇರೆ ಪಕ್ಷಗಳ ಪ್ರಮುಖ ರೊಡನೆ ವಿಚಾರ ವಿನಿಮಯ ಮಾಡಿ ಹಿಂದೀ ಜನತೆಯನ್ನು ಸಮಾಧಾನ-ಗೊಳಿಸಲು ಕಳುಹಿದ್ದರು. ಆದರೆ ಮಾತುಕತೆಗಳೆಲ್ಲ ಸಾಗಿಯೂ ಸಂಧಾನವು ಸಾಧಿಸಲಿಲ್ಲ! ಕ್ರಿಪ್ಸರು ಮರಳಿ ಹೋದರು!!

೯. **ಉಪಸಂಹಾರ :—** ಪ್ರಿಯ ವಿದ್ಯಾರ್ಥಿಗಳೇ, ಇಲ್ಲಿಗೆ ಮ ಇಂ ಆಳಿಕೆಯ ಇತಿಹಾಸವು ಮುಗಿಯಿತು. ಆದಿಭೌತಿಕ ಶಾಸ್ತ್ರಗಳಲ್ಲಿ ಮುಂದು ವರಿದ ಯಾವುದೊಂದು ಪಾಶ್ಚಿಮಾತ್ಯ ರಾಷ್ಟ್ರವು, ಆ ಶಾಸ್ತ್ರಗಳಲ್ಲಿ ಹಿಂದುಳಿದಿದ್ದ ಮತ್ತು ಏಕರಾಷ್ಟ್ರೀಯತ್ವಕ್ಕೆ ಎರವಾಗಿದ್ದ ಹಿಂದುಸ್ಥಾನವನ್ನು ವಶಮಾ-ಡಿಕೊಳ್ಳುವದೆಂಬ ಸಂಗತಿಯು ಕ್ರಿ. ಶ ೧೮ ನೆಯ ಶತಕದ ಕೊನೆಯಲ್ಲಿ ನಿಶ್ಚಿತವಾಯಿತು. ಹೀಗಿರಲು ಅವರೊಳಗಿನ ಇಂಗ್ಲಂಡದಂಥ ಸ್ವತಂತ್ರ್ಯ ಪ್ರಿಯವಾದ ರಾಷ್ಟ್ರದೊಡನೆ ಸಂಬಂಧವುಂಟಾಯಿತು. ಇಂಗ್ಲಿಷರ ಆಳಿಕೆಯು ಆರಂಭವಾದಂದಿನಿಂದ ನಮ್ಮಲ್ಲಿಯ ರಾಷ್ಟ್ರೀಯ ಭಾವನೆಯು ಜಾಗ್ರತ-ವಾಗಿದೆ. ಹಿಂದೀ ರಾಷ್ಟ್ರದ ಆಕಾಂಕ್ಷೆಗನ್ನರಿತು ಇವರು ಕ್ರಮೇಣ ಹೆಚ್ಚು ಹೆಚ್ಚು ರಾಜಕೀಯ ಹಕ್ಕುಗಳನ್ನು ಕೊಡುತ್ತಲಿರುವರು. ನಮ್ಮ **ಬಾದಷಾಹರಾದ ೬ನೆಯ ಜಾರ್ಜ ಚಕ್ರವರ್ತಿ**ಯವರಿಗೂ ಮತ್ತು **ಎಲಿಜಾಬೇಥ ಮಹಾರಾಜ್ಞಿ**ಯವರಿಗೂ ದೇವರು ಆಯುರಾರೋಗ್ಯಗಳನ್ನು ದಯಪಾಲಿಸ-ಲೆಂದೂ ಈ ಮಹನೀಯರ ಹಸ್ತದಿಂದಲೇ ಭಾರತೀಯರ ಆಕಾಂಕ್ಷೆಗಳು ಬೇಗನೆ ಪೂರ್ಣವಾಗಲೆಂದೂ ಜಗದೀಶನನ್ನು ಪ್ರಾರ್ಥಿಸುವಾ!

**ನಮ್ಮ ಹಿಂದುಸ್ಥಾನವು ಏಳ್ಗೆ ಹೊಂದಲಿ!!!**

**ಸಮಾಪ್ತ**

## ಮಹಾರಾಷ್ಟ್ರ-ಇಂಗ್ಲಿಷರ ಆಳಿಕೆಯ ಕಾಲದಲ್ಲಿಯ
# ಪ್ರಸಿದ್ಧ ರಾಜವಂಶಗಳು.

### ೧. ಮರಾಠರ ಮನೆತನ (ಸಾತಾರೆ) (ಕ್ರಿ. ಶ. ೧೬೬೪—೧೮೪೮.

| | | | |
|---|---|---|---|
| ೧ | ಛತ್ರಪತಿ | ಶಿವಾಜಿ ಮಹಾರಾಜ | ಕ್ರಿ. ಶ. ೧೬೬೪—೧೬೮೦ |
| ೨ | ,, | ಸಂಭಾಜಿ | ,, ೧೬೮೦—೧೬೮೯ |
| ೩ | ,, | ರಾಜಾರಾಮ | ,, ೧೬೮೯—೧೭೦೦ |
| ೪ | ,, | ೨ನೆಯ ಶಿವಾಜಿ | ,, ೧೭೦೦—೧೭೦೮ |
| ೫ | ,, | ಶಾಹೂರಾಜ | ,, ೧೭೦೮—೧೭೪೯ |
| ೬ | ,, | ರಾಮರಾಜ | ,, ೧೭೪೯—೧೭೭೭ |
| ೭ | ,, | ೨ನೆಯ ಶಾಹೂರಾಜ | ,, ೧೭೭೭—೧೮೦೮ |
| ೮ | ,, | ಪ್ರತಾಪಸಿಂಹ | ,, ೧೮೦೮—೧೮೩೯ |
| ೯ | ,, | ಶಹಾಜಿ | ,, ೧೮೩೯—೧೮೪೮ |

### ೨. ಪೇಶವೆಯರ ಮನೆತನ (ಪುಣೆ) ಕ್ರಿ. ಶ. ೧೭೧೪—೧೮೧೮.

| | | |
|---|---|---|
| ೧ | ಬಾಳಾಜಿ ವಿಶ್ವನಾಥ | ಕ್ರಿ. ಶ. ೧೭೧೪—೧೭೨೦ |
| ೨ | ಬಾಜೀರಾಯ | ,, ೧೭೨೦—೧೭೪೦ |
| ೩ | ಬಾಳಾಜಿ ಬಾಜೀರಾಯ | ,, ೧೭೪೦—೧೭೬೦ |
| ೪ | ಮಾಧವರಾಯ | ,, ೧೭೬೧—೧೭೭೧ |
| ೫ | ನಾರಾಯಣರಾಯ | ,, ೧೭೭೨—೧೭೭೩ |
| ೬ | ಸವಾಯಿ ಮಾಧವರಾಯ | ,, ೧೭೭೪—೧೭೯೫ |
| ೭ | ೨ನೆಯ ಬಾಜೀರಾಯ | ,, ೧೭೯೫—೧೮೧೮ |

### ೩. ಈ. ಇಂ. ಕಂಪನಿಯ ಆಳಿಕೆಯ ಕಾಲದ ಗ. ಜನರಲನು

| | | |
|---|---|---|
| ೧ | ವಾರನ ಹೆಸ್ಟಿಂಗ್ಸ | ಕ್ರಿ. ಶ. ೧೭೭೪—೧೭೮೫ |
| ೨ | ಲಾರ್ಡ ಕಾರ್ನವಾಲೀಸ | ,, ೧೭೮೫—೧೭೯೩ |
| ೩ | ಸರ ಜಾನ್ ಶೋಅರ | ,, ೧೭೯೩—೧೭೯೮ |
| ೪ | ಲಾರ್ಡ ವೆಲಸ್ಲಿ | ,, ೧೭೯೮—೧೮೫೦ |

೫ ಲಾರ್ಡ ಕಾರ್ನವಾಲೀಸ (೨ನೆಯ ಸರತಿ) ಕ್ರಿ. ಶ. ೧೮೦೫
೬ ಸರ ಜಾರ್ಜ ಬಾರ್ಲೊ ,, ೧೮೦೫—೧೮೦೭
೭ ಲಾರ್ಡ ಮಿಂಟೊ ,, ೧೮೦೭—೧೮೧೩
೮ ಮಾ. ಆಫ್ ಹೆಸ್ಟಿಂಗ್ಸ ,, ೧೮೧೩—೧೮೨೩
೯ ಲಾರ್ಡ ಆಮ್ಹರ್ಸ್ಟ ,, ೧೮೨೩—೧೮೨೮
೧೦ ಲಾ. ಉ. ಬೆಂಟಿಂಕ ,, ೧೮೨೮—೧೮೩೫
೧೧ ಸರ ಚಾ. ಮೆಟಕಾಫ ,, ೧೮೩೫—೧೮೩೬
೧೨ ಲಾರ್ಡ ಆಕ್ಲಂಡ ,, ೧೮೩೬—೧೮೪೨
೧೩ ಲಾರ್ಡ ಎಲೆನ್‌ಬರೊ ,, ೧೮೪೨—೧೮೪೪
೧೪ ಲಾರ್ಡ ಹಾರ್ಡಿಂಜ ,, ೧೮೪೪—೧೮೪೮
೧೫ ಲಾಡ ಡಾಲಹೌಸಿ ,, ೧೮೪೮—೧೮೫೬

**೪. ಇಂಗ್ಲಂಡದ ಬಾದಶಾಹರ ಆಳಿಕೆಯ ಕಾಲದಲ್ಲಿಯ ಹಿಂದುಸ್ಥಾನದ ಗ. ಜನರಲರು ಮತ್ತು ವ್ಹಾಯಿಸರಾಯರು.**

೧ ಲಾರ್ಡ ಕ್ಯಾನಿಂಗ ಕ್ರಿ. ಶ. ೧೮೫೮—೧೮೬೨
೨ ಲಾರ್ಡ ಎಲ್ಜಿನ ,, ೧೮೬೨ – ೧೮೬೩
೩ ಲಾರ್ಡ ಲಾರೆನ್ಸ ,, ೧೮೬೪—೧೮೬೯
೪ ಲಾರ್ಡ ಮೇಯೊ ,, ೧೮೬೯—೧೮೭೨
೫ ಲಾರ್ಡ ನಾರ್ಥಬ್ರುಕ್ ,, ೧೮೭೨—೧೮೭೬
೬ ಲಾರ್ಡ ಲಿಟನ ,, ೧೮೭೬—೧೮೮೦
೭ ಲಾರ್ಡ ರಿಪನ ,, ೧೮೮೦—೧೮೮೪
೮ ಲಾರ್ಡ ಡಫರಿನ ,, ೧೮೮೪—೧೮೮೮
೯ ಲಾರ್ಡ ಲ್ಯಾನ್ಸಡೌನ ,, ೧೮೮೮—೧೮೯೪
೧೦ ಲಾರ್ಡ ಎಲ್ಜಿನ ,, ೧೮೯೪ – ೧೮೯೯
೧೧ ಲಾರ್ಡ ಕರ್ಝನ ,, ೧೮೯೯—೧೯೦೫
೧೨ ಲಾರ್ಡ ಮಿಂಟೊ ,, ೧೯೦೫—೧೯೧೦
೧೩ ಲಾರ್ಡ ಹಾರ್ಡಿಂಜ ,, ೧೯೧೦—೧೯೧೬
೧೪ ಲಾರ್ಡ ಚೇಮ್ಸಫರ್ಡ ,, ೧೯೧೬—೧೯೨೧

| | | |
|---|---|---|
| ೧೫ | ಲಾರ್ಡ ರೀಡಿಂಗ | ಕ್ರಿ. ಶ. ೧೯೨೧—೧೯೨೬ |
| ೧೬ | ಲಾರ್ಡ ಆಯರ್ವಿನ | ,, ೧೯೨೬—೧೯೩೧ |
| ೧೭ | ಲಾರ್ಡ ವಿಲಿಂಗ್ಡನ್ | ,, ೧೯೩೧—೧೯೩೬ |
| ೧೮ | ಲಾರ್ಡ ಲಿನ್‌ಲಿಥಗೋ | ,, ೧೯೩೬— |

## ಮಹಾರಾಷ್ಟ್ರ ಇಂಗ್ಲಿಷರ ಆಳಿಕೆಯ ಕಾಲದಲ್ಲಿಯ

# ಮಹತ್ವದ ಸಂಗತಿಗಳ ಕಾಲಗಳು.

| | |
|---|---|
| ಇಂಗ್ಲಿಷ ಈಸ್ಟ ಇಂಡಿಯಾ ಕಂಪನಿಯ ಸ್ಥಾಪನೆ | ೧೬೦೦ |
| ಸುರತದಲ್ಲಿ ವಖಾರವನ್ನು ಕಟ್ಟಿಸಿದ್ದು | ೧೬೧೨ |
| ಅಂಬೋಯನಾದ ಕೊಲೆ | ೧೬೨೩ |
| ಶಿವಾಜಿಯ ಜನ್ಮ | ೧೬೩೦ |
| ನಿಜಾಮಶಾಹಿಯ ಕೊನೆ | ೧೬೩೭ |
| ಮದ್ರಾಸವು ಇಂಗ್ಲಿಷರಿಗೆ ದೊರೆಯಿತು | ೧೬೩೯ |
| ಶಿವಾಜಿಯು ರಾಯಗಡವನ್ನು ತೆಗೆದುಕೊಂಡದ್ದು | ೧೬೪೬ |
| ಅಫಜುಲ್‌ಖಾನನು ಹತನಾದದ್ದು | ೧೬೫೯ |
| ಫ್ರೇಂಚ ಈಸ್ಟ ಇಂಡಿಯಾ ಕಂಪನಿಯ ಸ್ಥಾಪನೆ | ೧೬೬೦ |
| ಸಾಲ್ಹೇರದ ಯುದ್ಧ | ೧೬೭೨ |
| ಶಿವಾಜಿಯ ಪಟ್ಟಾಭಿಷೇಕ | ೧೬೭೪ |
| ಶಿವಾಜಿಯ ಮರಣ | ೧೬೮೦ |
| ಔರಂಗಜೇಬನಿಗೂ ರಜಪೂತರಿಗೂ ಆದ ಒಪ್ಪಂದ | ೧೬೮೧ |
| ಆದಿಲಶಾಹಿಯ ಕೊನೆ | ೧೬೮೬ |
| ಕುತುಬಶಾಹಿಯ ಕೊನೆ | ೧೬೮೭ |
| ಮುಂಬಯಿಯು ಇಂಗ್ಲಿಷ ವ್ಯಾಪಾರಸ್ಥರ ಕೇಂದ್ರವಾಯಿತು | ೧೬೮೭ |
| ಸಂಭಾಜಿಯ ಕೊಲೆ | ೧೬೮೯ |
| ಜಿಂಜಿಯ ಮುತ್ತಿಗೆ | ೧೬೯೧—೯೮ |
| ಔರಂಗಜೇಬನ ಮರಣ | ೧೭೦೭ |

| | |
|---|---|
| ಪಿಟ್ಟನ ಇಂಡಿಯಾ ಬಿಲ್ಲು | ೧೭೮೪ |
| ಮೈಸೂರಿನ ಮೂರನೆಯ ಯುದ್ಧ | ೧೭೯೧—೯೨ |
| ಸ್ಥಿರ ಕಂದಾಯ ಪದ್ಧತಿ | ೧೭೯೧ |
| ಶ್ರೀರಂಗ ಪಟ್ಟಣದ ಒಪ್ಪಂದ | ೧೭೯೨ |
| ಕಂಪನಿಯ ಸನದಿನ ವಿಚಾರಣೆ (೧ನೆಯ ಸಾರೆ) | ೧೭೯೩ |
| ಖರಡೆಯ ಯುದ್ಧ | ೧೭೯೫ |
| ಮೈಸೂರಿನ ೪ನೆಯ ಯುದ್ಧ | ೧೭೯೯ |
| ವಸಯಿ ಒಪ್ಪಂದ | ೧೮೦೨ |
| ಮರಾಠರ ೨ನೆಯ ಯುದ್ಧ | ೧೮೦೨ |
| ಅಂಜನಗಾಂವ, ದೇವಗಾಂವ ಒಪ್ಪಂದ | ೧೮೦೩ |
| ಭರತಪುರದ ಮುತ್ತಿಗೆ | ೧೮೦೫ |
| ವೆಲ್ಲೂರ ದಂಗೆ | ೧೮೦೬ |
| ಅಮೃತಸರದ ಒಪ್ಪಂದ | ೧೮೦೯ |
| ಕಂಪನಿಯ ಸನದಿನ ವಿಚಾರಣೆ (೨ನೆಯ ಸಾರೆ) | ೧೮೧೩ |
| ನೇಪಾಳದ ಯುದ್ಧ | ೧೮೧೪-೧೬ |
| ಸೇಗಾವುಲಿಯ ಒಪ್ಪಂದ | ೧೮೧೬ |
| ಪೆಂಡಾರಿಗಳ ಯುದ್ಧ | ೧೮೧೭ |
| ಮರಾಠರ ೩ನೆಯ ಯುದ್ಧ | ೧೮೧೭-೧೮ |
| ಬ್ರಹ್ಮದೇಶದ ೧ನೆಯ ಯುದ್ಧ | ೧೮೨೪-೨೬ |
| ಎಂದಲು ಒಪ್ಪಂದ | ೧೮೨೬ |
| ಭರತಪುರದ ಮುತ್ತಿಗೆ | ೧೮೨೬ |
| ಕಂಪನಿಯ ಸನದಿನ ವಿಚಾರಣೆ (೩ನೆಯ ಸಾರೆ) | ೧೮೩೩ |
| ಕೊಡಗು ಖಾಲಸಾ ಆಯಿತು. | ೧೮೩೫ |
| ಅಫಗಾನರ ೧ನೆಯ ಯುದ್ಧ | ೧೮೩೮—೪೨ |
| ಸಿಂಧಪ್ರಾಂತ ಖಾಲಸಾ ಆದದ್ದು | ೧೮೪೩ |
| ಗ್ವಾಲೇರದ ಒಪ್ಪಂದ | ೧೮೪೩ |
| ಸೀಖರ ೧ನೆಯ ಯುದ್ಧ | ೧೮೪೫-೪೬ |

| | |
|---|---|
| ಸಾಯಮನ್ ಕಮಿಶನ್ | ೧೯೨೭—೨೮ |
| ೧ನೆಯ ರಾವುಂಡ ಟೇಬಲ್ ಕಾನ್ಫರನ್ಸ | ೧೯೩೦ |
| ೨ನೆಯ ,, ,, ,, | ೧೯೩೧ |
| ೩ನೆಯ ,, ,, ,, | ೧೯೩೨ |
| ಶುಭ್ರಪತ್ರಿಕೆಯನ್ನು ಪ್ರಸಿದ್ಧಿಸಿದ್ದು | ಮಾರ್ಚ ೧೯೩೩ |
| ಜಾಯಿಂಟ ಸಿಲೆಕ್ಟ ಕಮಿಟಿಯ ಆರಂಭ | ಎಪ್ರಿಲ್ ೧೯೩೩ |
| ,, ,, ,, ರಿಪೋರ್ಟು ಪ್ರಸಿದ್ಧವಾಯಿತು | ನವ್ಹಂಬರ ೧೯೩೪ |
| ಹಿಂದುಸ್ತಾನದ ಕಾಯ್ದೆ ಪಾಸಾಯಿತು | ಅಗಸ್ಟ ೧೯೩೫ |
| ಪಂಚಮ ಜಾರ್ಜ ಬಾದಶಾಹರ ನಿಧನ | ೧೯೩೬ |
| ಎಂಟನೆಯ ಎಡ್ವರ್ಡ ಬಾದಶಾಹರ ರಾಜ್ಯತ್ಯಾಗ | ೧೯೩೭ |
| ಆರನೆಯ ಜಾರ್ಜರು ಬಾದಶಾಹರಾದದ್ದು | ೧೯೩೭ |
| ಹಿಂದುಸ್ತಾನದ ಕಾಯ್ದೆಯಂತೆ ಕಾರಭಾರದ ಆರಂಭ | ಎಪ್ರಿಲ್ ೧೯೩೭ |
| ಆರನೆಯ ಜಾರ್ಜ ಬಾದಶಾಹರ ಪಟ್ಟಾಭಿಷೇಕ | ಮೇ ೧೯೩೭ |
| ೨ನೆಯ ಮಹಾ ಯುದ್ಧ | ೧೯೩೯ ರಿಂದ ಸಾಗಿದೆ. |
| ಸರ್ ಕ್ರಿಪ್ಸರು ಹಿಂದುಸ್ಥಾನಕ್ಕೆ ಬಂದದ್ದು | ೧೯೪೨ |

# ಆವರ್ತನೆಯು ಮತ್ತು ಪರೀಕ್ಷೆಯ ಪ್ರಶ್ನೆಗಳು

೧. ರಾಜಾರಾಮ, ಬಾಜೀರಾವ, ಬಾಳಾಜಿ, ಹಜಾಮ ಉಲ್ಮುಲ್ಕ, ನಾನಾ ಫಡಣವೀಸ, ಹೈದರ ಅಲಿ, ರಣಜಿತಸಿಂಗ, ಇವರಲ್ಲಿ ಬೇಕಾದ ನಾಲ್ವರ ಚರಿತ್ರೆಗಳನ್ನು ಸಂಕ್ಷಿಪ್ತವಾಗಿ ಬರೆಯಿರಿ.

೨. ಶಿವಾಜಿಯ ಯೋಗ್ಯತೆ, ಡೂಪ್ಲೆಯ ಮಹತ್ವಾಕಾಂಕ್ಷೆ, ಕ್ಲೈವನ ಹಂಚಿಕೆ, ಚಿಮಣಾಜಿಯ ಪರಾಕ್ರಮ, ನಜೀಬಖಾನನ ಸಾಹಸ, ಟೀಪುಸುಲ್ತಾನನ ಪರಾಕ್ರಮ, ಮಾಂಟಫರ್ಡ ಸುಧಾರಣೆಗಳು, ಶುಭ್ರಪತ್ರಿಕೆ ಇವುಗಳ ವಿಷಯವಾಗಿ ಗೊತ್ತಿರುವುದನ್ನು ಸ್ವಲ್ಪದರಲ್ಲಿ ಬರೆಯಿರಿ

೩. ಮರಾಠರ ಉತ್ಕರ್ಷದ ಮತ್ತು ಫ್ರೇಂಚರ ಅಪಕರ್ಷದ ಕಾರಣಗಳಾವವು ?

ಅಥವಾ

ಪ್ಲಾಸಿಯ ಯುದ್ಧದ ಮಹತ್ವವನ್ನೂ ಶಿಪಾಯಿಗಳ ಬಂಡಾಯದ ಪರಿಣಾಮವನ್ನೂ ವಿವರಿಸಿರಿ.

೪. ಕೆಳಗಿನ ಮಾತುಗಳಿಗೆ ತಕ್ಕ ಉದಾಹರಣೆಗಳನ್ನು ನೀವು ಕಲಿತ ಇತಿಹಾಸದಿಂದ ಆರಿಸಿಕೊಂಡು ಅವು ಹೇಗೆ ತಕ್ಕವುಗಳೆಂಬವನ್ನು ತೋರಿಸಿರಿ.

ಅ. ವ್ಯವಸ್ಥಿತವಾದ ಸಣ್ಣ ಸೈನ್ಯವು ಅವ್ಯವಸ್ಥಿತವಾದ ದೊಡ್ಡ ಸೈನ್ಯವನ್ನು ಸೋಲಿಸುವದು.

ಆ. ಮನೆ ಜಗಳದಲ್ಲಿ ಆಗದವರನ್ನು ನೆರವಿಗೆ ಕರೆದರೆ ಮನೆಯು ಅವರ ಪಾಲಾಗುವದು.

೫. ಸಹಾಯಕ ಸೈನ್ಯ ( ಸಬಸಿಡಿಯರಿ ) ಪದ್ಧತಿ, ಚೌಥಾಯಿ-ಸರದೇಶಮುಖಿ, ಸ್ಥಾನಿಕ ಸ್ವರಾಜ್ಯ, ಆರ್ಮ್ಸ ಆಕ್ಟ, ಸಾಯಮನ್ ಕಮಿಶನ್, ಇಂಚಕೇಪ್ ಕಮಿಟಿ, ಇಸೆಯು ದುಂಡು ಮೇಜಿನ ಪರಿಷತ್ತು ಇವುಗಳ ಸಂಬಂಧದ ಟಿಪ್ಪಣಿಗಳನ್ನು ಕೊಡಿರಿ.

**ಅಥವಾ**

ಲಾರ್ಡ ಕಾರ್ನವಾಲೀಸ, ಲಾರ್ಡ ಹೆಸ್ಟಿಂಗ್ಸ, ೨ನೆಯ ಲಾರ್ಡ ಮಿಂಟೊ, ಲಾರ್ಡ ರೀಡಿಂಗ, ಲಾರ್ಡ ವಿಲಿಂಗ್ಡನ್, ಲಾರ್ಡ ಲಿನ್‌ಲಿಥಗೋ ಇವರ ಆಳಿಕೆಯಲ್ಲಿ ಸಂಭವಿಸಿದ ಮುಖ್ಯ ಸಂಗತಿಗಳಾವವು?

೬. ಯುರೋಪದವರು ಹಿಂದುಸ್ಥಾನಕ್ಕೆ ಬರುವದಕ್ಕೋಸ್ಕರ ಜಲ ಮಾರ್ಗವನ್ನೇ ಏಕೆ ಗೊತ್ತುಹಚ್ಚಬೇಕಾಯಿತು? ಈ ದೇಶಕ್ಕೆ ಬಂದ ಯುರೋಪಿಯನರಲ್ಲಿ ರಾಜ್ಯಸ್ಥಾಪನೆಯ ಪ್ರಯತ್ನವನ್ನು ಯಾರು ಯಾರು ಮಾಡಿದರು? ಕೊನೆಗೆ ಯಾರಿಗೆ ಏಕೆ ಜಯದೊರೆಯಿತು?

**ಇಲ್ಲವೆ**

ಲೋಕಪ್ರಿಯರಾದ ಇಬ್ಬರು ವ್ಹಾಯಿಸರಾಯರ ಆಳಿಕೆಗಳನ್ನು ಸಂಪೂರ್ಣವಾಗಿ ವಿವರಿಸಿರಿ.

೭. ಹಿಂದುಸ್ಥಾನದ ನಕಾಶವನ್ನು ತೆಗೆದು ಅದರಲ್ಲಿ ಕೆಳಗಿನ ಸ್ಥಳಗಳನ್ನು ಗುರುತಿಸಿರಿ; ಮತ್ತು ಅವುಗಳೊಳಗಿನ ಬೇಕಾದ ನಾಲ್ಕು ಸ್ಥಳಗಳ ಐತಿಹಾಸಿಕ ಮಹತ್ವವನ್ನು ಹೇಳಿರಿ.

ಅಲಹಾಬಾದ, ಸಾಲ್ಹೇರ, ವಾಂಡಿವಾಶ, ಪಾನಿಪತ, ಮಂಗಳೂರು, ಪುರಂದರ, ಡೀಗ, ಚಿಸಿಯಾನವಾಲಾ, ಚಿತ್ರಳ, ಸೇಗಾವುಲಿ.

**ಅಥವಾ**

ವಾಯುವ್ಯ ಸರಹದ್ದಿನಲ್ಲಿ ಆದ ಯುದ್ಧ ಹಾಗು ಒಪ್ಪಂದಗಳು ಯಾವ ಧೋರಣೆಯಿಂದ ಆದವೆಂಬದನ್ನೂ ಮೈಸೂರಿನ ಕೊನೆಯ ಯುದ್ಧದ ಪರಿಣಾಮವನ್ನೂ ವಿವರಿಸಿರಿ.

೮. ರಾಜಾ ಛತ್ರಸಾಲ, ತಾನ್ಹಾಜಿ ಮಾಲುಸರೆ, ಕೌಂಟ ಲಾಲಿ, ಪರಶುರಾಮಭಾವು, ನೆಪೋಲಿಯನ್, ಸರ್ ಜಾನ್ ಮಾಲಕಮ್, ಜನರಲ್

